# ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟ : ಒಂದು ಅಧ್ಯಯನ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ಬಾಬು.ಬಿ.ಸಿ.

ಮಾರ್ಗದರ್ಶಕರು

ಡಾ. ಆಂಜನೇಯ.ಎಸ್., ಎಂ.ಎ., ಪಿಎಚ್.ಡಿ.,

ಪ್ರಾಂಶುಪಾಲರು

ವಿಶ್ವವಿದ್ಯಾನಿಲಯ, ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು.






ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

ಕರ್ನಾಟಕ ಸಂಘ (ರಿ.), ಮಂಡ್ಯ.

ವಿಶ್ವವಿದ್ಯಾಲಯ ಹಂಪಿಯಿಂದ ಮಾನ್ಯತೆ ಪಡೆದಿದೆ)





2019

# ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟ : ಒಂದು ಅಧ್ಯಯನ

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

**ಸಂಶೋಧಕರು**

**ಬಾಬು.ಬಿ.ಸಿ.**

**ಮಾರ್ಗದರ್ಶಕರು**

**ಡಾ. ಆಂಜನೇಯ.ಎಸ್.,** ಎಂ.ಎ., ಪಿಎಚ್.ಡಿ.,

ಪ್ರಾಂಶುಪಾಲರು

ವಿಶ್ವವಿದ್ಯಾನಿಲಯ, ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು.



**ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

ಕರ್ನಾಟಕ ಸಂಘ (ರಿ.), ಮಂಡ್ಯ.

(ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಮಾನ್ಯತೆ ಪಡೆದಿದೆ)

**2019**

# <u>ಮಾರ್ಗದರ್ಶಕರ ದೃಢೀಕರಣ ಪತ್ರ</u>

**ಬಾಬು.ಬಿ.ಸಿ.** ಇವರು ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾಕೇಂದ್ರ, ಕರ್ನಾಟಕ ಸಂಘ (ರಿ.), ಮಂಡ್ಯ. (ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಮಾನ್ಯತೆ ಪಡೆದಿದೆ) ಈ ಸಂಸ್ಥೆಯ ಮೂಲಕ **ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟ : ಒಂದು ಅಧ್ಯಯನ** ಎಂಬ ವಿಷಯವನ್ನು ಕುರಿತು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಂಶೋಧಕರಾಗಿ ಸಂಶೋಧನೆ ನಡೆಸಿ, ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಈ ಮೊದಲು ಇವರು ಯಾವುದೇ ಪದವಿ ಅಥವಾ ಡಿಪ್ಲೊಮೊ ಪದವಿಗಾಗಿ ಬಳಸಿಕೊಂಡಿಲ್ಲ. ಈ ಅಭ್ಯರ್ಥಿ ನನ್ನೊಂದಿಗೆ ಐದು ವರ್ಷಗಳು ಸಂಶೋಧನೆಯ ಕೆಲಸ ಮಾಡಿದ್ದಾರೆಂದು ಹಾಗೂ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಾದರಪಡಿಸಲು ನಾನು ಸಮ್ಮತಿಸುತ್ತೇನೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 16-11-2019

ಸ್ಥಳ : ಮಂಡ್ಯ

16/11/19

**ಡಾ. ಆಂಜನೇಯ.ಎಸ್., ಎಂ.ಎ., ಪಿಎಚ್.ಡಿ.,**
ಪ್ರಾಂಶುಪಾಲರು
ವಿಶ್ವವಿದ್ಯಾನಿಲಯ ಸಂಜೆ ಕಾಲೇಜು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

ಡಾ. ಎಸ್. ಆಂಜನೇಯ, ಎಂ.ಎ.,ಪಿಹೆಚ್.ಡಿ.,
ಮಾರ್ಗದರ್ಶಕರು
ಪ್ರಾಂಶುಪಾಲರು ಮತ್ತು ಸಹ ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ
ವಿಶ್ವವಿದ್ಯಾನಿಲಯ ಸಂಜೆ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಸಂಶೋಧಕರ ಪ್ರಮಾಣ ಪತ್ರ

**ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಎಂ.ಎಲ್.ಶ್ರೀಕಂಠೇಶ ಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ (ರಿ.), ಮಂಡ್ಯ. (ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಮಾನ್ಯತೆ ಪಡೆದಿದೆ) ಈ ಸಂಸ್ಥೆಯ ಮೂಲಕ ಡಾ. ಆಂಜನೇಯ.ಎಸ್, ಪ್ರಾಂಶುಪಾಲರು, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಮಹಾ ಪ್ರಬಂಧವನ್ನು ಸಂಪೂರ್ಣವಾಗಲಿ ಅಥವಾ ಭಾಗಶಃ ಆಗಲಿ ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಡಿಪ್ಲೊಮೋಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

B.C. Babu

ದಿನಾಂಕ : 16-11-2019

**ಬಾಬು.ಬಿ.ಸಿ.**

ಸ್ಥಳ : ಮಂಡ್ಯ

ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

# ಅಧ್ಯಾಯ–ಒಂದು

1.1 ಪ್ರವೇಶ

1.2 ಅಧ್ಯಯನದ ಮಹತ್ವ

1.3 ಅಧ್ಯಯನದ ಉದ್ದೇಶ

1.4 ಅಧ್ಯಯನದ ವಿಧಿ–ವಿಧಾನ

1.5 ಅಧ್ಯಯನದ ವ್ಯಾಪ್ತಿ ಹಾಗೂ ಇತಿಮಿತಿಗಳು

1.6 ಅಧ್ಯಯನದ ಸ್ವರೂಪ

1.7 ಅಧ್ಯಯನದ ಸಮೀಕ್ಷೆ

# ಅಧ್ಯಾಯ–ಒಂದು

## 1.1 ಪ್ರವೇಶ

ಚರಿತ್ರೆಯು ಸಮಾಜದಲ್ಲಿರುವ ವ್ಯಕ್ತಿಗಳ ಜೀವನವನ್ನು ಒಳಗೊಳ್ಳುತ್ತದೆ. ವ್ಯಕ್ತಿಗೂ ಮತ್ತು ಸಮಾಜದ ನಡುವೆ ಅವಿನಾಭಾವ ಸಂಬಂಧವಿದೆ. ವ್ಯಕ್ತಿಯು ತನ್ನ ಜೀವಿತಾವಧಿಯಲ್ಲಿ ಸಮಾಜಕ್ಕೆ ಅಪಾರವಾದ ಕಾಣಿಕೆಯನ್ನು ಸಲ್ಲಿಸಿರುತ್ತಾರೆ. ಸಮಾಜದಲ್ಲಿ ದಿನೇ–ದಿನೇ ಅಧಃಪತನಗೊಳ್ಳುತ್ತಿರುವ ಮಾನವೀಯ ಮೌಲ್ಯಗಳನ್ನು ಅಮೂಲಾಗ್ರವಾಗಿ ಬದಲಿಸಿ ಹೊಸ ಸಮಾಜದ ನಿರ್ಮಾಣಕ್ಕೆ ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸುತ್ತಾನೆ. ಅಂತಹ ವ್ಯಕ್ತಿಗಳ ಬದುಕು ಚರಿತ್ರೆಯಲ್ಲಿ ದಾಖಲಾಗಿ ಮುಂದಿನ ಪೀಳಿಗೆಗೆ ಅವರ ಕಾರ್ಯಗಳು ಮಾದರಿಯಾಗುತ್ತವೆ.

ಸಮಾಜದ ಜನರು ನಿರಂತರ ದೌರ್ಜನ್ಯಕ್ಕೊಳಗಾಗಿ ಅರಿವಿನ ದಾರಿ ಕಾಣದೆ ಕಂಗೆಟ್ಟು ಕುಳಿತಿದ್ದಾಗ ಅವರಿಗೆ ಧೈರ್ಯ, ಸಾಂತ್ವಾನ ಹೇಳಿ ಅವರಿಗೆ ಸ್ಫೂರ್ತಿಯಾಗಿ ನಿಂತು ಸಕಲರ ಅಭ್ಯುದಯಕ್ಕಾಗಿ ನಿಸ್ವಾರ್ಥ ಸೇವಾ ಮನೋಭಾವದಿಂದ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಮಹಾನ್ ವ್ಯಕ್ತಿಗಳು ಸಮಾಜದಲ್ಲಿ ಪ್ರಮುಖವಾದ ಪಾತ್ರ ವಹಿಸಿರುತ್ತಾರೆ. ವ್ಯಕ್ತಿಗಳ ಜೀವನ–ವಿಧಾನ, ಬದುಕು–ಘಟನಾವಳಿಗಳು, ಅವರು ತಮ್ಮ ಗುರಿ ಸಾಧನೆಗಾಗಿ ಪಟ್ಟ ಶ್ರಮ, ಎಡರು–ತೊಡರುಗಳು ಚರಿತ್ರೆಯಲ್ಲಿ ದಾಖಲಿಸಬೇಕಾದಂತಹ ವಿಚಾರಗಳು. ಅಂತಹ ವ್ಯಕ್ತಿಗಳ ವ್ಯಕ್ತಿತ್ವ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ನಿಲ್ಲುವಂತಹದ್ದು, ಒಬ್ಬ ವ್ಯಕ್ತಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಈ ಎಲ್ಲಾ ಕ್ಷೇತ್ರಗಳಲ್ಲೂ ಗಣನೀಯವಾಗಿ ಸೇವೆ ಸಲ್ಲಿಸಿರುತ್ತಾನೆ. ಅಂತಹ ಮಹತ್ವದ ಗುರಿಗಳ ಸಾಧನೆಗಾಗಿ ಅವನು ಹಾಕಿಕೊಂಡ ಕಾರ್ಯಕ್ರಮಗಳು ಯಾವುವು, ಇವುಗಳನ್ನು ಹೇಗೆ ಸಾಧಿಸಿದ ಎಂಬುದು ಬಹಳ ಮುಖ್ಯ. ಒಂದು ನೆಲೆಗಟ್ಟಿನಲ್ಲಿ ದಾಖಲುಗೊಂಡ ಅವರ ಬದುಕು ಅವುಗಳ ಮೌಲ್ಯ ಮಾಪನಕ್ಕೆ ಹಿಡಿದ ಕೈಗನ್ನಡಿಯೇ ಜೀವನ ಚರಿತ್ರೆಯಾಗಿದೆ. ಜೀವನ ಚರಿತ್ರೆಗಳು ವ್ಯಕ್ತಿಯ ಸಂಪೂರ್ಣ ಜೀವನವನ್ನು ಬಿಂಬಿಸುತ್ತವೆ. ಅವುಗಳು ಇಡೀ ವ್ಯವಸ್ಥೆಯ ಮೇಲೆ ಪ್ರಭಾವ ಬೀರುತ್ತವೆ. ಅಲ್ಲದೇ ಮುಂದಿನ ಪೀಳಿಗೆಗೆ ಮಾದರಿಯಾಗುತ್ತವೆ. ಅಂತಹ ವ್ಯಕ್ತಿಗಳ ಸಾಲಿನಲ್ಲಿ ಜಿ. ಮಾದೇಗೌಡರ ಚಿಂತನೆ ಹಾಗೂ ಹೋರಾಟ ಸಮಾಜ ನಿರ್ಮಾಣದಲ್ಲಿ ಸಹಕಾರಿಯಾಗುತ್ತವೆ.

ಜಿ.ಮಾದೇಗೌಡರು ಮಂಡ್ಯ ಜಿಲ್ಲೆಯ ಜನರಿಗೆ ಅನೇಕ ಕಾರ್ಯಗಳನ್ನು ರೈತರಿಗೆ, ಯುವಜನಾಂಗಕ್ಕೆ, ವ್ಯಾಪಾರೋಧ್ಯಮಿಗಳಿಗೆ, ಮಹಿಳೆಯರಿಗೆ, ವಿದ್ಯಾರ್ಥಿಗಳಿಗೆ, ಕೂಲಿಕಾರ್ಮಿಕರಿಗೆ, ಅನುಕೂಲವಾಗುವಂತೆ ಶ್ರಮಿಸಿದ್ದಾರೆ. ಇದಕ್ಕೆ ಮೂಲ ಕಾರಣ ಜಿ. ಮಾದೇಗೌಡರು ರೈತ ಕುಟುಂಬದಲ್ಲಿ ಜನಿಸಿ ರೈತರ ಬದುಕನ್ನು ಸಂಪೂರ್ಣವಾಗಿ

ಅರ್ಥಮಾಡಿಕೊಂಡಿದ್ದವರು, ಹಳ್ಳಿಯ ಜನರ ಜೀವನ ಸುಖಕರವಾಗಿರಲೆಂದು ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕತೆಯ ಅಭಿವೃದ್ಧಿಯು ಅಗತ್ಯವೆಂದು ತಿಳಿದು ಗ್ರಾಮಾಂತರ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ತೆರೆದಿದ್ದಾರೆ. ಉದಾಹರಣೆಗೆ ಕಾಳಮುದ್ದನ ದೊಡ್ಡಿಯಲ್ಲಿ ಭಾರತೀ ವಿದ್ಯಾಸಂಸ್ಥೆ ಸ್ಥಾಪನೆ ಮಾಡಿರುವುದು ಇವರು ಶಿಕ್ಷಣಕ್ಕೆ ಎಂತಹ ಮಹತ್ವ ನೀಡುತ್ತಿದ್ದರು ಎಂಬುದರ ಬಗ್ಗೆ ಅರಿವು ಮೂಡುತ್ತದೆ ಹಾಗೂ ಔಷಧ ವಿಜ್ಞಾನ, ತಾಂತ್ರಿಕ ಶಿಕ್ಷಣ ವಿದ್ಯಾಲಯಗಳನ್ನು ಆರಂಭಿಸಿ ಹಳ್ಳಿಯ ಮಕ್ಕಳ ಶಿಕ್ಷಣಕ್ಕೆ ದಾರಿ ತೋರಿದ್ದಾರೆ. ರೈತರ ಉಪಯೋಗಕ್ಕಾಗಿ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸಾಕಷ್ಟು ಶ್ರಮವಹಿಸಿದ್ದಾರೆ. ಕ್ಷಯ ರೋಗ ನಿವಾರಣಾ ಕೇಂದ್ರ, ಸ್ವಗ್ರಾಮದಲ್ಲಿ ಆರೋಗ್ಯ ಕೇಂದ್ರ ಸ್ಥಾಪನೆಗೆ ಕಾರಣರಾಗಿದ್ದಾರೆ. ಹಾಗೂ ಧಾರ್ಮಿಕ ಭಾವನೆ ಇರುವ ಇವರು ಶ್ರೀ ಆತ್ಮಲಿಂಗೇಶ್ವರ ದೇವಾಲಯವನ್ನು ನಿರ್ಮಿಸಿದ್ದಾರೆ. ಸುಮಾರು 40 ವರ್ಷಗಳಿಗಿಂತಲೂ ಹೆಚ್ಚು ಕಾಲ ರಾಜಕೀಯದಲ್ಲಿದ್ದು ತಾಲ್ಲೂಕು ಬೋರ್ಡ್ ಸದಸ್ಯರಾಗಿ, ಶಾಸಕರಾಗಿ, ಸಚಿವರಾಗಿ, ಲೋಕಸಭಾ ಸದಸ್ಯರಾಗಿ ಹಲವಾರು ಜನಪರ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡವರು. ರೈತ ಹೋರಾಟಗಳಿಂದ ಬೆಳೆದು ಬಂದ ಜಿ. ಮಾದೇಗೌಡರು ಜನರಿಗೆ ಸಂಘಟನೆ ಹಾಗೂ ಚಳುವಳಿಯ ಪ್ರಜ್ಞೆ ಮೂಡಿಸಲು ಅವಿರತ ಪ್ರಯತ್ನ ಮಾಡಿದರು. ಕಾವೇರಿ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದುಕೊಂಡು ಜಿಲ್ಲೆಗೆ ಆಗುತ್ತಿದ್ದ ಅನ್ಯಾಯದ ವಿರುದ್ಧ ಧ್ವನಿ ಎತ್ತಿ ಕೃಷ್ಣರಾಜ ಸಾಗರದಿಂದ ಕಾಲುವೆಗಳ ಮೂಲಕ ಗದ್ದೆಗಳಿಗೆ ನೀರು ಬಿಡಿಸುವ ಮೂಲಕ ಮಂಡ್ಯ ರೈತರಿಗೆ ಜೀವನ ಕಟ್ಟಿಕೊಳ್ಳಲು ದಾರಿಮಾಡಿಕೊಟ್ಟಿದ್ದಾರೆ.

ಏಕೀಕರಣ ಪೂರ್ವದಲ್ಲಿ ಮೈಸೂರು ಸಂಸ್ಥಾನದಲ್ಲಿ ನಡೆದ ಪ್ರಮುಖ ಚಳುವಳಿಗಳಾದ ಇರ್ವಿನ್‌ನಾಲಾ ಚಳುವಳಿ–1931ರಲ್ಲಿ ಶಿವಪುರ ಧ್ವಜ ಸತ್ಯಾಗ್ರಹ–1938ರಲ್ಲಿ, ಕ್ವಿಟ್ ಇಂಡಿಯಾ ಚಳುವಳಿ–1942ರಲ್ಲಿ, ಸ್ವಾತಂತ್ರ್ಯ ನಂತರ ನಡೆದ ಮೈಸೂರು ವಿಲೀನ ವಿರೋಧಿ ಚಳುವಳಿ–1955ರಲ್ಲಿ, ಏಕೀಕರಣ ಚಳುವಳಿಗಳಲ್ಲಿ ಸಕ್ರಿಯವಾಗಿ ಮಂಡ್ಯ ಜಿಲ್ಲೆಯ ಮಹಾನ್ ಹೋರಾಟಗಾರರು ಭಾಗವಹಿಸಿದ್ದಾರೆ. ಅಂತಹ ಹೋರಾಟಗಾರರಲ್ಲಿ ಪ್ರಮುಖವಾಗಿ ಹೆಚ್.ಕೆ.ವೀರಣ್ಣಗೌಡ, ಕೆ.ವಿ.ಶಂಕರಗೌಡ, ಪಿ.ಎನ್.ಜವರಪ್ಪಗೌಡ, ಸಿಂಗಾರಿಗೌಡ, ಎ.ಜಿ.ಬಂದೀಗೌಡ, ಅರಕೆರೆಕೆಂಚಪ್ಪ, ಪ್ರಮುಖರಾಗಿದ್ದಾರೆ. ಇವರೊಂದಿಗೆ ಕಿರಿಯ ವಯಸ್ಸಿನಲ್ಲಿ ಜಿ.ಮಾದೇಗೌಡರು ಚಳುವಳಿಗಳಲ್ಲಿ ಭಾಗವಹಿಸಿದ್ದಾರೆ. ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿಗಳಲ್ಲಿ ಹಿರಿಯ ನಾಯಕರ ಮಾರ್ಗದರ್ಶನದಲ್ಲಿ ಚಳುವಳಿಗೆ ಧುಮುಕಿ ತಮ್ಮ ಪಾತ್ರ ನಿರ್ವಹಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ನಡೆದ ಮೈಸೂರು ವಿಲೀನ ವಿರೋಧಿ ಚಳುವಳಿಯಲ್ಲಿ ಏಕೀಕರಣದ ನಂತರ ಜಿಲ್ಲೆಯಲ್ಲಿ ನಡೆದ ಕಾವೇರಿ ಚಳುವಳಿ, ವರುಣಾ ನಾಲಾ ಚಳುವಳಿ, ಗೋಕಾಕ್ ಚಳುವಳಿಗಳಲ್ಲಿ ನಾಡು–ನುಡಿ–ಜಲ ವಿಷಯಗಳಿಗೆ

ಅನ್ಯಾಯವಾದಾಗ ವಿರೋಧಿಸಿ ಹೋರಾಟ ನಡೆಸಿದ್ದಾರೆ. ಈ ಚಳುವಳಿಯಲ್ಲಿ ಕೆ.ವಿ.ಶಂಕರಗೌಡ, ಜಿ.ಎಸ್.ಬೊಮ್ಮೇಗೌಡ, ಎಂ.ಕೆ. ಶಿವನಂಜಪ್ಪ, ಪಿ.ಎನ್.ಜವರಪ್ಪಗೌಡ, ಬಂಡೀಸಿದ್ದೇಗೌಡ, ಕೆ.ಹೆಚ್.ಶ್ರೀನಿವಾಸ್, ಕೆ.ಎಸ್.ಪುಟ್ಟಣ್ಣಯ್ಯ, ಕೆ.ಬೋರಯ್ಯ, ನಂಜುಂಡೇಗೌಡ, ಕೋಣಸಾಲ ನರಸರಾಜು, ಶ್ರೀಮತಿ ಸುನಂದ ಜಯರಾಂ, ಎಸ್.ಡಿ.ಜಯರಾಂ, ಎಂ.ಎಸ್.ಸಿದ್ದರಾಜು, ಎಂ.ಮಂಚೇಗೌಡ, ಎಸ್.ಎಂ.ಕೃಷ್ಣ, ಜೆ.ದೇವಯ್ಯ ಪ್ರಮುಖರು. ಇವರೆಲ್ಲರಿಗಿಂತಲೂ ಜಿ.ಮಾದೇಗೌಡರು ಮುಂಚೂಣಿಯ ಲ್ಲಿದ್ದರು. ಅಲ್ಲದೆ ತಮ್ಮದೆ ಆದ ಛಾಪು ಮೂಡಿಸಿ ಹೋರಾಟದ ನಾಯಕತ್ವವನ್ನು ವಹಿಸಿಕೊಳ್ಳುತ್ತಿದ್ದರು. ಈ ಮೂಲಕ ಜಿ. ಮಾದೇಗೌಡರು. ರೈತರು, ಮಹಿಳೆಯರು, ಕಾರ್ಮಿಕರು, ವಿದ್ಯಾರ್ಥಿಗಳು, ಸಮಾಜದ ಶೋಷಿತ ವರ್ಗದವರಿಗೆ ಅನ್ಯಾಯವಾದರೆ ಅವರಿಗೆ ನೆರವಿನ ಧ್ವನಿಯಾಗುವ ಹೋರಾಟಗಾರ ಎನಿಸಿದ್ದಾರೆ. 92ರ ಹರೆಯದಲ್ಲೂ ನಾಯಕತ್ವದ ಗುಣಗಳು ಇನ್ನು ಹಾಗೆಯೇ ಇರುವುದನ್ನು ಅಧ್ಯಯನಗಳ ವಿವಿಧ ಆಯಾಮಗಳನ್ನು ಹಾಗೂ ಅವುಗಳ ಪ್ರಭಾವ, ಪರಿಣಾಮಗಳನ್ನು ಪರಿಶೀಲನೆಗೆ ಒಳಪಡಿಸುವುದು ಇಲ್ಲಿನ ಆಶಯವೂ ಹೌದು.

ಜಿ.ಮಾದೇಗೌಡರು 1938ರಲ್ಲಿ ಶಿವಪುರ ಸತ್ಯಾಗ್ರಹದಲ್ಲಿ ಭಾಗವಹಿಸಿದವರಿಗೆ ನೀರು ಕೊಡುವ ಕಾಯಕ ಮಾಡುವ ಮುಖಾಂತರ ಮೈಸೂರು ಸಂಸ್ಥಾನದಲ್ಲಿ ನಡೆದ ಮೊದಲ ಧ್ವಜ ಸತ್ಯಗ್ರಹದಲ್ಲಿ ಸೇವೆ ಸಲ್ಲಿಸುವ ಅವಕಾಶವನ್ನು ಪಡೆದುಕೊಂಡರು. ಮುಂದೆ 1942ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಗುಪ್ತವಾಗಿ ಕರಪತ್ರ ವಿತರಣೆಯ ಮೂಲಕ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು. ತರುವಾಯ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಭಾಷೆಗಳ ಆಧಾರದ ಮೇಲೆ ರಾಜ್ಯಗಳನ್ನು ವಿಂಗಡಣೆ ಮಾಡುವ ಸಂದರ್ಭದಲ್ಲಿ 1953ರಲ್ಲಿ ಮೈಸೂರು ಯಥಾಸ್ಥಿತಿಯಲ್ಲಿರಲಿ ಎಂದು ಮೈಸೂರು ವಿಲೀನ ವಿರೋಧಿ ಚಳುವಳಿಯಲ್ಲಿ ಜಿಲ್ಲೆಯ ಹಿರಿಯ ನಾಯಕರಾದ ಕೆ.ವಿ.ಶಂಕರಗೌಡ, ಹೆಚ್.ಕೆ.ವೀರಣ್ಣಗೌಡರವರೊಂದಿಗೆ ಚಳುವಳಿ ಪರವಾಗಿ ಭಾಗವಹಿಸಿದ್ದರು. 1958ರಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ತಾಲ್ಲೂಕು ಬೋರ್ಡಿನ ಚುನಾವಣೆಯಲ್ಲಿ ಗೆಲುವು ಪಡೆದುಕೊಂಡು ತಾಲ್ಲೂಕು ಬೋರ್ಡಿನ ಅಧ್ಯಕ್ಷ ಹುದ್ದೆಯನ್ನು ಅಲಂಕರಿಸುವುದ ರೊಂದಿಗೆ ರಾಜಕೀಯ ಪ್ರವೇಶ ಮಾಡಿದರು. ತದನಂತರ 1962 ರಿಂದ 1989ರವರೆವಿಗೆ ಸತತವಾಗಿ 6 ಬಾರಿ ಕಿರುಗಾವಲು ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾದರು. ಅಲ್ಲದೆ 1981–1983ರವರೆಗೆ ಕರ್ನಾಟಕ ಸರ್ಕಾರದ ಗಣಿ, ಭೂ ವಿಜ್ಞಾನ ಮತ್ತು ಅರಣ್ಯ ಇಲಾಖೆಯ ಸಚಿವರಾಗಿ ರಾಜ್ಯದಲ್ಲೆಡೆ ಸಂಚರಿಸಿ ಅನೇಕ ಬದಲಾವಣೆಗಳನ್ನು ತಂದರು. ತರುವಾಯ 1989ರಲ್ಲಿ ಮಂಡ್ಯ ಜಿಲ್ಲೆಯ ಲೋಕಸಭಾ ಸದಸ್ಯರಾಗಿ ಆಯ್ಕೆಗೊಂಡರು. 1995–96ರಲ್ಲಿ ನಡೆದ ಲೋಕಸಭೆ ಚುನಾವಣೆಯಲ್ಲಿ ಪರಾಭವಗೊಂಡ ನಂತರ ರಾಜ್ಯ ರಾಜಕೀಯದಲ್ಲಿನ ಬದಲಾವಣೆಗಳಿಂದ ನೊಂದು ರಾಜಕೀಯದಿಂದ ದೂರ ಉಳಿದರು.

ಆದರೆ ಸಮಾಜಮುಖಿ ಚಿಂತನೆಗಳ ಮೂಲಕ ಸಂಪೂರ್ಣವಾಗಿ ತಮ್ಮ ಜೀವನವನ್ನು ಸಾಮಾಜಿಕ ಕಾರ್ಯಗಳಿಗೆ ತೊಡಗಿಸಿಕೊಂಡರು. ಮಂಡ್ಯ ಜಿಲ್ಲಾ ಜನತೆ ಅವರ ನಾಯಕತ್ವದಲ್ಲಿ ಇಂದಿಗೂ ಅನೇಕ ಚಳುವಳಿಯನ್ನು ರೂಪಿಸುತ್ತಿರುವುದು ಕಂಡುಬರುತ್ತದೆ. ಆದ್ದರಿಂದ ಜಿ. ಮಾದೇಗೌಡರ ಚಿಂತನೆ ಹಾಗೂ ಹೋರಾಟಗಳನ್ನು ಸಂಶೋಧನೆಯ ಅಧ್ಯಯನದಲ್ಲಿ ನಡೆಸಲಾಗಿದೆ. ಜೊತೆಗೆ ಅವರ ಚಿಂತನೆ ಹೋರಾಟಗಳನ್ನು ಪ್ರಸ್ತುತ ಸ್ಥಳೀಯ ಚರಿತ್ರೆಯ ರಚನೆಯಲ್ಲಿ ಹೇಗೆ ಪೂರಕವಾಗಿವೆ ಎಂಬುದನ್ನು ವ್ಯಕ್ತಿ ಅಧ್ಯಯನದ ಮೂಲಕ ಅರಿಯುವ ಪ್ರಯತ್ನ ಮಾಡಲಾಗಿದೆ.

## 1.2 ಅಧ್ಯಯನದ ಮಹತ್ವ

ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟ ಪ್ರಮುಖವಾದಂತಹುದು. ಜಿ.ಮಾದೇಗೌಡರು ಇಂದು ನಮ್ಮೊಂದಿಗಿದ್ದು ಮಾರ್ಗದರ್ಶಿಯಾಗಿದ್ದಾರೆ. ಇಂದಿನ ಹೋರಾಟಗಾರರಿಗೆ ಮಾರ್ಗದರ್ಶಿಯಾಗಿ ರೈತ ವಿರೋಧಿ ನೀತಿಗಳನ್ನು ಪ್ರಶ್ನಿಸುವಲ್ಲಿ ಜಿ. ಮಾದೇಗೌಡರು ಮುಂಚೂಣಿಯಲ್ಲಿರುತ್ತಾರೆ ಹಾಗೂ ಹೋರಾಟದಿಂದ ನ್ಯಾಯ ದೊರಕುವವರೆಗೂ ತಮ್ಮ ಹೋರಾಟವನ್ನು ನಿರಂತರವಾಗಿ ಮುಂದುವರೆಸಿಕೊಂಡು ಇತರೆ ಹೋರಾಟಗಾರರಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಇವರ ಒಂದು ಕರೆಗೆ ಜಿಲ್ಲೆಯ ರೈತರೆಲ್ಲಾ ಜಿಲ್ಲಾ ಕೇಂದ್ರಕ್ಕೆ ಆಗಮಿಸಿ ಚಳುವಳಿಗೆ ಬೆಂಬಲ ಸೂಚಿಸುತ್ತಾರೆಂದರೆ ಅದು ಗೌಡರ ನಾಯಕತ್ವದ ಪ್ರತೀಕವಾಗಿದೆ.

ಹೋರಾಟದ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿರುವ ಜನ ಸಾಮಾನ್ಯರು ಹಿಂದಿನಿಗಿಂತಲೂ ಪ್ರಸ್ತುತ ಹೋರಾಟದ ಪ್ರಜ್ಞೆ ಬೆಳೆಸಿಕೊಳ್ಳಬೇಕು. ಗ್ರಾಮಗಳ ಮಟ್ಟಕ್ಕೆ ಹೋರಾಟಗಳ ಪ್ರತಿಫಲ ಲಭಿಸುವಂತಾಗಬೇಕು ಇಂದು ಜಿ. ಮಾದೇಗೌಡರಂತಹ ಚಿಂತನಾತ್ಮಕ ಹೋರಾಟದ ಮನೋಭಾವನೆಯನ್ನು ಸಂಶೋಧನೆಯಿಂದ ಅರಿಯಬಹುದು. ಅವರ ಜೀವನ ಚರಿತ್ರೆಯನ್ನು ಅಧ್ಯಯನ ಮಾಡುವುದರಿಂದ ಯುವಜನಾಂಗದ ಹೋರಾಟಗಾರರಿಗೆ ಜೀವನದಲ್ಲಿ ನಡೆಸಿದ ಹೋರಾಟಗಳು ತರಬೇತಿಯಂತಿದೆ. ಜಿ.ಮಾದೇಗೌಡರು ರಾಜಕೀಯ ಪ್ರವೇಶ ಮಾಡಿ ರಾಜಕೀಯದಲ್ಲಿ ಹಂತ ಹಂತವಾಗಿ ಬೆಳೆದು ಜಿಲ್ಲೆಯ ರಾಜಕೀಯ ಮುತ್ಸದಿಯಾಗಿ ಬೆಳೆದರು. ಆರಂಭದಲ್ಲಿ ತಾಲ್ಲೂಕು ಬೋರ್ಡ್‌ನ ಸದಸ್ಯರಾಗಿ ಜೀವನ ಆರಂಭಿಸಿ ಶಾಸಕರಾಗುವುದರೊಂದಿಗೆ ಜಿಲ್ಲೆಯ ಲೋಕಸಭಾ ಸದಸ್ಯತ್ವವನ್ನೂ ಸಹ ಪಡೆದುಕೊಂಡರು. ಅವರು ಶ್ರೀಸಾಮಾನ್ಯ ವ್ಯಕ್ತಿಯಾಗಿ ಆಡಳಿತದಲ್ಲಿ ಉನ್ನತ ಸ್ಥಾನ ಹೊಂದಿದ್ದ ಅಂಶಗಳು ಸಂಶೋಧನಾ ಅಧ್ಯಯನದಲ್ಲಿ ಮಹತ್ವದೆನಿಸುತ್ತವೆ. ಅವರು ರೂಪಿಸಿದ ರೈತಪರ ಹೋರಾಟಗಳು ಮತ್ತು ಎದುರಿಸಿದ ಸವಾಲುಗಳು ಹಾಗೂ ಪಡೆದ

ಯಶಸ್ಸು ಮುಖ್ಯವಾಗಿ ಕಾವೇರಿ ನದಿ ನೀರಿನ ಹಂಚಿಕೆಯ ಹೋರಾಟ, ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿ ರಚನೆ ಇದರ ಕಾರ್ಯಚಟುವಟಿಕೆಯಲ್ಲಿ ಅವರ ಪಾತ್ರವನ್ನು ತಿಳಿಯುವುದು ಹಾಗೂ ಅವರು ಗಳಿಸಿದ ಯಶಸ್ಸು ಮತ್ತು ವಿಫಲತೆಯನ್ನು ಸಂಶೋಧನಾ ಅಧ್ಯಯನದಿಂದ ಅವಲೋಕಿಸಲಾಗಿದೆ. ಜಿ. ಮಾದೇಗೌಡರ ಚಿಂತನ್ಮಾಕ ಹೋರಾಟ ಮಂಡ್ಯ ಜಿಲ್ಲೆಯ ರೈತರಿಗೆ, ಯುವಜನಾಂಗಕ್ಕೆ ವ್ಯಾಪಾರೋಧ್ಯಮಿಗಳಿಗೆ, ಕೂಲಿಗಾರರಿಗೆ, ಆರ್ಥಿಕ ವಹಿವಾಟುದಾರರಿಗೆ, ಮಹಿಳೆಯರ ಮೇಲೆ ಪ್ರಭಾವ ಬೀರಿದೆ. ಅಲ್ಲದೇ ಅವರ ಜೀವನ ಎಲ್ಲಾ ವರ್ಗದ ಜನರ ಬೆಳವಣಿಗೆಗೆ ಸಹಾಯಕವಾಗಿದ್ದು ಸಂಶೋಧನಾ ಅಧ್ಯಯನದ ಪ್ರಮುಖ ಅಂಶವಾಗಿದೆ. ಕರ್ನಾಟಕ ಸರ್ಕಾರದಲ್ಲಿ ಮಂತ್ರಿಗಳಾಗಿ ಇವರು ನೀಡಿದ ಸೇವೆಯಲ್ಲಿ ಸಹಕಾರ ಸಂಘಗಳ ಸ್ಥಾಪನೆಯ ಮೂಲಕ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಬದಲಾವಣೆಗೆ ಕಾರಣವಾದವು. ಜಿಲ್ಲೆಯಲ್ಲಿ ಗಾಂಧಿ ಭವನದ ಸ್ಥಾಪನೆ ಮತ್ತು ಗಾಂಧಿಜಿಯವರ ತತ್ವ ಹಾಗೂ ಸಿದ್ಧಾಂತಗಳ ಅನುಷ್ಠಾನದಲ್ಲಿ ಜಿ. ಮಾದೇಗೌಡರು ಕೈಗೊಂಡಿರುವ ಯೋಜನೆಗಳು ಮತ್ತು ಗ್ರಾಮೀಣಾಭಿವೃದ್ಧಿಯಲ್ಲಿನ ಕೊಡುಗೆಗಳು ಹಾಗೂ ಇತರೆ ಕ್ಷೇತ್ರಗಳಿಗೆ ಅವರು ಮಾಡಿರುವ ಕಾರ್ಯಗಳು ಸಂಶೋಧನೆಯ ಮಹತ್ವವನ್ನು ಹೆಚ್ಚಿಸಿದೆ. ಇಲ್ಲಿ ವ್ಯಕ್ತಿಗೆ ಮಹತ್ವ ನೀಡದೆ ಸಾಧ್ಯವಾದಷ್ಟು ಅವರ ಕಾರ್ಯಚಟುವಟಿಕೆಗಳನ್ನ ವಸ್ತುನಿಷ್ಠವಾಗಿ ಅಧ್ಯಯನ ಕೈಗೊಂಡು ಹೊಸ ಒಲವುಗಳನ್ನು ಕಂಡುಕೊಳ್ಳಲು ಯತ್ನಿಸಲಾಗಿದೆ. ಅವರ ಹೋರಾಟಗಳನ್ನು ರಾಜ್ಯ ಮತ್ತು ಜಿಲ್ಲೆಯ ಸಮಕಾಲೀನ ಹೋರಾಟಗಾರರೊಂದಿಗೆ ತೌಲನಿಕವಾಗಿ ಪರಿಶೀಲಿಸಿ, ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

## 1.3 ಅಧ್ಯಯನದ ಉದ್ದೇಶ

ಜಿ.ಮಾದೇಗೌಡರ ಬಾಲ್ಯ, ಶಿಕ್ಷಣ, ಕೌಟುಂಬಿಕ ಪರಿಸರ, ಅವರ ಮೇಲೆ ಬೀರಿದ ಗಾಂಧೀ ಪ್ರಭಾವ, ರಚನಾತ್ಮಕ ಕಾರ್ಯಗಳು ವೃತ್ತಿ ಜೀವನದ ಆರಂಭದ ಬಗ್ಗೆ ವಸ್ತುನಿಷ್ಠವಾಗಿ ಅಧ್ಯಯನ ಮಾಡಲಾಗಿದೆ. ಜಿ. ಮಾದೇಗೌಡರು ತಮ್ಮ ಹೋರಾಟಗಳಲ್ಲಿ ರೈತರ ಸಮಸ್ಯೆಗಳಿಗೆ ಹೋರಾಟ ನಡೆಸಿ ಅವರಿಗೆ ನ್ಯಾಯದೊರಕಿಸಿಕೊಡಲು ಪ್ರಯತ್ನಿಸಿದ್ದಾರೆ. ಪ್ರಮುಖವಾಗಿ ವರುಣಾ ನಾಲಾ ಚಳುವಳಿ, ಕಾವೇರಿ ನದಿ ನೀರಿನ ಹಂಚಿಕೆಯ ಚಳುವಳಿ, ಕಬ್ಬಿನ ಬಾಕಿಗಾಗಿ ರಸ್ತೆ ತಡೆ ಚಳುವಳಿ, ರೈತರಿಗೆ ಮಂಡ್ಯದ ಮೈಷುಗರ್ ಕಾರ್ಖಾನೆಯಿಂದ ಬರಬೇಕಾದ ಬೇಬಾಕಿಯನ್ನು ಕೊಡಲಿಸಲಿಕ್ಕೆ ರೈತ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಈ ಹೋರಾಟಗಳಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದ್ದಾರೆ ಎಂಬುದಾಗಿ ಅಧ್ಯಯನದಿಂದ ಅರಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಜಿ.ಮಾದೇಗೌಡರ ರಾಜಕೀಯ ಜೀವನಕ್ಕೆ ಸಂಬಂಧಿಸಿದಂತೆ, ತಾಲ್ಲೋಕು ಬೋರ್ಡ್‌ನ ಸದಸ್ಯರಾಗುವ ಮೂಲಕ ರಾಜಕೀಯ ಜೀವನವನ್ನು ಆರಂಭಿಸಿದ್ದು, ವಿಧಾನಸಭಾ ಸದಸ್ಯರಾಗಿ, ಸಚಿವರಾಗಿ ಲೋಕಸಭಾ ಸದಸ್ಯರಾಗಿದ್ದರು. ಅಲ್ಲದೆ ಸದನಗಳಲ್ಲಿ ಅವರು ಸಮಾಜವನ್ನು ಪ್ರಮುಖವಾಗಿರಿಸಿಕೊಂಡು ನೆಲ-ಜಲ, ನಾಡು-ನುಡಿ, ಇವುಗಳಿಗೆ ಸಂಬಂಧಪಟ್ಟಂತೆ ಸಭಾಧ್ಯಕ್ಷರು, ಸಚಿವರು, ಮುಖ್ಯಮಂತ್ರಿಗಳ ಗಮನಕ್ಕೆ ತಂದು ರಕ್ಷಣೆಗಾಗಿ ಗಾಂಧೀತತ್ವದ ಚಿಂತನೆಗಳನ್ನು ವ್ಯಕ್ತಪಡಿಸಿದ್ದಾರೆ. ಇವುಗಳನ್ನು ವಿಸ್ತಾರವಾಗಿ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಜಿ. ಮಾದೇಗೌಡರು ಕೈಗೊಂಡ ಕಾರ್ಯಕ್ರಮಗಳು, ವಿಧ್ಯಾರ್ಥಿಗಳು, ಮಹಿಳೆಯರು, ಯುವಜನಾಂಗ, ರೈತಾಪಿವರ್ಗ, ಕಾರ್ಮಿಕರಿಗೆ ಸಹಾಯಕವಾಗಿದ್ದನ್ನು ವಿಮರ್ಶಾತ್ಮಕವಾಗಿ ಅಧ್ಯಯನದಿಂದ ಗುರುತಿಸುವ ಅಗತ್ಯ ಇದೆ.

ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟಗಳು ಜನಪರ ಹೋರಾಟಗಳಾಗಿ ಯಶಸ್ವಿಯಾಗಲು ಗಾಂಧಿ ತತ್ವಗಳಿಂದ ಪ್ರಭಾವಗೊಂಡಿದ್ದನ್ನು ಸಂಶೋಧನಾ ಅಧ್ಯಯನದಲ್ಲಿ ಅರಿಯಲಾಗಿದೆ. ಸಮಾಜದಲ್ಲಿ ಇರುವಂತಹ ಬಡತನ, ಅನಕ್ಷರತೆ, ನಿರುದ್ಯೋಗ ಇವುಗಳನ್ನು ಬೇರುಸಮೇತ ಕಿತ್ತುಹಾಕುವ ಸಲುವಾಗಿ ಜಿ. ಮಾದೇಗೌಡರು ರಚನಾತ್ಮಕ ಕಾರ್ಯಗಳನ್ನು ರೂಪಿಸಿ ನಡೆಸಿಕೊಂಡು ಬಂದಿದ್ದಾರೆ. ಈ ರಚನಾತ್ಮಕ ಕಾರ್ಯಗಳನ್ನು ಸ್ಥಳೀಯ ಜನರಿಗೆ ತಲುಪಿಸುವಲ್ಲಿ ಸಫಲತೆಯನ್ನು ಹೊಂದಿದ್ದಾರೆ. ಇದನ್ನು ಅಧ್ಯಯನದಲ್ಲಿ ವಿಶ್ಲೇಷಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಸಮಾಜದ ಕೆಳಸ್ತರದ ಜನರಿಗೆ ಹಾಗೂ ಹಿಂದುಳಿದ ವರ್ಗದವರಿಗೆ ಪ್ರತ್ಯೇಕ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಮೂಲಕ ಹಲವಾರು ಸುಧಾರಣೆಗಳನ್ನು ಜಿ. ಮಾದೇಗೌಡರು ಕೈಗೊಂಡಿದ್ದನ್ನು ಸಂಶೋಧನಾ ಅಧ್ಯಯನದಲ್ಲಿ ಅನಾವರಣಗೊಳಿಸುವ ಅಗತ್ಯ ಇದೆ. ರಾಜಕೀಯ ಅಧಿಕಾರವನ್ನು ನಾಯಕರುಗಳು ಸ್ವಾರ್ಥತಕ್ಕೂ ಹಾಗೂ ತಮ್ಮ ಕುಟುಂಬಕ್ಕೆ ಅನುಕೂಲ ಮಾಡಿಕೊಳ್ಳಲು ಬಳಸಿಕೊಳ್ಳುತ್ತಾರೆ. ಆದರೆ ಜಿ.ಮಾದೇಗೌಡರು ಇದಕ್ಕೆ ಹೊರತಾಗಿದ್ದು, ಅಧಿಕಾರ ಜನಸೇವೆ ಮಾಡುವುದಕ್ಕೆ ಇರುವುದು ಎಂಬುದನ್ನು ಸಾಬೀತು ಮಾಡಿದ್ದಾರೆ. ಇದನ್ನು ಸಂಶೋಧನಾ ಅಧ್ಯಯನದಲ್ಲಿ ಪರಿಶೀಲಿಸುವ ಅಗತ್ಯ ಇದೆ. ಜಿ.ಮಾದೇಗೌಡರು ಬಾಲ್ಯದಿಂದಲೂ ಮಹಾತ್ಮಗಾಂಧಿಜಿಯವರ ತತ್ವ ಆದರ್ಶಗಳನ್ನು ಚಾಚುತಪ್ಪದೇ ಮೈಗೂಡಿಸಿಕೊಂಡು, ಸಮಾಜದಲ್ಲಿರುವ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಪ್ರಯತ್ನ ನಡೆಸಿದ್ದಾರೆ ಎಂಬುದನ್ನು ಅಧ್ಯಯನದಲ್ಲಿ ಗುರುತಿಸುವ ಪ್ರಯತ್ನ ಹೌದು. ಒಟ್ಟಾರೆಯಾಗಿ ಜಿ. ಮಾದೇಗೌಡರ ಚಿಂತನೆ ಹಾಗೂ ಹೋರಾಟಗಳು ಸಮಾಜಕ್ಕೆ ಉಪಯುಕ್ತವಾಗಿದ್ದು, ರಾಜಕೀಯ ಹೋರಾಟಗಳಿಂದ ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ಜಿಲ್ಲೆಗೆ ದೊಡ್ಡ ಕೊಡುಗೆ ನೀಡಿದ್ದಾರೆ ಎಂಬುದನ್ನು ಸಂಶೋಧನೆಯ ಅಧ್ಯಯನದಲ್ಲಿ ಕಂಡುಕೊಳ್ಳುವ ಆಶಯವಾಗಿದೆ.

## 1.4 ಅಧ್ಯಯನದ ವಿಧಿ–ವಿಧಾನ

ಜಿ.ಮಾದೇಗೌಡರ ವ್ಯಕ್ತಿಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಅವರ ಚಿಂತನೆಗಳು, ಚಳವಳಿಯ ರೂಪಗಳು ರಾಜಕೀಯ ನಾಯಕತ್ವದ ಬೆಳವಣಿಗೆಯ ಹಂತಗಳಿಗೆ ಸಂಬಂಧಿಸಿದಂತೆ ಖುದ್ದಾಗಿ ಅವರೊಡನೆ ಸಂದರ್ಶನ ನಡೆಸಿ ಪ್ರಮುಖ ಆಕಾರಗಳಾಗಿ ಬಳಸಿಕೊಳ್ಳಲಾಗಿದೆ. ಪತ್ರಿಕಾ ಮಾಧ್ಯಮದಲ್ಲಿ ನೀಡಿದ ಸಂದರ್ಶನಗಳು, ಚಳುವಳಿ ಸಂದರ್ಭದಲ್ಲಿ ಪಡೆದ ಅಭಿಪ್ರಾಯಗಳನ್ನು ಬಳಸಿಕೊಳ್ಳಲಾಗಿದೆ. ಪತ್ರಿಕಾ ಮಾಧ್ಯಮದಲ್ಲಿ ನೀಡಿದ ಸಂದರ್ಶನಗಳನ್ನು ಬಳಸಿಕೊಳ್ಳಲಾಗಿದೆ. ಇವುಗಳನ್ನು ಚಾರಿತ್ರಿಕ ಅಧ್ಯಯನದ ವೈಜ್ಞಾನಿಕ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಗಳು ವ್ಯಕ್ತಿ ನಿಷ್ಟತೆಗಿಂತ ವಸ್ತುನಿಷ್ಟತವಾಗಿದೆ. ವ್ಯಕ್ತಿಯನ್ನು ವಸ್ತುನಿಷ್ಠತೆಯಿಂದ ಬಹುಮುಖ ಆಯಾಮಗಳಲ್ಲಿ ಪರಿಶೀಲಿಸುವ ಆಯಾಮ ಇದಾಗಿದೆ. ಜಿ.ಮಾದೇಗೌಡರಿಗೆ ಸಂಬಂಧಿಸಿದ ಪ್ರಾಥಮಿಕ ಮತ್ತು ದ್ವಿತೀಯ ಆರಕಗಳನ್ನು ಸಂಗ್ರಹಿಸಿ ವಿಶ್ಲೇಷಿಸಿ ಅಧ್ಯಯನ ನಡೆಸಲಾಗಿದೆ. ಜಿ.ಮಾದೇಗೌಡರ ಹೋರಾಟದ ವಿಭಿನ್ನ ನೆಲೆಗಳು ಅದರ ಬೆಳವಣಿಗೆಯ ಹಂತ ಇವೆಲ್ಲವನ್ನು ಸಂಶೋಧನೆಯ ಮೂಲಕ ಅಧ್ಯಯನ ನೆಡೆಸಲಾಗಿದೆ. ವ್ಯಕ್ತಿ ಚರಿತ್ರೆಯನ್ನು ಅಧ್ಯಯನ ಮಾಡುವಾಗ ವ್ಯಕ್ತಿ ಚರಿತ್ರೆಯ ಹಿನ್ನೆಲೆಯಲ್ಲಿ ಅಧ್ಯಯನದ ವೈದಾನಿಕತೆಯ ನೆಲೆಯಲ್ಲಿಯೇ ಪರಿಶೀಲಿಸಲಾಗಿದೆ. ವ್ಯಕ್ತಿ ಚರಿತ್ರೆ ಅಧ್ಯಯನ ಮಾಡುವಾಗ ವ್ಯಕ್ತಿಗೆ ಸಂಬಂಧಿಸಿದ ಘಟನೆಗಳನ್ನು, ಹೋರಾಟದ ಸಂದರ್ಭದ ದಾಖಲೆಗಳನ್ನು ಸಂಗ್ರಹಿಸಿ ಅವುಗಳನ್ನು ಕಾಲಾನುಕ್ರಮೇಣಗಳಲ್ಲಿ ಜೋಡಿಸಿಕೊಂಡು ವಿಮರ್ಶೆ ನಡೆಸಿ ಅಧ್ಯಯನವನ್ನು ಮಾಡಲಾಗಿದೆ. ಈ ಅಧ್ಯಯನದಲ್ಲಿ ಜಿ.ಮಾದೇಗೌಡರ ಮೇಲೆ ಗಾಂಧಿತತ್ವಗಳ ಪ್ರಭಾವ ಬೀರಿದ್ದು, ನಾಯಕತ್ವ ಗುಣಗಳಿಂದ ಕೂಡಿದ್ದು ಹಾಗೂ ಲಭ್ಯವಿರುವ ದಾಖಲೆಗಳಿಂದ ಸಾಧನೆಯ ನೋಟ, ರೈತರಪರ ಕಾಳಜಿ, ಜಿಲ್ಲೆಗೆ ನೀಡಿದ ಕೊಡುಗೆಗಳನ್ನು ವಿವರವಾಗಿ ಆದಷ್ಟು ವಸ್ತುನಿಷ್ಠತೆಯಿಂದ ಬಹುಮುಖಿ ಆಯಾಮಗಳಲ್ಲಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

## 1.5 ಅಧ್ಯಯನದ ವ್ಯಾಪ್ತಿ ಹಾಗೂ ಮಿತಿಗಳು

ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟದ ಅಧ್ಯಯನವು ತನ್ನದೇ ಆದ ವ್ಯಾಪ್ತಿ ಹಾಗೂ ಮಿತಿಗಳಿಗೂ ಒಳಪಟ್ಟಿದೆ. ಈ ಸಂಶೋಧನೆಯ ಅಧ್ಯಯನದ ವ್ಯಾಪ್ತಿಯ ಕೇಂದ್ರಬಿಂದು ಜಿ.ಮಾದೇಗೌಡರಾಗಿದ್ದಾರೆ. ಅವರ ಚಿಂತನೆ ಹಾಗೂ ಹೋರಾಟದ ವಿವಿಧ ಆಯಾಮಗಳನ್ನು ಕಾಲಾನು ಕ್ರಮೇಣವಾಗಿ ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ ಕ್ರಮವೊಂದನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಪ್ರಮುಖವಾಗಿ ಏಕೀಕರಣ ಪೂರ್ವದಲ್ಲಿ ನಡೆದ ಶಿವಪುರ ಧ್ವಜಸತ್ಯಾಗ್ರಹ ಚಳುವಳಿ, ಕ್ವಿಟ್

ಇಂಡಿಯಾ ಚಳುವಳಿ, ಮೈಸೂರು ವಿಲೀನ ವಿರೋಧಿ ಚಳುವಳಿ ಹಾಗೂ ಏಕೀಕರಣೋತ್ತರ ಪೂರ್ವದಲ್ಲಿ ನಡೆದ ಗೋಕಾಕ್ ಚಳುವಳಿ, ವರುಣಾ ನಾಲಾ ಚಳುವಳಿ, ಕಾವೇರಿ ಚಳುವಳಿ, ವಿಧಾನಸಭೆ ಹಾಗೂ ಲೋಕಸಭೆ ಸದಸ್ಯರಾಗಿ ನಿರ್ವಹಿಸಿದ ಕಾರ್ಯಗಳನ್ನು ವಿಸ್ಲೇಷಿಸಲಾಗಿದೆ. ಈ ಸಂಶೋಧನೆ ಕಾರ್ಯದಲ್ಲಿ ಅವರ ಚಿಂತನೆ ಹಾಗೂ ಹೋರಾಟಗಳನ್ನು ಅಧ್ಯಯನದ ಚೌಕಟ್ಟಿಗೆ ತರುವ ಪ್ರಯತ್ನ ಮಾಡಲಾಗಿದೆ. ಅಂತೆಯೇ ಅವರ ವಿಫಲತೆಗಳನ್ನು ದಾಖಲಿಸುವ ಪ್ರಯತ್ನಗಳನ್ನು ಮಾಡದೆ ಬಿಟ್ಟಿಲ್ಲ. ಅಂತೆಯೇ ಮಾನವ ಸಹಜ ಪೂರ್ವಗ್ರಹಗಳ ಮಿತಿಗಳನ್ನು ಮೀರುವ ದೆಸೆಯಿಂದ ಪ್ರಯತ್ನಿಸಲಾಗಿದೆ.

## 1.6 ಅಧ್ಯಯನದ ಸ್ವರೂಪ

ಸಮಾಜದ ಪರಿವರ್ತನೆಗಾಗಿ ಕಾಲಕಾಲಕ್ಕೆ ಅನೇಕ ಹೋರಾಟಗಳು, ಚಳುವಳಿಗಳು, ಕ್ರಾಂತಿಗಳು ನಡೆದಿದ್ದು, ಇವುಗಳಿಂದ ಅನೇಕ ಆದರ್ಶ ವ್ಯಕ್ತಿಗಳು ಹುಟ್ಟಿಕೊಂಡಿದ್ದಾರೆ. ಅಂತಹ ಮಹಾನ್ ವ್ಯಕ್ತಿಗಳಲ್ಲಿ ಮಹಾತ್ಮ ಗಾಂಧೀಜಿ, ಅಂಬೇಡ್ಕರ್, ಜ್ಯೋತಿಬಾ ಫುಲೆ, ಹೀಗೆ ಮುಂದುವರಿದುಕೊಂಡು ಹೋಗುತ್ತದೆ. ಇಂತಹ ಮಹಾನ್ ವ್ಯಕ್ತಿಗಳ ಗುಣಗಳನ್ನು ಮತ್ತು ಆದರ್ಶಗಳನ್ನು ತಮ್ಮ ಜೀವನದಲ್ಲಿ ಮೈಗೂಡಿಸಿಕೊಂಡಿರುವ ವ್ಯಕ್ತಿಗಳ ಗುಂಪಿಗೆ ಜಿ. ಮಾದೇಗೌಡರು ಸಹ ಸೇರುತ್ತಾರೆ. **ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟ: ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಪ್ರಸ್ತುತ ಅಧ್ಯಯನವು ಒಟ್ಟು ಆರು ಅಧ್ಯಾಯಗಳನ್ನು ಹಾಗೂ ಅನುಬಂಧಗಳನ್ನು ಒಳಗೊಂಡಿರುವಂಥದ್ದು. **ಮೊದಲ ಅಧ್ಯಾಯದಲ್ಲಿ** ಪ್ರಸ್ತಾವನೆ, ಉದ್ದೇಶಗಳು ಅಧ್ಯಯನದ ಮಹತ್ವ, ಅಧ್ಯಯನದ ಸ್ವರೂಪ, ವ್ಯಾಪ್ತಿ ಹಾಗೂ ಸಂಶೋಧನಾ ವಿಧಿ–ವಿಧಾನಗಳು, ಗ್ರಂಥಗಳ ಸಮೀಕ್ಷೆಯನ್ನು ಒಳಗೊಂಡಿದೆ.

**ಎರಡನೆಯ ಅಧ್ಯಾಯದಲ್ಲಿ** ಜಿ. ಮಾದೇಗೌಡರ ಬಾಲ್ಯ, ಅವರ ಕೌಟುಂಬಿಕ ಹಿನ್ನೆಲೆ, ಪೂರ್ವಿಕರ ಹಿನ್ನೆಲೆ ಹಾಗೂ ಪ್ರಭಾವಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಅವರನ್ನು ಹೋರಾಟಕ್ಕೆ ಪ್ರಭಾವಿಸಿದ ಹಿನ್ನೆಲೆ ಹಾಗೂ ತಾತ್ವಿಕತೆಯು ಮುಖ್ಯವಾದುದು. ಜೊತೆಗೆ ಶಿಕ್ಷಣ ಪಡೆಯುವ ಸಂದರ್ಭದಲ್ಲಿ. ಶಿಕ್ಷಣದ ಜೊತೆಗೆ ಶಿವಪುರ ಸತ್ಯಾಗ್ರಹದಲ್ಲಿ ನೀರು ಕೊಡುವ ಕಾಯಕ ಮತ್ತು ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕರಪತ್ರ ಹಂಚುವ ಮೂಲಕ ಮೈಸೂರು ವಿಲೀನ ವಿರೋಧಿ ಚಳುವಳಿ ಹಾಗೂ 1982ರಲ್ಲಿ ನಡೆದ ಗೋಕಾಕ್ ಚಳುವಳಿಯಲ್ಲಿ ಭಾಗವಹಿಸಿ ಹೋರಾಟಗಳ ಮನೋಭಾವನೆಯನ್ನು ರೂಢಿಸಿಕೊಂಡಿದ್ದರ ಬಗ್ಗೆ ಚರ್ಚಿಸಲಾಗಿದೆ. ಶಿಕ್ಷಣ ಪಡೆದ ನಂತರದ ದಿನಗಳಲ್ಲಿ ಆಯ್ಕೆ ಮಾಡಿಕೊಂಡ ವೃತ್ತಿಯಿಂದ ಸಮಾಜಕ್ಕೆ ಯಾವ ರೀತಿಯ ಕೊಡುಗೆಗಳನ್ನು ನೀಡಿದ್ದಾರೆ

ಎಂಬುದನ್ನು ಈ ಅಧ್ಯಾಯನದಲ್ಲಿ ವಿವರಿಸಲಾಗಿದೆ. ವಕೀಲರಾಗಿ ಕಾರ್ಯ ನಿರ್ವಹಿಸುವಾಗ ಅವರಿಗಾದ ಪ್ರಭಾವದಿಂದಾಗಿ ರಾಜಕೀಯ ಕ್ಷೇತ್ರಕ್ಕೆ ಧುಮುಕಿದ್ದರು. ರಾಜಕೀಯ ಕ್ಷೇತ್ರಕ್ಕೆ ಬರುವುದಕ್ಕೆ ಕಾರಣ ಗಾಂಧಿಜೀ ಹಾಗೂ ಕೆ.ವಿ.ಶಂಕರಗೌಡರ ಪ್ರಭಾವಕ್ಕೆ ಒಳಗಾಗಿ ಇವರ ಆದರ್ಶಗಳನ್ನೂ ಮೈಗೂಡಿಸಿಕೊಂಡು ಅನುಷ್ಠಾನ ಮಾಡಿರುವುದನ್ನು ತೌಲನಿಕವಾಗಿ ಒರೆಹಚ್ಚಿ ನೋಡಲು ಪ್ರಯತ್ನಿಸಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** ಜಿ. ಮಾದೇಗೌಡರ ರಾಜಕೀಯ ಜೀವನ ಹಾಗೂ ಸಾಧನೆಗೆ ಸಂಬಂಧಿಸಿದ ಅಂಶಗಳನ್ನು ಚರ್ಚಿಸಲಾಗಿದೆ. ಅಂದರೆ ವೃತ್ತಿ ಜೀವನದಲ್ಲಿ ತೊಡಗಿಸಿ ಕೊಂಡಿದ್ದಾಗಲೇ ಜಿಲ್ಲೆಯ ಪ್ರಮುಖ ನಾಯಕರುಗಳ ಪ್ರಭಾವಕ್ಕೆ ಒಳಗಾಗಿ ರಾಜಕೀಯ ಜೀವನ ಆರಂಭಿಸಿ. ತಾಲ್ಲೂಕು ಬೋರ್ಡ್ ಸದಸ್ಯರಾಗಿ, ಸತತ 6 ಭಾರಿ ವಿಧಾನ ಸಭಾ ಸದಸ್ಯರಾಗಿ, ಮಂಡ್ಯದ ಮೈಷುಗರ್ ಕಾರ್ಖಾನೆ ಅಧ್ಯಕ್ಷರಾಗಿ, ಕರ್ನಾಟಕ ಸರ್ಕಾರದಲ್ಲಿ ಗಣಿ ಭೂ ವಿಜ್ಞಾನ ಮತ್ತು ಅರಣ್ಯ ಸಚಿವರಾಗಿ, ನಂತರ ಮಂಡ್ಯ ಲೋಕಸಭಾ ಸದಸ್ಯರಾಗಿ, ಸದನದಲ್ಲಿ ಚರ್ಚಿಸಿರುವ ಚಿಂತನೆ ಮತ್ತು ವಿಚಾರಧಾರೆಗಳನ್ನು ವಿಶ್ಲೇಷಿಸಿರುವ ವಿಶೇಷತೆ ಈ ಅಧ್ಯನದ್ದು.

**ನಾಲ್ಕನೇ ಅಧ್ಯಾಯದಲ್ಲಿ** ಜಿ. ಮಾದೇಗೌಡರು ರೈತಪರ ಹೋರಾಟಗಳನ್ನು ನಡೆಸಿರುವ ಬೆಳವಣಿಗೆಯ ರೀತಿಯನ್ನು ವಿಶ್ಲೇಷಿಸಲಾಗಿದೆ. ಅಂದರೆ ರಾಜಕೀಯ ಜೀವನದೊಂದಿಗೆ ಮಂಡ್ಯ ಜಿಲ್ಲೆಯ ಸಮಗ್ರ ರೈತಪರ ಹೋರಾಟಗಳಲ್ಲಿ ನಡೆಸಿರುವ ಅಂಶಗಳನ್ನು ದಾಖಲು ಮಾಡಲಾಗಿದೆ. 'ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾಗಿ' ಕೈಗೊಂಡ ಕಾರ್ಯಕ್ರಮಗಳು, ರೂಪಿಸಿದ ಯೋಜನೆಗಳನ್ನು ಹಾಗೂ ಹೋರಾಟಗಳನ್ನು ಗುರುತಿಸಲಾಗಿದೆ. ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗೆ ಸಾಗಿಸುವ ಕಬ್ಬಿಗೆ ಬೆಂಬಲ ಬೆಲೆ ಪರಿಷ್ಕರಣೆಗಾಗಿ ಹೋರಾಟ ಮಾಡಿದ್ದು, ಇದಕ್ಕಾಗಿ ಇವರ ನೇತೃತ್ವದಲ್ಲಿ ಮಂಡ್ಯದಿಂದ ಬೆಂಗಳೂರಿಗೆ ಪಾದಯಾತ್ರೆ ನಡೆಸಿರುವುದು, ರೈತರ ಬೆಳೆಗಾಗಿ ವೈಜ್ಞಾನಿಕ ಬೆಲೆಗಾಗಿ ರೈತರೊಂದಿಗೆ ಉಪವಾಸ ಸತ್ಯಾಗ್ರಹ, ಜೊತೆಗೆ ವರುಣಾನಾಲಾ ವಿರೋಧಿ ಚಳುವಳಿಯ ನೇತೃತ್ವದ ಮೂಲಕ ರಸ್ತೆತಡೆ ಚಳುವಳಿ ಹೋರಾಟದಲ್ಲಿ ಭಾಗಿಯಾಗಿರುವುದು, ರಸಗೊಬ್ಬರ ಬೆಲೆ ಏರಿಕೆಯ ವಿರುದ್ಧ ಹೋರಾಟ, ಬ್ಯಾಂಕ್‌ಗಳು ಹಾಗೂ ಲೇವಿ ವಿರೋಧಿ ಚಳುವಳಿಯಲ್ಲಿ ಭಾಗವಹಿಸಿರುವುದು ಹಾಗೂ ಈ ಚಳುವಳಿಯಿಂದ ಮಂಡ್ಯ ಜಿಲ್ಲೆಗೆ ಆಗಿರುವಂತಹ ಅನುಕೂಲ ಅನಾನುಕೂಲಗಳನ್ನು ಅವಲೋಕಿಸಿ, ವಿಶ್ಲೇಷಿಸುವುದು ಇಲ್ಲಿ ಮುಖ್ಯವಾಗಿರುತ್ತದೆ.

**ಐದನೆಯ ಅಧ್ಯಾಯದಲ್ಲಿ** ಜಿ. ಮಾದೇಗೌಡರು ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿರುವ ಕೊಡುಗೆಗಳನ್ನು ಹಾಗೂ ಸಮಾಜದ ಬೆಳವಣಿಗೆಗಳಿಗೆ ಸ್ಪಂದಿಸಿರುವ ರೀತಿಯನ್ನು ಪರಿಶೀಲನೆಗೆ ಒಳಪಡಿಸಲಾಗಿದೆ. ಶೈಕ್ಷಣಿಕ ಕಾರ್ಯಗಳು,

ಆರ್ಥಿಕ ಮತ್ತು ಸಾಂಸ್ಕೃತಿಕ ಕಾರ್ಯಗಳಾದ, ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆ, ವಿವಿಧೋದ್ದೇಶ ಸಹಕಾರ ಸಂಘ ಸ್ಥಾಪನೆ, ಸ್ವ-ಉದ್ಯೋಗ ತರಬೇತಿ ಸ್ಥಾಪನೆ, ಗಾಂಧಿ ತತ್ವಗಳ ಪ್ರಚಾರಕ್ಕಾಗಿ ಗಾಂಧಿ ಭವನ ಸ್ಥಾಪನೆ, ಜನರ ಆರೋಗ್ಯ ರಕ್ಷಣೆಗಾಗಿ ಸಾರ್ವಜನಿಕ ಆಸ್ಪತ್ರೆ ಸ್ಥಾಪನೆ, ಆಧ್ಯಾತ್ಮಿಕ ಕಾರ್ಯಗಳಿಗಾಗಿ ಆತ್ಮಲಿಂಗೇಶ್ವರ ದೇವಾಲಯದ ಸ್ಥಾಪನೆ, ಪ್ರಕೃತಿ ಆರೋಗ್ಯಧಾಮ ಸ್ಥಾಪನೆ ಹಾಗೂ ಸಮಾಜ ಸೇವಾ ಪ್ರತಿಷ್ಠಾನ ಸ್ಥಾಪನೆಯ ಮೂಲಕ ಕೈಗೊಂಡ ಜನಪರ ಕಾಯಕ್ರಮಗಳನ್ನು ಪರಿಶೀಲಿಸುವ ಯತ್ನ ಈ ಅಧ್ಯಾಯದ್ದು.

**ಆರನೆಯ ಅಧ್ಯಯನದಲ್ಲಿ** : ಪ್ರಸ್ತುತ ಅಧ್ಯಯನವನ್ನು ಒಟ್ಟಾರೆಯಾಗಿ ಕ್ರೋಢಿಕರಿಸಿ ಉಪಸಂಹಾರ ಹಾಗೂ ಕಂಡುಕೊಂಡ ಫಲಿತಗಳು, ಅನುಬಂಧ, ಛಾಯಾಚಿತ್ರಗಳು, ಪತ್ರ ವ್ಯವಹಾರಗಳನ್ನು ಅನಾವರಣಗೊಳಿಸುವ ಪ್ರಯತ್ನ ನಡೆಸಲಾಗಿದೆ.

## 1.7 ಅಧ್ಯಯನದ ಸಮೀಕ್ಷೆ

ಜಿ.ಮಾದೇಗೌಡರು ಮುಖ್ಯವಾಗಿ ಗಾಂಧಿ ತತ್ವಗಳ ಅನುಷ್ಠಾನ ಹಾಗೂ ಸಾಮಾಜಿಕ ಕಾಳಜಿಗಾಗಿ ತಾವು ಗಳಿಸಿದ ರಾಜಕೀಯ ಅಧಿಕಾರದಿಂದ ರೈತಪರ ಹೋರಾಟಗಳಲ್ಲಿ ಕಾಣಿಸಿಕೊಂಡು ಮಂಡ್ಯ ಜಿಲ್ಲೆಯ ಸರ್ವಜನರಿಗಾಗಿ ಅನೇಕ ಜನಪರ ಕಾರ್ಯಗಳನ್ನು ಮಾಡಿದ್ದಾರೆ ಹಾಗೂ ಲೋಕಸಭಾ ಸದಸ್ಯರಾಗಿ ಕರ್ನಾಟಕದ ನಾಡು-ನುಡಿಗಾಗಿ ತಮ್ಮ ಚಿಂತನೆಗಳ ಮೂಲಕ ದೇಶದ ಗಮನವನ್ನು ಸೆಳೆದಿದ್ದಾರೆ. ಈ ಹಿನ್ನೆಲೆಯಲ್ಲಿ ಜಿ. ಮಾದೇಗೌಡರ ಇಡೀ ಬದುಕನ್ನು ಕುರಿತಂತೆ ಸಮಗ್ರ ಸಂಶೋಧನಾ ಅಧ್ಯಯನದ ಅವಶ್ಯಕತೆ ಇದೆ. ಹಾಗಾಗೀ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಎಲ್ಲಿಯೂ ಗಂಭೀರವಾದ ಅಧ್ಯಯನಗಳೇ ನಡೆದಿಲ್ಲ ಎಂದರೂ ತಪ್ಪಾಗಲಾರದು. ಆದುದರಿಂದ ಈ ಕೊರತೆಯನ್ನು ನೀಗಿಸುವ ದಿಸೆಯಲ್ಲಿ ಜಿ. ಮಾದೇಗೌಡರನ್ನು ಕುರಿತಂತೆ ಅವರು ನಡೆಸಿರುವ ಹೋರಾಟಗಳು, ಸಾಧನೆಗಳು, ರಾಜಕೀಯಕ್ಕೆ ಸಂಬಂಧಸಿದಂತೆ ವಿಶ್ಲೇಷಣಾ ಕ್ರಮದ ಬಗೆಗೆ ಪ್ರಸ್ತಾಪಿಸಿ ಚರ್ಚಿಸಲಾಗಿರುವ ಅನೇಕ ಕೃತಿಗಳನ್ನು ಅಧ್ಯಯನ ನಡೆಸಲಾಗಿದೆ. ಅವರಿಗೆ ಸಂಬಂಧಿಸಿದಂತೆ ಬಿಡಿ ಲೇಖನಗಳು, ಪತ್ರಿಕಾ ಲೇಖನಗಳು ಹಾಗೂ ಅವರು ಬರೆದಿರುವ ಪತ್ರವ್ಯವಹಾರಗಳು, ಇವುಗಳಲ್ಲಿ ಸಂಶೋಧನೆಗೆ ಪೂರಕವಾದ ಮಾಹಿತಿಯನ್ನು ಕಾಣಬಹುದು. ಸಂಪೂರ್ಣ ಜೀವನವನ್ನು ಕಟ್ಟಿಕೊಡುವ ದೆಸೆಯಲ್ಲಿ ಈ ಸಂಶೋಧನೆಯನ್ನು ಮಾಡಲಾಗಿದೆ. ಸಂಶೋಧನೆಗೆ ಪೂರಕವಾಗಿ ಗ್ರಂಥಗಳು ಹಾಗೂ ಕೃತಿಗಳನ್ನು ವಿಶ್ಲೇಷಿಸುವ ಪ್ರಯತ್ನ ನಡೆಸಲಾಗಿದೆ. ಅವುಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

**ರಾಜೇಗೌಡ.ಹ.ಕ., (1993), ಶ್ರೀ ಆತ್ಮಲಿಂಗೇಶ್ವರ ಕ್ಷೇತ್ರದರ್ಶನ ಈ ಕೃತಿಯನ್ನು ಶ್ರೀ ಆತ್ಮಲಿಂಗೇಶ್ವರ ದೇವಾಲಯ ಸಮಿತಿಯು ಪ್ರಕಟಿಸಿದೆ.** ಈ ಕೃತಿಯಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಹನುಮಂತ ನಗರದಲ್ಲಿ ಶ್ರೀ ಆತ್ಮಲಿಂಗೇಶ್ವರ ದೇವಸ್ಥಾನ ಸ್ಥಾಪನೆಯಲ್ಲಿ ಜಿ. ಮಾದೇಗೌಡರು ಕೈಗೊಂಡ ಕಾರ್ಯಗಳ ಬಗ್ಗೆ ವಿವರಿಸಲಾಗಿದೆ. ಈ ಕೃತಿಯು ವ್ಯಕ್ತಿಯ ಶೈಕ್ಷಣಿಕ, ಆರ್ಥಿಕ, ಉನ್ನತ್ತಿಗೆ ಆಧ್ಯಾತ್ಮವೂ ಮುಖ್ಯವಾಗಿದೆ ಎಂಬುದನ್ನು ಜಿ. ಮಾದೇಗೌಡರ ಕಾರ್ಯದ ಮೂಲಕ ನಿರೂಪಿಸಲಾಗಿದೆ. ಈ ಕೃತಿಯು ಸಂಶೋಧನೆಗೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ. **ಜವರೇಗೌಡ.ದೇ., (1994), ರಚಿಸಿರುವ 'ಸುವರ್ಣ ಮಂಡ್ಯ'** ಕೃತಿಯು ಮಂಡ್ಯ ಜಿಲ್ಲೆಯ ಐತಿಹಾಸಿಕ ಪಕ್ಷಿನೋಟವಾಗಿದೆ. ಅಭಿವೃದ್ಧಿ, ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಹೋರಾಟಗಳ ಚಿತ್ರಣವನ್ನು ತಿಳಿಸುವಲ್ಲಿ ಪ್ರಮುಖವಾದದ್ದು, ಈ ಕೃತಿಯಲ್ಲಿ ಮೂವತ್ತೆರಡು ಲೇಖನಗಳಿದ್ದು ಪ್ರತಿಯೊಂದು ಬರಹವು ಜಿಲ್ಲೆಯ ಹಿರಿಮೆಯನ್ನು ಕಟ್ಟಿಕೊಡುತ್ತವೆ. ಮಂಡ್ಯ ಜಿಲ್ಲೆಯ ಭೌಗೋಳಿಕತೆ, ಶಾಸನಗಳ ಹಿನ್ನೆಲೆ ಜಾನಪದ ಪರಂಪರೆ, ಸಾಮಾಜಿಕ ಜೀವನ, ಪತ್ರಿಕೋದ್ಯಮ, ಕೃಷಿ ನಡೆದು ಬಂದ ದಾರಿ, ಮಂಡ್ಯದ ಮುಂದಿನ ಯೋಜನೆಗಳ ವಿವರಣೆಯನ್ನು ನೀಡುತ್ತದೆ. ಮಂಡ್ಯ ಜಿಲ್ಲೆಯ ಜನಪರ ಚಳವಳಿಗಳಲ್ಲಿ ರೈತ ಚಳವಳಿಯ ಹುಟ್ಟು, ಬೆಳವಣಿಗೆ, ಜಿಲ್ಲೆಯಲ್ಲಿ ನಡೆದ ವಿವಿಧ ರೈತ ಹೋರಾಟಗಳು ರೈತ ನಾಯಕರ ಭಾಗವಹಿಸುವಿಕೆ, ಚಳವಳಿಯ ದಿಕ್ಕು, ಇದರ ಪರಿಣಾಮಗಳನ್ನು ಚರ್ಚಿಸಿದ್ದಾರೆ. ಮಂಡ್ಯ ಜಿಲ್ಲೆಯ ಚರಿತ್ರೆ ನಿರ್ಮಾಣದಲ್ಲಿ ಪ್ರಮುಖ ನಾಯಕರ ಚಳುವಳಿ ಮತ್ತು ಹೋರಾಟದ ನೇತೃತ್ವವನ್ನು ವಹಿಸಿದ್ದನ್ನು ಈ ಕೃತಿಯಲ್ಲಿ ಚರ್ಚಿಸಲಾಗಿರುವ ಅಭಿಪ್ರಾಯಗಳು ಸಂಶೋಧನೆಗೆ ಉಪಯುಕ್ತವಾಗಿವೆ. **ಅರ್ಜುನಪುರಿ ಅಪ್ಪಾಜಿಗೌಡ, (1995), ಪುಣ್ಯಕೋಟಿ ಕ್ಯಾತನಹಳ್ಳಿ ರಾಮಣ್ಣ (ಸಂ.), ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ.** ಜಿ. ಮಾದೇಗೌಡರ ಆಡಳಿತದಲ್ಲಿ ಕನ್ನಡ ಲೇಖನವು ಕನ್ನಡ ಭಾಷೆಯ ಆಡಳಿತ ಭಾಷೆಯಾಗಿ ರೂಪುಗೊಳ್ಳುವ ಕುರಿತ ಅಭಿಪ್ರಾಯ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ತಿಳಿಸುತ್ತದೆ. ಕೆ.ಎಸ್. ಗೋಪಾಲ ಶ್ರೀವತ್ಸ, ಮದ್ದೂರು ತಾಲ್ಲೂಕಿನಲ್ಲಿ ಶಿಕ್ಷಣ ಪ್ರಗತಿ ಲೇಖನದಲ್ಲಿ ಜಿ. ಮಾದೇಗೌಡರ ಶಿಕ್ಷಣ ಕೈಗಾರಿಕಾ ಕ್ರಮಗಳ ಬಗ್ಗೆ ಉಲ್ಲೇಖವಿದೆ. ಕೆ.ಯದುಶೈಲಾ ರವರ ಸಂಪತ್ತು ಮತ್ತು ರೈತ ಚಳುವಳಿ ಲೇಖನದಲ್ಲಿ ಮದ್ದೂರು ತಾಲ್ಲೂಕಿನ ರೈತ ಚಳುವಳಿಯ ಬಗ್ಗೆ ವಿಶ್ಲೇಷಿಸಿದ್ದಾರೆ. ಈ ಚಳುವಳಿಯಲ್ಲಿ ಜಿ. ಮಾದೇಗೌಡರ ಪಾತ್ರದ ಬಗ್ಗೆ ಕುರಿತು ಉಲ್ಲೇಖವಿದ್ದು, ಸಂಶೋಧನೆಗೆ ಉಪಯುಕ್ತ ವಾದ ಮಾಹಿತಿಯನ್ನು ನೀಡುತ್ತದೆ.

**ಕಾವೇರಿ ಜಲವಿವಾದ ಅಂದು-ಇಂದು ಮುಖ್ಯಮಂತ್ರಿ ದೇವೇಗೌಡರ ನಿಲವು ಎಂಬ ಕೃತಿಯನ್ನು ದಿನಾಂಕ 5.9.1995 ರಲ್ಲಿ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿ, ಮಂಡ್ಯ ಪ್ರಕಟಿಸಿದೆ.** ಈ ಕೃತಿಯಲ್ಲಿ ಹಿಂದಿನ ಮಾಜಿ ಪ್ರಧಾನಮಂತ್ರಿ ಹಾಗೂ

ಮುಖ್ಯಮಂತ್ರಿಯಾಗಿದ ದೇವೇಗೌಡರು ಕಾವೇರಿ ಜಲವಿವಾದ ಕುರಿತ ಘಟನೆಗಳನ್ನು ಚರ್ಚಿಸಲಾಗಿದೆ. ದೇವೇಗೌಡರು ರಾಜಕೀಯ ಧುರೀಣರೊಂದಿಗೆ ಹಾಗೂ ಜಿ.ಮಾದೇಗೌಡ ರೊಂದಿಗೂ ಚರ್ಚಿಸಿರುವ ಅಂಶಗಳನ್ನು ಉಲ್ಲೇಖಿಸಲಾಗಿದೆ. ಈ ಕೃತಿಯಲ್ಲಿ ಸಂಶೋಧನೆಗೆ ಅಗತ್ಯವಾದ ಮಾಹಿತಿಯನ್ನು ಒದಗಿಸುತ್ತದೆ. **ಸುರೇಶ್.ಕೆ.ಜಿ., (1999), ಮಂಡ್ಯ ಜಿಲ್ಲಾ ರೈತ ಚಳವಳಿ : ಒಂದು ಅಧ್ಯಯನ (1980 ರಿಂದ 1955 ರವರೆಗೆ) ಈ ಸಂಶೋಧನಾ ಮಹಾಪ್ರೌಢ ಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ್ದು ಪ್ರಕಟಗೊಂಡಿದೆ.** ಈ ಪಿಎಚ್.ಡಿ. ಪ್ರೌಢ ಪ್ರಬಂಧದಲ್ಲಿ ಸಂಶೋಧಕರು ಜಾಗತಿಕ, ರಾಷ್ಟ್ರೀಯ, ಪ್ರಾದಶಿಕ ಹಾಗೂ ಸ್ಥಳೀಯ ರೈತ ಹೋರಾಟಗಳ ಬಗೆಗೆ ವಿಮರ್ಶಾತ್ಮಕವಾಗಿ ಹಾಗೂ ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದಾರೆ. ರೈತ ಚಳವಳಿಯ ಹಿನ್ನೆಲೆ ಮುನ್ನೆಲೆ ಬಗೆಗೆ ಅಮೂಲಾಗ್ರವಾಗಿ ವಿಶ್ಲೇಷಿಸಿದ್ದು, ವಿಶೇಷವಾಗಿ ಮಂಡ್ಯ ಜಿಲ್ಲೆಯ ರೈತ ಚಳುವಳಿಗೆ ಸಂಬಂಧಿಸಿದಂತೆ ವಿಸ್ತೃತವಾಗಿ ಚರ್ಚಿಸಿದ್ದಾರೆ. ಇದರಲ್ಲಿ ಜಿ.ಮಾದೇಗೌಡರ ನಾಯಕತ್ವದ ಬಗ್ಗೆ ಉಲ್ಲೇಖ ಇರುವುದು ಕಂಡುಬರುತ್ತದೆ. ಪ್ರಸ್ತುತ ಈ ಸಂಶೋಧನಾ ಅಧ್ಯಯನಕ್ಕೆ ರೈತ ಚಳವಳಿಯ ಹಿನ್ನೆಲೆ-ಮುನ್ನೆಲೆಗಳನ್ನು ಪೂರಕವಾಗಿ ಬಳಕೆ ಮಾಡಿಕೊಳ್ಳುವುದರ ಜೊತೆಗೆ ಚಳುವಳಿಗೆ ರೈತ ನಾಯಕರ ಮಾಹಿತಿಯು ಮಹತ್ವದ್ದಾಗಿದೆ. **ರಾಗೌ, (2001), ಸಂಪಾದಕತ್ವದ ಅಪರಂಜಿ, ಜಿ.ಮಾದೇಗೌಡರ ಅಭಿನಂದನಾ ಗ್ರಂಥವು ಪ್ರಕಟವಾಗಿದೆ.** ಈ ಅಭಿನಂದನಾ ಗ್ರಂಥದಲ್ಲಿ ಜಿ. ಮಾದೇಗೌಡರ ಬಾಲ್ಯ, ಜೀವನ, ಜನಪರ ಕಾರ್ಯಗಳು, ಹೋರಾಟಗಳು, ಶೈಕ್ಷಣಿಕ, ಕಾರ್ಯಗಳು, ಧಾರ್ಮಿಕ ಕಾರ್ಯಗಳು, ರೈತಪರ ಹೋರಾಟಗಳು, ಕಬ್ಬಿನ ಕಾರ್ಖಾನೆ ಸ್ಥಾಪನೆ, ಕಾವೇರಿ ಜಲ ಹೋರಾಟಗಳ ಬಗ್ಗೆ ಮಾಹಿತಿಯನ್ನು ದಾಖಲಿಸಲಾಗಿದೆ. ಅವರ ಚಿಂತನೆ ಮತ್ತು ಹೋರಾಟವನ್ನು ಸಂಶೋಧನಾ ದೃಷ್ಟಿಯಿಂದ ವಿಶ್ಲೇಷಿಸಲಾಗಿದೆ. ಹೋರಾಟದ ಹಾದಿಯನ್ನು ಮಾತ್ರ ದಾಖಲಿಸಲಾಗಿದೆ. ಇದು ಸಂಶೋಧನೆಗೆ ಮಹತ್ವದ ದಾಖಲೆಯಗಿದೆ.

**ಪಾರ್ಥಸಾರಥಿ.ಟಿ.ಎ. (ಪ್ರಸಂ.), (2003), ಕರ್ನಾಟಕ ರಾಜ್ಯ ಗೆಜೆಟಿಯರ್ ಮಂಡ್ಯ ಜಿಲ್ಲೆ'** ಸಂಪುಟವು ಮಂಡ್ಯ ಜಿಲ್ಲೆಯ ವೈವಿಧ್ಯಮಯ ವಿಷಯಗಳ ಆಗರವಾಗಿದ್ದು, ಜಿಲ್ಲೆಯ ವಿಭಿನ್ನ ಕ್ಷೇತ್ರದಲ್ಲಿ ಈವರೆಗೆ ಸಾಧಿಸಿರುವ ಪ್ರಗತಿಯ ವಿಹಂಗಮ ನೋಟವನ್ನು ನೀಡುತ್ತದೆ ಜಿಲ್ಲೆಯ ಪ್ರಾಕೃತಿಕ ಸಂಪತ್ತು, ಕೃಷಿ ನೀರಾವರಿ, ಕೈಗಾರಿಕೆ ಪ್ರಗತಿ, ಸಾರಿಗೆ ಸಂಪರ್ಕ ಸ್ಥಳೀಯ ಆಡಳಿತ, ಆರ್ಥಿಕ ಪ್ರವೃತ್ತಿ, ಶೈಕ್ಷಣಿಕ ಮುನ್ನಡೆ, ಸಾಮಾಜಿಕ ಸೇವೆ, ಕ್ರೀಡೆ, ಕಲೆ, ಸಾಹಿತ್ಯ, ಸಾಂಸ್ಕೃತಿಕ, ಇತಿಹಾಸದ ಜೊತೆಗೆ ಚಾರಿತ್ರಿಕ ಮಹತ್ವದ ಪ್ರವಾಸಿತಾಣದ ಚಿತ್ರಣವನ್ನು ನೀಡುತ್ತದೆ. ಒಟ್ಟಿನಲ್ಲಿ ಮಂಡ್ಯ ಜಿಲ್ಲೆಯ ರೈತ ಹೋರಾಟಗಳಾದ ಇರ್ವಿನ್, ವರುಣಾ, ಕಾವೇರಿ ಮುಂತಾದ ರೈತ ಚಳವಳಿಗಳ ಸೂಕ್ತ ವಿವರಣೆಯನ್ನು ನೀಡುವಲ್ಲಿ ಪ್ರಮುಖವಾದ ಗ್ರಂಥವಾಗಿದೆ. ವರುಣಾ ಮತ್ತು ಕಾವೇರಿ

ಚಳುವಳಿಗಳ ಮಾಹಿತಿ ಸಂಶೋಧನೆಗೆ ಮಹತ್ವದ ದಾಖಲೆಗಳಾಗಿವೆ. **ಲಿಂಗಯ್ಯ.ಎಂ. (ಸಂ.), (2003), ಕಾವೇರಿ ಕಂಡರಿಯದ ಸಂಕಷ್ಟ ಪ್ರಕಾಶನ ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿ, ಮಂಡ್ಯ.** ಕಾವೇರಿನದಿ ವಿವಾದ, ಚಳುವಳಿ ಪ್ರಾರಂಭ ಹೇಗೆ? ಏಕೆ? ಚಳುವಳಿಯಲ್ಲಿ ಜಿಲ್ಲೆಯ ಹಿತಕಾಯಲು ಜಿ. ಮಾದೇಗೌಡರ ಪ್ರಯತ್ನದ ಬಗ್ಗೆ ಉಲ್ಲೇಖವಿದೆ. ಜಿ. ಮಾದೇಗೌಡರು ಕಾವೇರಿ ನದಿ ನೀರಿನ ಹಂಚಿಕೆಯ ವಿವಾದಗಳು ಉಂಟಾದ ಸಂದರ್ಭದಲ್ಲಿ ಜಿಲ್ಲೆಯ ಪರವಾಗಿ ವಿವಿಧ ಹೋರಾಟಗಳನ್ನು ರೂಪಿಸಿ ನಾಯಕತ್ವವನ್ನು ವಹಿಸಿ ಹೋರಾಟದ ಮೂಲಕ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದ್ದನ್ನು ಹಾಗೂ ಜಿ.ಮಾದೇಗೌಡರ ಹೋರಾಟದ ವಿವಿಧ ಆಯಾಮಗಳನ್ನು ದಾಖಲಿಸಲಾಗಿದೆ. ಸಂಶೋಧನೆಯ ಅಧ್ಯಯನಕ್ಕೆ ಈ ಕೃತಿಯು ಉಪಯುಕ್ತವಾದ ಮಾಹಿತಿ ನೀಡುತ್ತದೆ. **ಆನಂತರಾಮು.ಕೆ., (2004), ಸಕ್ಕರೆಯ ಸೀಮೆ** ಕೃತಿಯು ಮಂಡ್ಯ ಜಿಲ್ಲೆಯ ಪ್ರವಾಸಿ ಕಥನವಾಗಿದ್ದು, ಇದು ಜನಮನದ ಬದುಕನ್ನು ವರ್ತಮಾನದ ಕಷ್ಟ ಕಾರ್ಪಣ್ಯಗಳನ್ನು ತಮ್ಮ ಪೂರ್ವಿಕರ, ಸಾಹಸ–ಹೆಮ್ಮೆಗಳನ್ನು ಒಂದೆಡೆ ಕೂಡಿಸುವ ಯತ್ನವನ್ನು ಮಾಡಿದೆ. ಲೇಖಕರು ಜಿಲ್ಲೆಯ ರೈತ ನಾಯಕರು ಹಾಗೂ ಹಿರಿಯ ಸ್ವಾತಂತ್ರ್ಯ ಹೋರಾಟಗಾರರನ್ನು ಸಂದರ್ಶಿಸಿ ರೈತ ಚಳವಳಿಯ ಬಗ್ಗೆ ಹಲವು ಮಾಹಿತಿಗಳನ್ನು ಸಂಗ್ರಹಿಸಿದ್ದಾರೆ. ಈ ಇಪ್ಪತ್ತೆರಡನೆಯ ನೋಟವು ಮಂಡ್ಯದಲ್ಲಿ ನಡೆದ ಎರಡು ರೈತ ಚಳವಳಿಯ ಬಗ್ಗೆ ಮಾಹಿತಿ ನೀಡುತ್ತದೆ. ವರುಣಾ ನಾಲಾ ವಿರೋಧಿ ಚಳವಳಿಯ ಸಂಘಟನೆಯು **ಚಡ್ಡಿ ಚಳವಳಿ** ಎಂದು ಹೆಸರು ಪಡೆದ ಹೋರಾಟವು ರಾಷ್ಟ್ರದ ಗಮನ ಸೆಳೆದ ಅಂಶಗಳ ಮಾಹಿತಿಯನ್ನು ನೀಡಿದ್ದಾರೆ. ವರುಣನಾಲಾ ಚಳುವಳಿಯ ಮಾಹಿತಿಯು ಸಂಶೋಧನೆಗೆ ಪೂರಕವಾದ ಮಾಹಿತಿಯನ್ನು ನೀಡುತ್ತದೆ. **ರಾಮಕೃಷ್ಣ.ಮ. (2005) ರೈತಮಿತ್ರ ಜಿ.ಮಾದೇಗೌಡ ಕಿರುಹೊತ್ತಿಗೆಯನ್ನು ಬಂಧು–ಮಿತ್ರ ಪ್ರಕಾಶನ ಕಿರಗಂದೂರು ಪ್ರಕಟಿಸಿದೆ.** ಈ ಕಿರುಹೊತ್ತಿಗೆಯಲ್ಲಿ ಜಿ. ಮಾದೇಗೌಡರ ಬಾಲ್ಯಜೀವನ, ಚುನಾವಣೆಯಲ್ಲಿ ಗೆಲುವು, ಶೈಕ್ಷಣಿಕ ಕಾರ್ಯಗಳು, ಭಾರತೀಯ ಎಜುಕೇಷನ್ ಟ್ರಸ್ಟ್ ಸ್ಥಾಪನೆ, ಆತ್ಮಲಿಂಗೇಶ್ವರ ಕ್ಷೇತ್ರದ ಸ್ಥಾಪನೆ, ಸಾಂಸ್ಕೃತಿಕ, ಕಾರ್ಯಗಳ ಸಂಕ್ಷಿಪ್ತವಾದ ಮಾಹಿತಿ ನೀಡಿದೆ. ಸಂಪೂರ್ಣವಾದ ಹೋರಾಟದ ಹಂತಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದು ಇದು ಸಂಶೋಧನೆಗೆ ಪೂರಕ ಮಾಹಿತಿ ನೀಡುತ್ತದೆ. **ನಾಗರಾಜು.ಎಂ.ಜಿ., (2006), ಕರ್ನಾಟಕ ರೈತ ಚಳುವಳಿಯ ಸತ್ಯಾಗ್ರಹಗಳು ಸಂಪುಟವನ್ನು ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿಯು ಪ್ರಕಟಿಸಿದೆ.** ಈ ಸಂಪುಟದಲ್ಲಿ ಕರ್ನಾಟಕ ರೈತ ಚಳವಳಿಯನ್ನು ದಾಖಲಿಸುವುದರ ಜೊತೆಗೆ ಭಾರತದ ರೈತ ಹೋರಾಟಗಳನ್ನು ಪ್ರಾಚೀನತೆಯಿಂದ ಗುರ್ತಿಸಿದೆ. ಪ್ರಾಚೀನ ಮತ್ತು ಕರ್ನಾಟಕದ ಏಕೀಕರಣ ಪೂರ್ವ ರೈತ ಚಳವಳಿಗಳು, ಶಾಸನಗಳಲ್ಲಿ ಉಲ್ಲೇಖವಾದ ರೈತ ಪ್ರತಿಭಟನೆಯ ಧ್ವನಿ, ರಾಜರುಗಳ ವಿರುದ್ಧ ಬಂಡೆದ್ದ ಬಂಡಾಯಗಳನ್ನು ವಿವರಿಸಿದ್ದಾರೆ. ಪ್ರತಿ ಸಂಪುಟದಲ್ಲೂ ರೈತ ಚಳುವಳಿಯ ಚಾರಿತ್ರಿಕ, ಸಾಂಸ್ಕೃತಿಕ ಹಿನ್ನೋಟದ ಮೂಲಕ

ಚರ್ಚಿಸಿದ್ದಾರೆ. ಕರ್ನಾಟಕದ ಏಕೀಕರಣೋತ್ತರ ರೈತರ ಚಳವಳಿಗಳು, 1980ರ ದಶಕದ ರೈತ ಸಂಘದ ಹುಟ್ಟು ಹೋರಾಟದ ಬೆಳವಣಿಗೆ, ವಿಧಾನಸಭೆ ಹಾಗೂ ಪರಿಷತ್‌ನಲ್ಲಿ ಚರ್ಚೆಯ ಸರಮಾಲೆಯನ್ನು ನೀಡಿದ್ದಾರೆ. ರೈತ ಚಳುವಳಿಯ ಆಧುನಿಕ ಮಜಲುಗಳ ಹೋರಾಟದಲ್ಲಿ ವಿಶ್ವ ವ್ಯಾಪಾರ ಸಂಘಟನೆಗೆ ಪೂರಕವಾದ ವಿಷಯಗಳು, ಕೃಷಿಯ ಮೇಲೆ ಬೀರಿದ ಪ್ರಭಾವಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಕಾವೇರಿ ಜಲವಿವಾದ, ಐತಿಹಾಸಿಕ ಹಿನ್ನೆಲೆ, ಐತೀರ್ಪು ಮತ್ತು ಪ್ರತಿಭಟನೆ, ವಿಚಾರಸಂಕಿರಣ, ಜಲವಿವಾದದ ಸಂಘಟನೆಯ ಸರಮಾಲೆಯನ್ನು ಚರ್ಚಿಸಿದ್ದಾರೆ. ಹಾಗೆಯೇ ರೈತ ಪ್ರತಿಭಟನೆಯ ಆಧುನಿಕ ಮಾದರಿ ಸಾಂತ್ವನ ಪ್ರಕ್ರಿಯೆಗಳು, ಸದನದಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳ ವಿಷಯಗಳ ಚರ್ಚೆಗಳನ್ನು ದಾಖಲಿಸಿದ್ದಾರೆ. ಇಡೀ ರಾಜ್ಯದ ರೈತ ಹೋರಾಟಗಳನ್ನು ತಿಳಿಸುವಲ್ಲಿ ಆರು ಸಂಪುಟಗಳು ಅಮೂಲ್ಯವಾದ ವಿಶ್ಲೇಷಣೆಯ ಮಾಹಿತಿಯನ್ನು ಒದಗಿಸುತ್ತದೆ.

**ಗೋವಿಂದಯ್ಯ.ಟಿ. (2007), ಕಾವೇರಿ ಅಂತಿಮ ತೀರ್ಪು ಕರ್ನಾಟಕದ ಪಾಲಿನ ಮರಣ ಶಾಸನ** ಈ ಕೃತಿಯು ಐತಿಹಾಸಿಕ ಕಾಲದಷ್ಟು ಸುದೀರ್ಘ ಹಿನ್ನೆಲೆಯೊಂದಿರುವ ಕಾವೇರಿ ಜಲ ವಿವಾದವನ್ನು 1892 ರಿಂದ 2007ರ ನ್ಯಾಯ ಮಂಡಳಿಯ ತೀರ್ಮಾನದವರೆಗಿನ ವಿವರಗಳನ್ನು ವಿಶ್ಲೇಷಿಸಿದ್ದಾರೆ. ಕರ್ನಾಟಕ ಸಾಮ್ರಾಜ್ಯದ ಐತಿಹಾಸಿಕ ಹಿನ್ನೆಲೆ, ರಾಜ್ಯದ ಅಭಿವೃದ್ಧಿಯ ಪಕ್ಷಿನೋಟ ಕಾವೇರಿ ಜಲವಿವಾದ ಹುಟ್ಟು ಮತ್ತು ಅದರ ಸ್ವರೂಪ, ಕಾವೇರಿ ನ್ಯಾಯಮಂಡಳಿಯ ಮಧ್ಯಂತರ ಮತ್ತು ಅಂತಿಮ ತೀರ್ಪಿನ ಸಾಧಕಗಳನ್ನು ಅಂಕಿಅಂಶಗಳ ಸಹಿತ ವಿಶ್ಲೇಷಣೆ ನೀಡಿದ್ದಾರೆ. ಕಾವೇರಿ ಜಲವಿವಾದ ರಾಜಕೀಯ ಚಿತ್ರಣದ ವಿವರಣೆಯನ್ನು ನೀಡಿದ್ದಾರೆ. ಕಾವೇರಿ ಜಲವಿವಾದದ ವಸ್ತುನಿಷ್ಠ ಪರಿಚಯ ನೀಡುವ ನಿಟ್ಟಿನಲ್ಲಿ ಗ್ರಂಥವೂ ಉಪಯುಕ್ತ ವಿವರಣೆ ನೀಡುತ್ತದೆ. ಜಿ. ಮಾದೇಗೌಡರು ಕಾವೇರಿ ಹಿತರಕ್ಷಣಾ ಸಮಿತಿಯ ಅಧ್ಯಕ್ಷತೆಯನ್ನು ವಹಿಸಿಕೊಂಡ ಸಂದರ್ಭದಲ್ಲಿ ರೂಪಿಸಿಕೊಂಡ ಹೋರಾಟದ ಮಜಲುಗಳು ಸಂಶೋಧನೆಗೆ ಪೂರಕವಾದ ಮಾಹಿತಿ ನೀಡುತ್ತದೆ. **ವೀರಭದ್ರಪ್ಪ ಬಿಸ್ಲಳ್ಳಿ, (2008), ಪ್ರೊ. ಎಂ.ಡಿ.ಎನ್. ಅಭಿರುಚಿ ಪ್ರಕಾಶನ,** ಪ್ರಕಟಗೊಂಡ ಗ್ರಂಥದಲ್ಲಿ **ಪ್ರೊ. ಎಂ.ಡಿ.ನಂಜುಂಡಸ್ವಾಮಿ** ಅವರ ಜೀವನ ಮತ್ತು ವ್ಯಕ್ತಿತ್ವ, ರೈತ ಹೋರಾಟಗಳನ್ನು ಸಂಘಟಿಸಿದ ರೀತಿ, ರೈತರಲ್ಲಿ ಹೋರಾಟಗಳ ಸಾಕ್ಷರತೆಯನ್ನು ಮೂಡಿಸಿದ ಪರಿ, ಸಂವಿಧಾನದ ಜ್ಞಾನ, ಅದನ್ನೇ ಹೋರಾಟಕ್ಕೆ ದಿಕ್ಸೂಚಿಯಾಗಿಸಿಕೊಂಡ ವಿಧಾನ, ಸಮಾಜವಾದಿ ಚಿಂತನೆ, ಜಾಗತಿಕ ರೈತ ಸಮಸ್ಯೆಗಳಿಗೆ ಸ್ಪಂದನ ಇದೆ ಮೊದಲಾದ ಅಂಶಗಳನ್ನು ಸಮಕಾಲೀನ ಲೇಖಕರು, ಹೋರಾಟಗಾರರು ಹಾಗೂ ಗಣ್ಯರಿಂದ ಸಂಗ್ರಹಿಸಲಾಗಿದ್ದು, ಪ್ರೊ. ಎಂ.ಡಿ.ಎನ್. ಅವರು ಚಳವಳಿಗಳ ಸಾಫಲ್ಯತೆಗೆ, ಅಳವಡಿಸಿಕೊಂಡಿರುವ ಮಾರ್ಗಗಳನ್ನು ವಿವರಿಸಲಾಗಿದೆ. ಈ ಗ್ರಂಥವು ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಪೂರಕವಾಗಿದ್ದು, ರೈತ ನಾಯಕತ್ವದ ಅಂಶವನ್ನು

ತಿಳಿಯಬಹುದಾಗಿದೆ. ಈ ಗ್ರಂಥವೂ ವರುಣ ನಾಲಾ ಚಳುವಳಿಯ ಬಗ್ಗೆ ನೀಡಿರುವ ಮಾಹಿತಿಯು ಪ್ರಸ್ತುತ ಅಧ್ಯಯನಕ್ಕೆ ಪೂರಕ ಮಾಹಿತಿ ನೀಡುತ್ತದೆ. **ನಂಜರಾಜು ಹೊಂಗನೂರು, (2009), ಕನ್ನಡದ ಕಾವೇರಿ (ನೀರಿನ ಹಂಚಿಕೆ ವಿವಾದದ ಸುತ್ತಮುತ್ತ), ಸಂಜಯ ಪ್ರಕಾಶನ, ಮೈಸೂರು.** ಕಾವೇರಿ ನ್ಯಾಯ ಮಂಡಳಿ ಅಂತಿಮ ತೀರ್ಪಿನ ವಿರುದ್ಧ ರಾಜ್ಯವ್ಯಾಪಿ ಹೋರಾಟ ಅಧ್ಯಯನದಲ್ಲಿ ಗುರುದೇವರಹಳ್ಳಿ ಮಾದೇಗೌಡರ ಪಾತ್ರದ ವಿಶ್ಲೇಷಿಸಲಾಗಿದೆ. ಸಂಶೋಧನೆಗೆ ಅಗತ್ಯವಾದ ಮಾಹಿತಿ ನೀಡುತ್ತದೆ.

**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ (2010) ಕಾವೇರಿ ಜಲ ವಿವಾದಗಳ ವರದಿ ಮತ್ತು ತೀರ್ಪು 'ಕಾವೇರಿ ಜಲ ವಿವಾದಗಳ ನ್ಯಾಯಾಧೀಕರಣದ ವರದಿ ಮತ್ತು ತೀರ್ಪು' ಪುಸ್ತಕವನ್ನು ಪ್ರಕಟಿಸಿದ್ದಾರೆ.** ಈ ಕೃತಿಯು ಐದು ಸಂಪುಟಗಳಿಂದ ಕೂಡಿದ್ದು 651 ಪುಟಗಳಿಂದ ಕೂಡಿದ ಬೃಹತ್ ಗ್ರಂಥವಾಗಿದೆ. ನಾಡಿನ ಜ್ವಲಂತ ಸಮಸ್ಯೆಯ ವಿಷಯವಾದ ಕಾವೇರಿ ನದಿ ವಿವಾದಗಳನ್ನು ನ್ಯಾಯಾಧೀಕರಣ ತೀರ್ಪನ್ನು ಕನ್ನಡದಲ್ಲಿ ಉಲ್ಲೇಖಿಸಲಾಗಿದೆ. ತಮಿಳುನಾಡು, ಕರ್ನಾಟಕ, ಕೇರಳ ಮತ್ತು ಕೇಂದ್ರಾಡಳಿತ ಪ್ರದೇಶವಾದ ಪಾಂಡಿಚೇರಿ ರಾಜ್ಯಗಳ ನಡುವಣ ಕಾವೇರಿ ನದಿ ಮತ್ತು ನದಿಕಣಿವೆಯ ನೀರಿನ ವಿಚಾರವಾಗಿ ವಿವಾದವೆದ್ದಾಗ ಅದನ್ನು ಬಗೆಹರಿಸಲು ಮತ್ತು ಅಂತರರಾಜ್ಯ ಸೌಹಾರ್ದತೆಯನ್ನು ಕಾಪಾಡುವುದಕ್ಕಾಗಿ ಕಾವೇರಿ ಜಲವಿವಾದಗಳ ನ್ಯಾಯಾಧೀಕರಣವನ್ನು ರಚಿಸಲಾಯಿತು. ಈ ಜಲವಿವಾದ ನ್ಯಾಯಾಧೀಕರಣದ ವರದಿ ಮತ್ತು ತೀರ್ಪಿನ್ನು ಐದು ಸಂಪಟುಗಳಲ್ಲಿ ಪ್ರಕಟಿಸಲಾಗಿದೆ, ವಿವಾದದ ಹಿನ್ನೆಲೆ ಮತ್ತು ವಿವಾದಾಂಶಗಳನ್ನು ಒಂದನೆಯ ಸಂಪುಟದಲ್ಲಿ, ಎರಡನೇ ಸಂಪುಟದಲ್ಲಿ 1862 ಮತ್ತು 1924ರ ಒಪ್ಪಂದಗಳನ್ನು ಪ್ರಸ್ತಾಪಿಸಲಾಗಿದೆ. ನೀರಿನ ಲಭ್ಯತೆಯ ಬಗ್ಗೆ ಮೂರನೇ ಸಂಪುಟದಲ್ಲಿ ಉಲ್ಲೇಖಿಸಿದೆ. ಕಾವೇರಿ ನದಿ ನೀರಿನ ಹಂಚಿಕೆಯ ಸೂತ್ರಗಳು. ತಮಿಳುನಾಡು ಮತ್ತು ಕರ್ನಾಟಕ ರಾಜ್ಯಗಳಲ್ಲಿ ನೀರಾವರಿ ಸೌಲಭ್ಯವಿರುವ ಪ್ರದೇಶಗಳನ್ನು ಐದನೇಯ ಸಂಪುಟದಲ್ಲಿ ಕಾವೇರಿ ನದಿಯ ನೀರಿನ ಹಂಚಿಕೆ ಕುರಿತು ಸುದೀರ್ಘವಾದ ಪ್ರಸ್ತಾಪವಿದೆ. ಇದೇ ಸಂಪುಟದ ಒಂಭತ್ತನೆಯ ಅಧ್ಯಾಯದಲ್ಲಿ ಕಾವೇರಿ ಜಲವಿವಾದಗಳ ನ್ಯಾಯಾಧೀಕರಣದ ಅಂತಿಮ ಆದೇಶ ಮತ್ತು ತೀರ್ಪು ಮೂಲತಃ ಆಂಗ್ಲ ಭಾಷೆಯಲ್ಲಿದೆ ಇದನ್ನು ಕನ್ನಡ ಭಾಷೆಗೆ ಅನುವಾದಿಸಿ, ಮೌಲ್ಯಯುತವಾದ ಮಾಹಿತಿಯನ್ನು ನೀಡಿದ್ದಾರೆ. ಕಾವೇರಿ ಚಳುವಳಿ ಆರಂಭ, ನ್ಯಾಯಾಲಯ ತೀರ್ಪುಗಳು, ಕರ್ನಾಟಕ ಮತ್ತು ತಮಿಳುನಾಡಿನ ಜನರಲ್ಲಿ ಪರ-ವಿರೋಧ ಅಭಿಪ್ರಾಯ ಹೊಂದಲು ಕಾರಣವಾದ ಮಾಹಿತಿ ಹಾಗೂ ಜಿಲ್ಲೆಯಲ್ಲಿ ನಡೆದ ಹೋರಾಟಗಳಲ್ಲಿ ಜಿ. ಮಾದೇಗೌಡರು ಚಳುವಳಿಯ ನೇತೃತ್ವ ವಹಿಸಲು ಕಾರಣವಾಗಿದ್ದ ಅಂಶಗಳು ಸಂಶೋಧನೆಗೆ ಅಗತ್ಯವಾದ ಮಾಹಿತಿಯನ್ನು ನೀಡುತ್ತದೆ. **ಶಿವರಾಮು.ಎಸ್., (2010), ಕೆ.ವಿ.ಶಂಕರಗೌಡ ಜೀವನ ಸಾಧನೆ ಈ ಕೃತಿಯನ್ನು ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ**

**ಕೇಂದ್ರ ಕರ್ನಾಟಕ ಸಂಘ (ರಿ.), ಪ್ರಕಟಿಸಿದೆ.** ಈ ಕೃತಿಯಲ್ಲಿ ಮೈಸೂರು ಚಲೋ ಚಳುವಳಿಯಲ್ಲಿ ಕೆ.ವಿ.ಶಂಕರಗೌಡರ ಪಾತ್ರವನ್ನು ನಿರೂಪಿಸಿದ್ದಾರೆ ಹಾಗೂ ಏಕೀಕರಣ ಚಳುವಳಿ ಸಂದರ್ಭದಲ್ಲಿ ಮೈಸೂರು ಯಥಾಸ್ಥಿತಿಯಲ್ಲಿ ಉಳಿಯಲಿ ಎಂದು ಮೈಸೂರು ವಿಲೀನ ವಿರೋಧಿ ಚಳುವಳಿಯನ್ನು ಆರಂಭಿಸಿದ್ದನ್ನು ತಿಳಿಸುತ್ತದೆ. ಈ ಕೃತಿಯಲ್ಲಿ ಕೆ.ವಿ.ಶಂಕರಗೌಡರ ಜೊತೆಗೆ ಜಿಲ್ಲೆಯ ವಿವಿಧ ಹೋರಾಟಗಾರರ ಹೆಸರನ್ನು ದಾಖಲಿಸಿದ್ದಾರೆ. ಇದರಲ್ಲಿ ಜಿ. ಮಾದೇಗೌಡರ ಹೆಸರಿದ್ದು, ಈ ಕೃತಿಯು ಸಂಶೋಧನೆಗೆ ಸಹಕಾರಿಯಾಗಿದೆ. **ಹರೀಶ್, (2010) ಕರ್ನಾಟಕದಲ್ಲಿ ರಾಜಕೀಯ ನಾಯಕತ್ವ ಜೆ.ಎಚ್.ಪಟೇಲ್ : ಒಂದು ಅಧ್ಯಯನ ಎಂಬ ಸಂಶೋಧನಾ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗಿದ್ದು ಪ್ರಕಟಗೊಂಡಿದೆ.** ಈ ಸಂಶೋಧನಾ ಮಹಾಪ್ರಬಂಧದಲ್ಲಿ ಜೆ.ಹೆಚ್.ಪಟೇಲ್‌ರು ಒಬ್ಬ ಸಮಾಜವಾದಿಯಾಗಿ, ಸಮಾಜದ ಅನೇಕ ವ್ಯವಸ್ಥೆಯಲ್ಲಿರುವ ಅಸಮಾನತೆಗಳನ್ನು ತೊಡೆದುಹಾಕುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ಶ್ರೀಯುತ ಪಟೇಲರು ಬೂರ್ಜ್ವಾ ವರ್ಗದ (ಶ್ರೀಮಂತ) ರೈತ ಸಮುದಾಯಕ್ಕೆ ಸೇರಿದರೂ ಗೇಣಿ ವ್ಯವಸ್ಥೆಯ ವಿರುದ್ಧ ಹೋರಾಟ ಮಾಡಿ ಭೂಸುಧಾರಣಾ ಕಾಯಿದೆಯನ್ನು ಅನುಷ್ಠಾನಗೊಳಿಸುವಲ್ಲಿ ತಮ್ಮದೇ ಆದ ವಿಶಿಷ್ಟ ಪಾತ್ರವನ್ನು ನಿರ್ವಹಿಸಿರುವ ಅಂಶಗಳು ಕಂಡುಬರುತ್ತವೆ. ಗೇಣಿದಾರರ ವ್ಯವಸ್ಥೆ ಮತ್ತು ಭೂ ಸುಧಾರಣಾ ಕಾಯಿದೆ ಅಂಶಗಳನ್ನು ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಸಂಶೋಧಕರು ಈ ಮಹಾಪ್ರಬಂಧದಲ್ಲಿ ನಾಯಕತ್ವಕ್ಕೆ ಸಂಬಂಧಿಸಿದಂತೆ ಎಲ್ಲಿಯೂ ಚರ್ಚಿಸಿಲ್ಲ ಹಾಗೂ ನಾಯಕತ್ವದ ಗುಣಲಕ್ಷಣಗಳ ಬಗೆಗೂ ಪ್ರಸ್ತಾಪಿಸಿರುವುದಿಲ್ಲ. ಜೊತೆಗೆ ರೈತ ಚಳವಳಿ ಮತ್ತು ರೈತ ಹೋರಾಟಗಳೆಂದರೆ ಭೂ ಸುಧಾರಣೆ ಒಂದೇ ಅಲ್ಲ. ಅದಕ್ಕೂ ಮೀರಿದ ಅಂಶಗಳ ಮೇಲೆ ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಈ ಸಂಶೋಧನಾ ಮಹಾಪ್ರಬಂಧವು ಸಂಶೋಧನಾ ಅಧ್ಯಯನಕ್ಕೆ ಹಲವು ಮಾಹಿತಿಗಳನ್ನು ಒದಗಿಸುತ್ತದೆ.

**ತಿಮ್ಮನಹಳ್ಳಿ ವೇಣುಗೋಪಾಲ್, (2010) ರೈತರು, ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳವಳಿ 1881–1947, ಬೆಂಗಳೂರು, ವರ ಪ್ರಕಾಶನದಲ್ಲಿ ಪ್ರಕಟಗೊಂಡಿದೆ.** ಈ ಸಂಶೋಧನಾ ಪ್ರಕಟಿತ ಮಹಾಪ್ರಬಂಧದಲ್ಲಿ ರಾಜ್ಯ ಸರ್ಕಾರದ ನೀರಾವರಿ ನೀತಿ ಮತ್ತು ಆ ಭಾಗದ ರೈತರ ಪ್ರತಿಭಟನೆಗಳು, ಇರ್ವಿನ್ ನಾಲಾ ಚಳವಳಿ ರೈತರ ಹೋರಾಟಗಳಿಗೆ ಕಾರಣವಾದ ಕಂದಾಯನೀತಿ, ರಾಷ್ಟ್ರೀಯ ಚಳವಳಿಯಲ್ಲಿ ರೈತರ ಭಾಗವಹಿಸುವಿಕೆ, ರೈತ ಹೋರಾಟಗಳ ಸಮ್ಮಿಲನ, ಮೈಸೂರು ಚಲೋ ಚಳವಳಿಗಳ ಬಗೆಗೆ ಮಾಹಿತಿ ಸಂಗ್ರಹಿಸಲಾಗಿದ್ದು ರೈತ ವಿರೋಧಿ ನೀತಿಗಳು ಜಾರಿಯಾದಾಗಲೆಲ್ಲಾ ರೈತ ಚಳವಳಿಗಳು ಪ್ರಾರಂಭಗೊಂಡಿರುವುದು ಈ ಪ್ರಬಂಧದಲ್ಲಿ ತಿಳಿದುಬರುತ್ತದೆ. ಪ್ರಸ್ತುತ ಸಂಶೋಧನಾ

ಅಧ್ಯಯನಕ್ಕೆ ರೈತ ಹೋರಾಟದ ರೂಪುರೇಷೆಗಳನ್ನು ಅಳವಡಿಸಲು ಪೂರಕವಾಗಿ ಮಾಹಿತಿ ಒದಗಿಸುತ್ತದೆ. **ಲಿಂಗಯ್ಯ.ಡಿ. (2011) ಶಿವಪುರ ಧ್ವಜ ಸತ್ಯಾಗ್ರಹ –ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆ ಗ್ರಂಥವು** ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಶಿವಪುರದಲ್ಲಿ ನಡೆದ ಮೈಸೂರು ಕಾಂಗ್ರೆಸ್‌ನ ಪ್ರಥಮ ಅಧಿವೇಶನದ ಸಮಗ್ರ ಮಾಹಿತಿ ನೀಡುವ ಪ್ರಥಮ ಕೃತಿಯಾಗಿದೆ. ಈ ಕೃತಿಯಲ್ಲಿ ಮುಖ್ಯವಾಗಿ 1938ಕ್ಕೂ ಮೊದಲು ಮೈಸೂರು ಸಂಸ್ಥಾನದ ರಾಜಕೀಯ ಪರಿಸ್ಥಿತಿ, 1938ರಲ್ಲಿ ನಡೆದ ಶಿವಪುರ ಧ್ವಜ ಸತ್ಯಾಗ್ರಹದ ವಿವರಗಳು, ನಂತರ ಧ್ವಜ ಸತ್ಯಾಗ್ರಹದ ಪ್ರಭಾವದ ಬಗ್ಗೆ ಉಲ್ಲೇಖಿಸಿದ್ದು ಹಾಗೂ ಮೈಸೂರು ಕಾಂಗ್ರೆಸ್ ಪ್ರಥಮ ಅಧಿವೇಶನದಲ್ಲಿ ಭಾಗವಹಿಸಿದ ಹೋರಾಟಗಾರರ ಪಟ್ಟಿಯಲ್ಲಿ ಜಿ. ಮಾದೇಗೌಡರ ಹೆಸರು ಕೂಡ ಇದೆ. ಈ ಕೃತಿ ಸಂಶೋಧನೆಗೆ ಮಹತ್ವದ ದಾಖಲೆಯಾಗಿದೆ. **ಶಿವರಾಮು.ಎಸ್. (2011), ಮಂಡ್ಯ ಜಿಲ್ಲೆಯ ಜನಪರ ಹೋರಾಟಗಳು ಕೃತಿಯನ್ನು ಮನೋಜ್ ಪಬ್ಲಿಕೇಷನ್ ಪ್ರಕಟಿಸಿದೆ.** ಮಂಡ್ಯ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಚಳುವಳಿಗಳನ್ನು ವಿಶ್ಲೇಷಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾಗಿ ಸ್ವಾತಂತ್ರ್ಯ ನಂತರ ನಡೆದ ಮೈಸೂರು ವಿಲೀನ ವಿರೋಧಿ ಆಂದೋಲನ, ವರುಣಾ ನಾಲಾ ವಿರೋಧಿ ಆಂದೋಲನ, ಕಾವೇರಿ ಚಳುವಳಿಯ ಸಂಕ್ಷಿಪ್ತ ನೋಟ ಮತ್ತು ಗೋಕಾಕ್ ಚಳುವಳಿ. ಜಿ. ಮಾದೇಗೌಡರು ಕೂಡಾ ಗೋಕಾಕ್ ಚಳುವಳಿ ಮತ್ತು ವರುಣಾನಾಲಾ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದರು ಹಾಗೂ ಜಿಲ್ಲೆಯ ಹೋರಾಟಗಾರರನ್ನು ಉಲ್ಲೇಖಿಸುವಾಗಿ ಜಿ. ಮಾದೇಗೌಡರ ಹೆಸರನ್ನು ಕೂಡ ಲೇಖಕರು ದಾಖಲಿಸಿದ್ದಾರೆ ಇದು ಸಂಶೋಧನೆಗೆ ಅಗತ್ಯವಾದ ಮಾಹಿತಿ ನೀಡುತ್ತದೆ. **ರಾಮಚಂದ್ರೇಗೌಡ.ಹಿ.ಶಿ. (2011) ಕರ್ನಾಟಕ ರೈತ ಚಳವಳಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ಪ್ರಸಾರಾಂಗದ ವತಿಯಿಂದ ಪ್ರಕಾಶನಗೊಂಡಿದೆ.** ಈ ಗ್ರಂಥದಲ್ಲಿ ಚಳವಳಿಯ ಸ್ವರೂಪ, ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯಾನಂತರದ ರೈತ ಚಳವಳಿಗಳನ್ನು ಕುರಿತು ಚರ್ಚಿಸಿದ್ದಾರೆ. ರೈತ ಚಳವಳಿಯ ಹೆಸರಿನಲ್ಲಿ ಅನೇಕ ಸಂಘಟನೆಗಳು ಪ್ರಾರಂಭಗೊಂಡು ತಾತ್ಕಾಲಿಕ ಅವಶ್ಯಕತೆಗಳನ್ನು ಪೂರೈಸಿಕೊಂಡಿರುವ ಬಗೆಗೆ, ಅಂತಹ ಸಂಘಟನೆಗಳ ನಾಯಕರು ನಾಯಕತ್ವನ್ನು ಉಳಿಸಿಕೊಳ್ಳದೇ ಇರುವ ಬಗೆ ವಿವರಿಸಿದ್ದಾರೆ. ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ತಮ್ಮ ಜೀವಿತದ ಉದ್ದಕ್ಕೂ ನಾಯಕತ್ವವನ್ನು ರೈತರ ಕಲ್ಯಾಣಕ್ಕಾಗಿ ಪ್ರಸ್ತುತ 92ನೇ ಇಳಿಯವಯಸ್ಸಿನಲ್ಲಿಯೂ ಮುಡುಪಾಗಿಟ್ಟಿರುವುದನ್ನು ಗುರುತಿಸಲಾಗಿದೆ. **ರಾಮಕೃಷ್ಣ.ಮ., (2011) ಮಳವಳ್ಳಿ ಮುತ್ತು, (ಮಳವಳ್ಳಿ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ) ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಾಶನ, ಮಳವಳ್ಳಿ.** ಮಳವಳ್ಳಿ ತಾಲ್ಲೂಕಿನ ಶಿಕ್ಷಣ ಸಂಸ್ಥೆಗಳ ಲೇಖನ, ಜಿ.ಮಾದೇಗೌಡರ ಶಿಕ್ಷಣ ಸಂಸ್ಥೆಗಳ ಬಗ್ಗೆ ಉಲ್ಲೇಖಿಸಿದೆ. ಸಂಶೋಧನೆಗೆ ಪೂರಕವದ ಮಾಹಿತಿ ನೀಡುತ್ತದೆ. **ರಾಜೇಗೌಡ.ಹ.ಕ., (2012) ಗ್ರಾಮ ಚೇತನ, ಡಾ. ಎಚ್.ಡಿ.ಚೌಡಯ್ಯ ಅಭಿನಂದನಾ ಸಮಿತಿ, ಮಂಡ್ಯ..** ಜಿ.

ಮಾದೇಗೌಡರ ರಾಜಕೀಯ ಜೀವನ ಹಾಗೂ ಶಿಕ್ಷಣದಲ್ಲಿ ಕಂಡಂತಹ ಬದಲಾವಣೆಗಳು, ವರುಣ ನಾಲಾ ವಿರೋಧಿ ಚಳುವಳಿ. ಕಾವೇರಿ ಚಳುವಳಿಗೆ ಸಂಬಂಧಿಸಿದಂತೆ ಅನೇಕ ಅಂಶಗಳನ್ನು ಈ ಕೃತಿಯಲ್ಲಿ ರಚಿಸಲಾಗಿದೆ. ಸಂಶೋಧನೆಗೆ ಪೂರಕ ಅಂಶಗಳನ್ನು ಒದಗಿಸುತ್ತದೆ. **ಸಿದ್ದರಾಜು.ಸಿ. ಆಲಕೆರೆ, (2012) ಕಾವೇರಿ ಚಳುವಳಿ (ಆಗಸ್ಟ್-ಡಿಸೆಂಬರ್ 2012)** ಈ ಗ್ರಂಥವು 220 ಪುಟಗಳಿಂದ ಕೂಡಿದೆ. 2012ರಲ್ಲಿ ಮಂಡ್ಯ ಜಿಲ್ಲೆಯಲ್ಲಿ ನಡೆದ ಕಾವೇರಿ ಚಳುವಳಿಯ ಪ್ರತಿದಿನದ ಮಾಹಿತಿಯನ್ನು ಬಹಳ ಮೌಲ್ಯಯುತವಾದ ವಿಷಯಗಳೊಂದಿಗೆ ವಿವರಿಸಿದ್ದಾರೆ. ಕಾವೇರಿ ನದಿ ನೀರಿನ ವಿವಾದ ಬಗೆಹರಿಸಲಾಗದ ಜಟಿಲ ಸಮಸ್ಯೆಯಾಗಿ ರಾಜ್ಯವನ್ನು ಹಾಗೂ ಮಂಡ್ಯ ಜಿಲ್ಲೆಯನ್ನು ಕಾಡುತ್ತಿರುವ ದಿಕ್ಕಿನಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರದ ಮಂಡ್ಯ ಜಿಲ್ಲೆಯಲ್ಲಿ ನಡೆದ ಪ್ರಮುಖ ರೈತ ಚಳುವಳಿಯಲ್ಲಿ ಕಾವೇರಿ ಚಳುವಳಿ ಮುಖ್ಯವಾದುದ್ದು. ಕಾಲಕಾಲಕ್ಕೆ ವಿವಿಧ ನಾಯಕರುಗಳ ನೇತೃತ್ವದಲ್ಲಿ ನಡೆದ ಈ ಚಳುವಳಿಗೆ 2012ರಲ್ಲಿ ಜಿ. ಮಾದೇಗೌಡರ ನೇತೃತ್ವಕ್ಕೆ ಜನತೆ ಸ್ಪಂದಿಸಿದ ರೀತಿಯನ್ನು ವಿವರಿಸಿದ್ದಾರೆ. ಈ ಚಳುವಳಿಯಲ್ಲಿ ಜಿಲ್ಲೆ ಮಾತ್ರವಲ್ಲದೆ ರಾಜ್ಯದ ಹಲವಾರು ಚಿಂತಕರು, ಬರಹಗಾರರು, ಸಾಹಿತಿಗಳು, ಕಲಾವಿದರು, ಬೆಳ್ಳಿತೆರೆ, ಕಿರುತೆರೆ ಕಲಾವಿದರು, ಹಲವಾರು ಸಂಘ ಸಂಸ್ಥೆಗಳು, ಮಹಿಳಾ ಸಂಘಟನೆಗಳು, ಶಾಲಾ ಕಾಲೇಜಿನ ವಿದ್ಯಾರ್ಥಿಗಳು, ರಾಜಕೀಯ ಮುಖಂಡರುಗಳು ಭಾಗವಹಿಸಿ ಈ ಚಳುವಳಿಯು ರಾಜ್ಯದಾದ್ಯಂತ ಜನಾಂದೋಲನ ವಾಗಿ ರೂಪುಗೊಂಡ ಪ್ರತಿನಿತ್ಯದ ಹೋರಾಟದ ಉಪಯುಕ್ತ ಮಾಹಿತಿಯನ್ನು ವಿಸ್ತೃತವಾಗಿ ವಿವರಿಸಿದ್ದಾರೆ. ಅಮೂಲ್ಯವಾದ ಮಾಹಿತಿಯನ್ನು ಒದಗಿಸುತ್ತದೆ.

**ಸಂದೇಶ.ಎಲ್. (ಸಂ.), (2012) ಜನನಾಯಕರು ಮಂಡ್ಯ ಜಿಲ್ಲಾ ಜನಪ್ರತಿನಿಧಿಗಳ ಡೈರೆಕ್ಟರ್ ಕಾಯಕಯೋಗಿ ಪ್ರಕಾಶನ ಮಂಡ್ಯ.**. ಎಲ್.ಸಂದೇಶ, ಇಂಡ್ಯಾ ಕಂಡ ಮಂಡ್ಯ ನಾಯಕರು ಲೇಖನದಲ್ಲಿ ಜಿ. ಮಾದೇಗೌಡರ ರಾಜಕೀಯದ ಬಗ್ಗೆ ಚರ್ಚಿಸಿ (ಜಿಲ್ಲೆಯ ಲೋಕಸಭಾ ಸದಸ್ಯರಾಗಿ)ದ ವಿಚಾರ ದಾಖಲಾಗಿದೆ. ಜಿ.ಟಿ.ವೀರಪ್ಪ ಬರೆದಿರುವ ಮಂಡ್ಯ ಜಿಲ್ಲೆಯ ಜನಪರ ಚಳುವಳಿ ಲೇಖನ, ಎಂ.ಶಿವಕುಮಾರರವರು ಬರೆದಿರುವ ಅತಿರಥ ಮಹರಥರ ಪರಾಭವ! ನಾಯಕರ ರಾಜಕೀಯ ಸೋಲು-ಗೆಲುವು, ಎಲ್.ಸಂದೇಶ್ ಬರೆದಿರುವ ಜಿ.ಮಾದೇಗೌಡರ ಚಕ್ರಾಧಿಪತ್ಯ ಕಿರುಗಾವಲು ಸಾಮ್ರಾಜ್ಯ ಈ ಎಲ್ಲಾ ಲೇಖನಗಳು ಜಿ. ಮಾದೇಗೌಡರ ರಾಜಕೀಯ ಜೀವನ ಹಾಗೂ ಪರಿಚಯ ನೀಡುತ್ತದೆ. ಸಂಶೋಧನೆಗೆ ಪೂರಕವಾದ ಮಾಹಿತಿ ನೀಡುತ್ತದೆ. **ಕಾಲಭೈರವರವರು (2013) ಶತಮಾನಗಳ ಕಾವೇರಿ ಹೆಜ್ಜೆಗಳು ಐಡಿಯಲ್ ಆಫ್‌ಸೆಟ್ ಪ್ರಿಂಟರ್ಸ್** ರವರಿಂದ **ಮುದ್ರಣಗೊಂಡಿದೆ**. ಈ ಕೃತಿಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ನಡೆದಂತಹ ಅನೇಕ ಹೋರಾಟಗಳಲ್ಲಿ ತಮಿಳುನಾಡು ಹಾಗೂ ಕರ್ನಾಟಕಕ್ಕೆ ನೀರು ಹೇಗೆ ವಿತರಣೆಯಾಗಬೇಕು ಹಾಗೂ ಕಾವೇರಿ ಜಲ ವಿವಾದಕ್ಕೆ ಕಾರಣವಾದ, ಐತಿಹಾಸಿಕ

ಅಂಶಗಳು, ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಅಂಶಗಳು ನ್ಯಾಯ ಮಂಡಳಿಯ ಪಾತ್ರ ಮತ್ತು ಕಾವೇರಿ ಜಲವಿವಾದ, ಕಾವೇರಿ ಜಲವಿವಾದದ ಅಂತಿಮ ತೀರ್ಪುಗೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನು ಚರ್ಚಿಸಿದ್ದಾರೆ. ಪ್ರಮುಖವಾಗಿ ಈ ಹೋರಾಟದ ಜವಾಬ್ದಾರಿ ಹೊಂದಿದ್ದ ಜಿ. ಮಾದೇಗೌಡರ ಹೋರಾಟದ ಅನೇಕ ಚಿತ್ರಣಗಳನ್ನು ಲೇಖಕರು ಈ ಕೃತಿಯಲ್ಲಿ ಪ್ರಕಟಿಸಿದ್ದು ಇದು ಸಂಶೋಧನೆಗೆ ಸಹಕಾರಿಯಾಗಿದೆ. **ಸಿದ್ದರಾಜು.ನಿ., (2014) ಹೊರಳು ಹೊಳಹು ಚನ್ನಟ್ಟಿ ಪ್ರಕಾಶನ, ಮಂಡ್ಯ.** ಈ ಕೃತಿಯು ಮಂಡ್ಯ ಜಿಲ್ಲೆಯಲ್ಲಿ ನಡೆದಂತಹ ವರುಣ ನಾಲಾ ವಿರೋಧಿ ಚಳುವಳಿಯಲ್ಲಿ ಭಾಗವಹಿಸಿದಂತಹ ಅನೇಕ ನಾಯಕರುಗಳ ಬಗ್ಗೆ ವಿಸ್ತಾರವಾದ ಮಾಹಿತಿಯನ್ನು ನೀಡುತ್ತದೆ. **ಮಂಡ್ಯ ಚಡ್ಡಿ** ಮೆರವಣಿಗೆ ಎಂದು ದೇಶದಲ್ಲೇ ಪ್ರಖ್ಯಾತಿ ಪಡೆದಿರುವ ವಿಚಾರವನ್ನೂ ಉಲ್ಲೇಖಿಸಿದೆ ಹಾಗೂ ಈ ಚಳುವಳಿಯ ಸಂದರ್ಭದಲ್ಲಿ ಅಂದಿನ ಜಿಲ್ಲಾಧಿಕಾರಿ ಚಿರಂಜೀವಿ ಸಿಂಗ್ ಚಳಿವಳಿಗಾರರ ನಡುವೆ ಇದ್ದು ಸಹಕರಿಸಿದರೆಂದು ಇಂದಿಗೂ ಜಿ. ಮಾದೇಗೌಡರು ಅವರನ್ನು ನೆನೆಯುತ್ತಾರೆ ಎಂಬುದನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಈ ಕೃತಿಯು ಸಂಶೋಧನೆಗೆ ಸಹಕಾರಿಯಾಗಿದೆ. **ಲೀಲಾ ಅಪ್ಪಾಜಿ (ಸಂ.), (2015) ಅಮೃತ ಮಂಡ್ಯ, ಮಂಡ್ಯ ಜಿಲ್ಲಾ ಅಮೃತ ಮಹೋತ್ಸವ ಸ್ಮರಣ ಸಂಪುಟ, ಅಮೃತ ಮಹೋತ್ಸವ ಸ್ಮರಣ ಸಂಪುಟ ಸಮಿತಿ, ಜಿಲ್ಲಾಡಳಿತ ಮಂಡ್ಯ.**. ಈ ಸ್ಮರಣೀಯ ಸಂಪುಟವು ಜಿಲ್ಲೆಯ ಅಮೃತ ಮಹೋತ್ಸವ ಸಂರ್ದಭದಲ್ಲಿ ಪ್ರಕಟವಾಗಿದೆ. ಮಂಡ್ಯ ಜಿಲ್ಲೆಯ 75 ವರ್ಷಗಳ ಸಂಪೂರ್ಣ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಲಾಗಿದೆ. ಈ ಸಂಪುಟದಲ್ಲಿ ಜಿ. ಮಾದೇಗೌಡ ತಾಂತ್ರಿಕ ವಿದ್ಯಾಲಯ ಲೇಖನ, ಮಂಡ್ಯ ಅಭಿವೃದ್ಧಿ ಮತ್ತು ರಾಜಕಾರಣ, ಉ.ಮ.ಮಹೇಶ ಲೇಖನವಾಗಿದ್ದು, ಮಂಡ್ಯ ಜಿಲ್ಲೆಯ ರಾಜಕಾರಣದ ಬಗ್ಗೆ ಮಾಹಿತಿ ನೀಡುತ್ತದೆ. ಅದರಲ್ಲಿ ವಿಶೇಷವಾಗಿ ಜಿ. ಮಾದೇಗೌಡರ ಬಗ್ಗೆ ಉಲ್ಲೇಖನವಿದ್ದು, ಸಂಶೋಧನೆಗೆ ಪೂರಕವಾದ ಮಾಹಿತಿ ನೀಡುತ್ತದೆ. ಎನ್.ಜಗದೀಶ ಕೊಪ್ಪರವರು ಮಂಡ್ಯದ ಕೆಲವು ಹೆಜ್ಜೆಗುರುತು ಲೇಖನದಲ್ಲಿ ಜಿ.ಮಾದೇಗೌಡರ ಬಗ್ಗೆ ಉಲ್ಲೇಖಿಸಿದ್ದಾರೆ. ಈ ಕೃತಿಯು ಸಂಶೋಧನೆಗೆ ಪೂರಕವಾದ ಮಾಹಿತಿ ನೀಡುತ್ತದೆ.

ಈ ಎಲ್ಲಾ ದ್ವಿತೀಯ ಆಕರಗಳಾದ ಸ್ಮರಣೀಯ ಸಂಚಿಕೆ, ಗ್ರಂಥಗಳು, ಕೃತಿಗಳು, ಲೇಖನಗಳು, ಅಭಿನಂದನಾ ಗ್ರಂಥಗಳು ಬಂದಿವೆ. ಆದರೆ ಎಲ್ಲಿಯೂ ಗಂಭೀರ ಅಧ್ಯಾಯನಗಳು ನಡೆದಿಲ್ಲ ಎಂದರೆ ತಪ್ಪಗಲಾರದು. ಆದುದರಿಂದ ಈ ಕೊರಿಕೆಯನ್ನು ನೀಗುವ ದಿಸೆಯಲ್ಲಿ ಈ ಪ್ರಯತ್ನ ಕೆಲವು ಕೃತಿಗಳು ಇವರ ಬಗ್ಗೆ ಬೆಳಕನ್ನು ಚೆಲ್ಲುವ ಪ್ರಯತ್ನ ನಡೆಸಿದ್ದರೂ ಅವುಗಳಿಂದೂ ಒಂದು ಸಮಗ್ರ ನೋಟ ದೊರೆಯುವುದಿಲ್ಲ. ಇವುಗಳಲ್ಲಿ ವಿಮರ್ಶಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಂಶಗಳು ಕಡಿಮೆ.

# ಅಧ್ಯಾಯ–ಎರಡು

# ಜಿ.ಮಾದೇಗೌಡರ ವ್ಯಕ್ತಿ ಜೀವನ, ಪರಿಸರ ಹಾಗೂ ಪ್ರಭಾವ

2.1 ಜನನ, ಬಾಲ್ಯ, ಮನೆತನದ ಹಿನ್ನೆಲೆ

2.2 ಶಿಕ್ಷಣ

2.3 ವೃತ್ತಿ ಜೀವನ

2.4 ವೈವಾಹಿಕ ಜೀವನ

2.5 ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ನೀರು ಕೊಡುವ ಕಾಯಕದಲ್ಲಿ ಜಿ.ಮಾದೇಗೌಡರು (1938)

2.6 ಮಂಡ್ಯ ಜಿಲ್ಲೆಯ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕರಪತ್ರ ವಿತರಣೆಯಲ್ಲಿ ಜಿ.ಮಾದೇಗೌಡರು (1942)

2.7 ಮೈಸೂರು ವಿಲೀನ ವಿರೋಧಿ ಚಳುವಳಿಯಲ್ಲಿ ಜಿ.ಮಾದೇಗೌಡರ ಪಾತ್ರ (1956)

2.8 ಗೋಕಾಕ್ ಚಳುವಳಿಯಲ್ಲಿ ಜಿ.ಮಾದೇಗೌಡರ ಪಾತ್ರ (1982)

2.9 ಗಾಂಧೀಜಿಯ ಪ್ರಭಾವ ಹಾಗೂ ರಚನಾತ್ಮಕ ಕಾರ್ಯಗಳ ಅನುಷ್ಠಾನದಲ್ಲಿ ಜಿ.ಮಾದೇಗೌಡರು

# ಅಧ್ಯಾಯ–ಎರಡು

# ಜಿ.ಮಾದೇಗೌಡರ ವ್ಯಕ್ತಿ ಜೀವನ, ಪರಿಸರ ಹಾಗೂ ಪ್ರಭಾವ

## 2.1 ಜನನ, ಬಾಲ್ಯ, ಮನೆತನದ ಹಿನ್ನೆಲೆ

ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಗುರುದೇವರಹಳ್ಳಿ ಎಂಬ ಗ್ರಾಮದಲ್ಲಿ ಜುಲೈ 10, 1928ರಂದು ಪುಟ್ಟೇಗೌಡ ಮತ್ತು ಕಾಳಮ್ಮ ದಂಪತಿಗಳ ಪುತ್ರರಾಗಿ ಜಿ.ಮಾದೇಗೌಡರು ಜನಿಸಿದರು. ಈ ದಂಪತಿಗಳಿಗೆ ಒಟ್ಟು ಆರು ಜನ ಮಕ್ಕಳಲ್ಲಿ ಜಿ.ಮಾದೇಗೌಡರು ಕೊನೆಯವರು. ಗುರುದೇವರಹಳ್ಳಿ ಅಂದು ಕುಗ್ರಾಮವಾಗಿದ್ದು, ರೈತಾಪಿ ಕುಟುಂಬಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದವು. ಇವರ ತಂದೆಯವರಾದ ಪುಟ್ಟೇಗೌಡರು ಗ್ರಾಮದ ಮುಖಂಡರಾಗಿದ್ದರು. ಇವರು ಗ್ರಾಮದ ರೈತರಿಗೆ ಹೊಲಗದ್ದೆಗಳನ್ನು ಸರಿಮಾಡಿಕೊಟ್ಟು ಜೊತೆಗೆ ಸಹಾಯವನ್ನು ಮಾಡುವ ಸದ್ಗುಣಗಳನ್ನು ಹೊಂದಿದರು. ಕಾಳಮ್ಮನವರು ಪತಿಗೆ ತಕ್ಕ ಪತ್ನಿಯಾಗಿದ್ದರು[1]. ಇಂತಹ ರೈತಾಪಿ ಕುಟುಂಬದಿಂದ ಜಿ. ಮಾದೇಗೌಡರು ಬಂದಿದ್ದು, ರೈತರು ಎದುರಿಸುತ್ತಿದ್ದ ಸಮಸ್ಯೆಗಳನ್ನು ತಮ್ಮ ತಂದೆಯೊಂದಿಗೆ ಕಣ್ಣಾರೆ ಕಂಡಿದ್ದರು. ಅವುಗಳಿಗೆ ಪರಿಹಾರವನ್ನು ರೂಪಿಸುವ ಮನೋಭಾವನೆ ತಾಳಿದರು. ಜಿ. ಮಾದೇಗೌಡರು ತಮ್ಮ ತಂದೆ ಪುಟ್ಟೇಗೌಡರಿಂದ ಅನೇಕ ಸ್ವಾತಿಕ ಗುಣಗಳನ್ನು ರಕ್ತಗತವಾಗಿಯೇ ಪಡೆದುಕೊಂಡಿದ್ದಾರೆ. ವಿಶಾಲ ಮನಸ್ಸು, ಹೃದಯವಂತಿಕೆ, ತಪ್ಪನ್ನು ಕಂಡಲ್ಲಿಯೇ ಪ್ರತಿರೋಧಿಸಿ ಸರಿಪಡಿಸುವ ಎದೆಗಾರಿಕೆ ಇವೆಲ್ಲವೂ ತಂದೆಯವರಿಂದಲೇ ಬಂದ ಗುಣಗಳಾಗಿವೆ. ಬಾಲ್ಯದಲ್ಲಿಯೇ ಉತ್ತಮ ಸಂಸ್ಕಾರ ಕುಟುಂಬದ ಪ್ರಭಾವಕ್ಕೆ ಒಳಗಾಗಿದ್ದು, ತಮ್ಮ ಜೀವನದುದ್ದಕ್ಕೂ ಒಳ್ಳೆಯಗುಣಗಳನ್ನು ಕಾಪಾಡಿಕೊಂಡಿದ್ದಾರೆ ಹಾಗೂ ಆದರ್ಶ ಪ್ರಾಯರಾಗಿದ್ದಾರೆ.

ಜಿ. ಮಾದೇಗೌಡರಿಗೆ ತಮ್ಮ 10ನೇ ವಯಸ್ಸಿನಲ್ಲಿ ಸ್ವಾತಂತ್ರ್ಯಹೋರಾಟದಲ್ಲಿ ಪಾಲ್ಗೊಳ್ಳುವ ಸದಾ ಅವಕಾಶ ಸಿಕ್ಕಿತು. ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿಯ ಮೊದಲ ಘಟ್ಟವಾಗಿದ್ದ ಶಿವಪುರ ರಾಷ್ಟಕೂಟದಲ್ಲಿ ಭಾಗವಹಿಸಿದ್ದರು. ಶಿವಪುರದಲ್ಲಿ ಧ್ವಜಸತ್ಯಾಗ್ರಹ ಆಯೋಜಿಸುವಲ್ಲಿ ಪ್ರಧಾನ ಪಾತ್ರವಹಿಸಿದ ಹೆಚ್.ಕೆ.ವೀರಣ್ಣಗೌಡರು ಆಗಾಗ್ಗೆ ನೀಡುತ್ತಿದ್ದ ಕರೆಗೆ ಓಗೊಟ್ಟು ಕೆಂಪೇಗೌಡರ ಜೊತೆಗೆ ಸ್ವಾತಂತ್ರ್ಯ ಹೋರಾಟದ ಜಾಥಕ್ಕೆ ಹೋಗುತ್ತಿದ್ದ ವಿದ್ಯಾರ್ಥಿಗಳಲ್ಲಿ ಜಿ.ಮಾದೇಗೌಡರು ಒಬ್ಬರು. ಮದ್ದೂರಿಗೆ ಹೋಗಿ ಭಾರತ ಮಾತಾಕೀ ಜೈ ಕಾಂಗ್ರೆಸ್‌ಗೆ ಜೈ ಎಂದು ಕೂಗುವುದು ಬಾಲ್ಯದಲ್ಲಿಯೇ ರಾಷ್ಟ್ರೀಯ ಭಾವನೆ ಮತ್ತು ರಾಷ್ಟ್ರದ ಸ್ವಾತಂತ್ರ್ಯದಲ್ಲಿ ಆಸಕ್ತಿ ಮೂಡಿಸಿತ್ತು. ತರುವಾಯ 1942ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕರಪತ್ರ ವಿತರಣೆಯ ಕಾರ್ಯನಿರ್ವಹಿಸಿದ್ದರು[2].

## 2.2 ಶಿಕ್ಷಣ

ಜಿ.ಮಾದೇಗೌಡರ ಹುಟ್ಟೂರಾದ ಗುರುದೇವರಹಳ್ಳಿಯಲ್ಲಿ ಶಿಕ್ಷಣಕ್ಕೆ ಅನುಕೂಲ ವಿಲ್ಲದ್ದರಿಂದ ತಾಯಿಯ ತವರೂರಾದ ಮಂಡ್ಯದ ಹೊಸಹಳ್ಳಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದರು. ತದನಂತರ ಪ್ರೌಢಶಿಕ್ಷಣವನ್ನು ಕ್ಯಾತುಂಗೆರೆ ಶಾಲೆಯಲ್ಲಿಯೂ ತರುವಾಯ ಮಂಡ್ಯ ನಗರದಲ್ಲಿ ಇಂಟರ್ ಮೀಡಿಯೆಟ್ ಶಿಕ್ಷಣಕ್ಕಾಗಿ ಮಾಜಿ ಪುರಸಭೆ ಕಾಲೇಜಿನಲ್ಲಿ ಸೇರ್ಪಡೆಯಾದರು. ಮಂಡ್ಯದಲ್ಲಿ ಪಿ.ಯು.ಸಿ. ಓದುವಾಗ ವಿಜ್ಞಾನ ವಿಷಯವನ್ನು ತೆಗೆದುಕೊಂಡಿದ್ದರು. ಆದರೆ ನಾಯಕತ್ವ ಗುಣಗಳನ್ನು ಹೊಂದಿದ್ದ ಜಿ.ಮಾದೇಗೌಡರು ಕ್ರೀಡೆ, ಸಾಂಸ್ಕೃತಿಕ ಸಂಘ, ಕಾಲೇಜಿನ ವಿದ್ಯಾರ್ಥಿ ಸಂಘದ ಚುನಾವಣೆಗಳಲ್ಲಿ ಭಾಗವಹಿಸುವುದರ ಮೂಲಕ ಓದುನಲ್ಲಿ ಹಿಂದೆ ಉಳಿಯಬೇಕಾಯಿತು. ಪರಿಣಾಮವಾಗಿ ಪಿ.ಯು.ಸಿ.ಯಲ್ಲಿ ಅನುತ್ತೀರ್ಣರಾದರು. ನಂತರ ಮರು ಪರೀಕ್ಷೆಯಲ್ಲಿ ಉತ್ತೀರ್ಣರಾದರು.[3] ಉನ್ನತ ಶಿಕ್ಷಣಕ್ಕಾಗಿ ಮೈಸೂರಿನಲ್ಲಿ ಓದುವ ಅವಕಾಶ ದೊರೆಕಿತು, ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಪದವಿ ಪಡೆಯುವಲ್ಲಿ ಯಶಸ್ವಿಯಾದರು. ರಾಷ್ಟ್ರಪಶಸ್ತಿ ವಿಜೇತ ಶಿಕ್ಷಕರಾದ ಸೀತಾರಾಮರಾವ್, ಹೆಚ್.ಎಂ.ರಾಮನಾಥನ್ ಮುಂತಾದ ನುರಿತ ಶಿಕ್ಷಕರು, ಅವರ ವಿದ್ಯಾಗುರುಗಳಾಗಿದ್ದ ಕಾರಣ ಜಿ.ಮಾದೇಗೌಡರ ಬೌದ್ಧಿಕ ವಿಕಾಸನಕ್ಕೆ ಹೆಚ್ಚಿನ ಅವಕಾಶ ಸಿಕ್ಕಿತು. ಈ ಅವಧಿಯಲ್ಲಿ ರಾಷ್ಟ್ರಕವಿ ಕುವೆಂಪುರವರು ಪ್ರಾಧ್ಯಾಪಕರಾಗಿದ್ದರು. ಇವರ ಪ್ರಭಾವಕ್ಕೆ ಒಳಗಾಗಿದ್ದರು. ಕುವೆಂಪುರನ್ನು ಕಂಡರೆ ವಿಶೇಷ ಭಕ್ತಿ, ಗೌರವವನ್ನು ಹೊಂದಿದ್ದರು[4]. ಬೆಂಗಳೂರಿನ ಸರ್ಕಾರಿ ಲಾ ಕಾಲೇಜಿನಲ್ಲಿ ಕಾನೂನು ಪದವಿಯನ್ನು ಪಡೆದರು.

ಜಿ.ಮಾದೇಗೌಡರು ಕಾಲೇಜು ದಿನಗಳಲ್ಲಿ ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿಯನ್ನು ಹೊಂದಿದ್ದರು. ಅಂದು ಅವರೊಬ್ಬ ವಾಲಿಬಾಲ್ ಕ್ರೀಡಾಪಟುವಾಗಿದ್ದು ಮೈಸೂರು ವಿಶ್ವವಿದ್ಯಾಲಯದ ಅಂತರ ಕಾಲೇಜುಗಳ ವಾಲಿಬಾಲ್ ಪಂದ್ಯದಲ್ಲಿ ಜಯಗಳಿಸಿ ಕಾಲೇಜಿಗೆ ಕೀರ್ತಿಯನ್ನು ತಂದಿದ್ದರು. ಅಲ್ಲದೇ ಸಾಂಸ್ಕೃತಿಕ ಚಟುವಟಿಕೆಗಳಾಗಿ ಕಾಲೇಜು ಕನ್ನಡ ಸಂಘವನ್ನು ಸಂಘಟಿಸಿದ್ದರು. ಕನ್ನಡ ಸಂಘದ ಮೂಲಕ ಪ್ರಮುಖ ಸಾಹಿತಿಗಳನ್ನು ಕರೆಸಿ ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು. ಅದರಲ್ಲಿ ಪ್ರಮುಖವಾಗಿ ರಾಷ್ಟ್ರಕವಿ ಕುವೆಂಪುರವರ ಶ್ರೀರಾಮಾಯಣದರ್ಶನಂ ಬಗ್ಗೆ ಪ್ರತಿವಾರವೂ ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸು ತ್ತಿದ್ದರು. ಕನ್ನಡ ಸಂಘದ ಮೂಲಕ ಪುಸ್ತಕಗಳನ್ನು ಸಂಗ್ರಹಿಸಿ ಗ್ರಂಥಾಲಯ ಸ್ಥಾಪಿಸಿದ್ದರು. ಅಂದು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕೃಷ್ಣರಾಮ ಪುರುಷೋತ್ತಮ, ಮೋಹನ್‌ದಾಸ್, ರಾಷ್ಟ್ರಕವಿ ಕುವೆಂಪು, ಪರಮೇಶ್ವರಭಟ್ಟರು. ಪ್ರಖ್ಯಾತ ಪ್ರಾಧ್ಯಾಪಕರಾಗಿದ್ದರು. ಇವರನ್ನು ಸಂಪರ್ಕಿಸುವ, ಉಪನ್ಯಾಸಗಳನ್ನು ಕೇಳುವ ಅವಕಾಶ

ಸಿಕ್ಕಿದ್ದರಿಂದ ಜಿ.ಮಾದೇಗೌಡರು ಸಾಹಿತ್ಯಾಶಕ್ತಿ ಬೆಳಸಿಕೊಳ್ಳಲು ಸಹಾಯಕವಾಯಿತು[5]. ಜಿ.ಮಾದೇಗೌಡರು ಶಿಕ್ಷಣ ಮುಗಿಸಿದ ಎಷ್ಟೋ ವರ್ಷಗಳ ನಂತರ ತಾವು ಶಾಸಕರಾಗಿದ್ದ ಸಂದರ್ಭದಲ್ಲಿ ರಾಷ್ಟ್ರಕವಿ ಕುವೆಂಪು ಅವರನ್ನು ಭೇಟಿಯಾದ ಸಂದರ್ಭವನ್ನು ಉಲ್ಲೇಖಿಸಿದ್ದಾರೆ. ಅವರನ್ನು ಭೇಟಿಯಾದ ಸಂದರ್ಭದಲ್ಲಿ ಜಿ.ಮಾದೇಗೌಡರು ಪರಿಚಯ ಮಾಡಿಕೊಳ್ಳುತ್ತಾ ನಾನು ನಿಮ್ಮ ಶಿಷ್ಯಸಾರ್ ಎಂದಿದ್ದರು. ಅದಕ್ಕೆ ರಾಷ್ಟ್ರಕವಿ ಕುವೆಂಪುರವರು ಜಿ.ಮಾದೇಗೌಡರ ಮುಖವನ್ನೇ ನೋಡಿ ನೆನಪಿಲ್ಲವಲ್ಲ ಎಂದು ಉತ್ತರಿಸಿದ್ದರು. ಅದಕ್ಕೆ ಜಿ.ಮಾದೇಗೌಡರು ಪ್ರತಿಕ್ರಿಯಿಸುತ್ತಾ ಹೇಗೆ ನೆನಪಿರಬೇಕು ಸಾರ್. ನಾನೇನು ಪ್ರತಿಭಾಶಾಲಿ ವಿದ್ಯಾರ್ಥಿಯೂ ಅಲ್ಲ. ಮತ್ತು ಗಲಾಟೆ ಮಾಡೋ ಹುಡುಗನೂ ಅಲ್ಲ. ಎಲ್ಲೋ ಹಿಂದಿನ ಬೆಂಚಿನಲ್ಲಿ ಕೂತಿರುತ್ತಿದ್ದೆ ಎಂದು ನೆನಪಿಸಿದ್ದರು. ಈ ಘಟನೆಯು ಅವರ ನೇರವಂತಿಕೆ ಗುಣವನ್ನು ದೃಢೀಕರಿಸುತ್ತದೆ[6].

ಮಂಡ್ಯ ಜಿಲ್ಲೆಯ ಅಭಿವೃದ್ಧಿಯ ಹರಿಕಾರ, ಶೈಕ್ಷಣಿಕ ಕ್ರಾಂತಿಯ ರೂವಾರಿ 'ನಿತ್ಯ ಸಚಿವ' ಎಂಬ ಬಿರುದು ಪಡೆದಿರುವ ಕೆ.ವಿ.ಶಂಕರಗೌಡ ಅವರ ಪ್ರಭಾವಕ್ಕೂ ಸಹ ಒಳಗಾಗಿದ್ದಾರೆ. ಸ್ವತಃ ಜಿ.ಮಾದೇಗೌಡರೆ ತಿಳಿಸಿರುವಂತೆ ಕೆ.ವಿ.ಶಂಕರಗೌಡರ ಕ್ರಿಯಾಶೀಲ ಕಾರ್ಯ ಚಟುವಟಿಕೆಗಳು ನಡೆ ನುಡಿ, ಇವರ ಮೇರು ವ್ಯಕ್ತಿತ್ವ, ಮುತ್ಸದ್ದಿ ನಾಯಕತ್ವ ಹಾಗೂ ಜನತೆಯ ಸಬಲೀಕರಣಕ್ಕಾಗಿ ಹಗಲಿರುಳು ದುಡಿಯುವ ಹಂಬಲ ಜಿ. ಮಾದೇಗೌಡರ ಮೇಲೆ ಪ್ರಭಾವ ಬೀರಿದವು. ಇವರ ತತ್ವಾದರ್ಶಗಳಿಂದ ಪ್ರೇರಿತರಾಗಿ ರೈತರ, ಶೋಷಿತರ, ಹಿಂದುಳಿದವರ ಅಭಿವೃದ್ಧಿಗಾಗಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ಆಧ್ಯಾತ್ಮಿಕ ಕ್ಷೇತ್ರಗಳ ಅಭಿವೃದ್ಧಿಗೆ ಜಿಲ್ಲೆಯ ಮತ್ತು ಕ್ಷೇತ್ರದ ಅಭಿವೃದ್ಧಿಗೆ ಸಂಪೂರ್ಣ ಜೀವನವನ್ನು ಅರ್ಪಿಸಿಕೊಂಡಿದ್ದಾರೆ[7].

## 2.3 ವೃತ್ತಿ ಜೀವನ

ಗೌಡರು ಕಾನೂನು ಪದವಿಯನ್ನು ಪಡೆದ ನಂತರ 1958ರಲ್ಲಿ ಮಂಡ್ಯ ನಗರದಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ವಕೀಲಿ ವೃತ್ತಿಯ ಸಂದರ್ಭದಲ್ಲಿ ಕೆಳವರ್ಗದ ಜನರಿಗೆ ನ್ಯಾಯ ದೊರಕಿಸಿಕೊಡುವ ಪ್ರಯತ್ನ ಮಾಡಿದರು. ಸಾಮಾನ್ಯವರ್ಗದವರಿಗೆ ಕಾನೂನಿನ ಶಿಕ್ಷಣ ಮಹತ್ವ ತಿಳಿಸಿ, ಪರಿಹಾರ ದೊರಕಿಸುವುದಲ್ಲಿ ಅಲ್ಪ ಮಟ್ಟಿಗೆ ಸಫಲರಾದರು. ಆದರೆ ಕಾನೂನು ಸೇವೆ ಸಾಮಾನ್ಯ ಜನರಿಂದ ಹಣ ಪಡೆದು ನ್ಯಾಯ ದೊರಕಿಸಿಕೊಡುವುದೇ ಜೀವನವಲ್ಲ. ಇದಕ್ಕೆ ಹೊರತಾಗಿ ಜನಸೇವೆ ಮುಖ್ಯವೆಂದು ಮನವರಿಕೆಮಾಡಿಕೊಂಡರು. ಇದಕ್ಕಾಗಿ ದೀರ್ಘಕಾಲ ವಕೀಲ ವೃತ್ತಿಯಲ್ಲಿ ಮುಂದುವರಿಯಲಿಲ್ಲ. ಇಂತಹ ಸಂದರ್ಭದಲ್ಲಿ ಬದಲಾದ ರಾಜಕೀಯ

ಸನ್ನಿವೇಶನದಿಂದ ಜಿ.ಮಾದೇಗೌಡರು ರಾಜಕೀಯದ ಕಡೆ ಮುಖ ಮಾಡಿದರು. ಇವರು ಮೂಲತಃ ರಾಜಕೀಯಕ್ಕೆ ಬರುವುದಕ್ಕೆ ಕಾರಣವೇ ಶಂಕರಗೌಡರು ವಕೀಲ ವೃತ್ತಿಯಲ್ಲಿ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಇವರಲ್ಲಿ ಇದಂತಹ ನಾಯಕ ಗುಣಗಳು ಹಾಗೂ ಸಾಮಾಜಿಕ ಕಳಕಳಿಯನ್ನು ಗಮನಿಸಿದಂತಹ ಶಂಕರಗೌಡರು ನನ್ನ ನಂತರ ಜಿಲ್ಲೆ ಮತ್ತು ರಾಜ್ಯಕ್ಕೆ ನೀಡಬಹುದಾದಂತಹ ಕೊಡುಗೆಯನ್ನು ನೀಡುತ್ತಾರೆ. ಜೊತೆಗೆ ಜನನಾಯಕರಾಗಿ ಪ್ರಭಾವಿ ವ್ಯಕ್ತಿಯಾಗಿ ಬೆಳೆಯುತ್ತಾರೆ ಎಂಬ ದೃಷ್ಟಿಯಿಂದ ರಾಜಕೀಯಕ್ಕೆ ಕರೆತಂದಿದ್ದಾರೆ. ಆದ್ದರಿಂದ ವಕೀಲ ವೃತ್ತಿಯನ್ನು ಬಿಟ್ಟು ರಾಜಕೀಯಕ್ಕೆ ಜಿ.ಮಾದೇಗೌಡರು ಬಂದಿದ್ದಾರೆ. ರಾಜಕೀಯಕ್ಕೆ ಬಂದ ನಂತರ ಗುರುಗಳಾದಂತಹ ಶಂಕರಗೌಡರ ಮಾರ್ಗದರ್ಶನದಿಂದ ಅವರ ತತ್ವ ಆದರ್ಶಗಳನ್ನು ಪಾಲಿಸುಕೊಂಡು ಬಂದಿದ್ದಾರೆ. ಇವರ ಆದರ್ಶಗಳು, ಗಾಂಧಿ ತತ್ವಗಳು, ಕ್ರಿಯಾತ್ಮಕ ಕೆಲಸಗಳು ಪರಿಣಾಮ ಬೀರಿ ಅವರಂತೆ ಉತ್ತಮ ಜನೋಪಯುಕ್ತ ಕೆಲಸಗಳನ್ನು ಮಾಡಿಕೊಂಡು ಬಂದಿದ್ದಾರೆ. ಗಾಂಧೀ ಹಾಗೂ ಶಂಕರಗೌಡರ ಪ್ರಭಾವಕ್ಕೆ ಒಳಗಾಗಿ ಅಭಿವೃದ್ಧಿಯ ಹರಿಕಾರರಾಗಿ ಕೆಲಸ ನಿರ್ವಹಿಸಲು ಇವರ ತತ್ವ ಆದರ್ಶಗಳು ಪ್ರಮುಖವಾಗಿದೆ. ವಕೀಲ ವೃತ್ತಿಯನ್ನು ತ್ಯಜಿಸಿದ ಜಿ.ಮಾದೇಗೌಡರು 1959ರಲ್ಲಿ ತಾಲ್ಲೂಕು ಬೋರ್ಡ್ ಚುನಾವಣೆಯಲ್ಲಿ ಜಯಗೊಳಿಸುವುದರ ಮೂಲಕ ಜನಪ್ರತಿನಿಧಿಯಾಗಿ ಸೇವೆಯನ್ನು ಆರಂಭಿಸಿದರು. ಈ ಗೆಲುವಿಗಾಗಿ ಶ್ರಮಿಸಿದವರು. ಹೆಚ್.ಕೆ.ವೀರಣ್ಣಗೌಡ ಹಾಗೂ ಕೆ.ವಿ.ಶಂಕರಗೌಡರು ಇವರ ಮಾರ್ಗದರ್ಶನದಲ್ಲಿ ಜನಸೇವೆಯ ಪ್ರವೃತ್ತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು[8].

## 2.4 ವೈವಾಹಿಕ ಜೀವನ

ಶ್ರೀರಂಗಪಟ್ಟಣದ ಕೆ.ಪುಟ್ಟಸ್ವಾಮಿಗೌಡ ಹಾಗೂ ನಿಂಗಮ್ಮ ದಂಪತಿಗಳ ಮಗಳಾದ ಜೆ.ಪಿ.ಪದ್ಮರವರೊಂದಿಗೆ 1958ನೇ ಇಸವಿ ಜೂನ್ ಎರಡನೆಯ ತಾರೀಖು ಜಿ.ಮಾದೇಗೌಡರು ವೈವಾಹಿಕ ಜೀವನವಕ್ಕೆ ಕಾಲಿಟ್ಟರು. ಇವರ ವ್ಯಕ್ತಿತ್ವಕ್ಕೆ ಸರಿ ಹೊಂದುವ ಸುಲಕ್ಷಣಗಳನ್ನು ಮೈಗೂಡಿಸಿಕೊಂಡರು. ಜೆ.ಪಿ.ಪದ್ಮ ಅವರು ಇವರ ಎಲ್ಲಾ ಸಮಾಜ ಸೇವಾ ಜನಪರ ಕಾರ್ಯಗಳಿಗೆ ಬೆಂಬಲವಾಗಿ ನಿಂತಿದ್ದು ಅಲ್ಲದೇ ಎಷ್ಟೋ ಸಂದರ್ಭಗಳಲ್ಲಿ ತ್ಯಾಗವನ್ನು ಮಾಡಿದ್ದಾರೆ. ಇಂತಹ ದಂಪತಿಗಳಿಗೆ ಜಿ.ಎಂ.ಪ್ರಕಾಶ, ಜಿ.ಎಂ.ಮಧು ಎಂಬ ಇಬ್ಬರು ಗಂಡುಮಕ್ಕಳು ಹಾಗೂ ಜಿ.ಎಂ.ಶಶಿಕಲಾ, ಜಿ.ಎಂ.ಶೀಲಾವತಿ ಎಂಬ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಹಿರಿಯ ಪುತ್ರ ವೈದ್ಯರಾಗಿದು ಜನಸೇವೆಯನ್ನು ಮಾಡುತ್ತಿದ್ದಾರೆ. ಕಿರಿಯ ಪುತ್ರ ಜಿ.ಎಂ.ಮಧು ರವರು ರಾಜಕೀಯ ಪ್ರವೇಶಿಸಿ ವಿಧಾನಪರಿಷತ್ ಸದಸ್ಯರಾಗಿದ್ದರು. ಅಲ್ಲದೆ ಸಮಾಜ ಸೇವಾ ಕಾರ್ಯಗಳನ್ನು

ಕೈಗೊಂಡಿದ್ದಾರೆ. ಹೆಣ್ಣು ಮಕ್ಕಳು ಸದ್ಗೃಹಿಣಿರಾಗಿದ್ದಾರೆ. ಮಕ್ಕಳು ಹಾಗೂ ಮೊಮ್ಮಕ್ಕಳನ್ನು ಹೊಂದಿರುವ ತುಂಬು ಕುಟುಂಬ ಇವರದ್ದಾಗಿದೆ[9].

## 2.5 ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ನೀರು ಕೊಡುವ ಕಾಯಕದಲ್ಲಿ ಜಿ.ಮಾದೇಗೌಡರು (1938)

1938ರ ಏಪ್ರಿಲ್ ತಿಂಗಳ 10, 11 ಮತ್ತು 12ನೇ ದಿನಾಂಕಗಳಿಂದ ಮೈಸೂರು ಸಂಸ್ಥಾನದ ಮಂಡ್ಯ ಜಿಲ್ಲೆಗೆ ಸೇರಿದ ಮದ್ದೂರು ನಗರದ ಶಿಂಷಾ ನದಿಯ ಬಲದಂಡೆಯ ಮೇಲಿನ ಶಿವಪುರ ಎಂಬ ಗ್ರಾಮವು ಇಡೀ ದೇಶದ ಸ್ವಾತಂತ್ರ್ಯಪ್ರೇಮಿಗಳ ಗಮನ ಸೆಳೆದಿತ್ತು. ಕಾರಣ ಆ ಮೂರು ದಿನಗಳಲ್ಲಿ ದಕ್ಷಿಣ ಭಾರತದಲ್ಲಿಯೇ ಮೊದಲ ಸ್ವಾತಂತ್ರ್ಯ ಹೋರಾಟದ ಸಂಗ್ರಾಮ ಅರ್ಥಾತ್ ರಾಷ್ಟ್ರಕೂಟವು ಅಲ್ಲಿ ನಡೆದದ್ದು. ಈ ಮೂರು ದಿನಗಳು ರಾಷ್ಟ್ರಕೂಟ ಅಧಿವೇಶನ ನಡೆದು, ಇದು ಇತಿಹಾಸ ಪ್ರಸಿದ್ಧವಾಯಿತು.[10] ಪಿ.ತಿರುಮಲೇಗೌಡರ ಹತ್ತು ಎಕರೆ ತರೀ ಜಮೀನಿನಲ್ಲಿ ಧ್ವಜಾರೋಹಣ ಸಭೆ, ಪ್ರತಿನಿಧಿಗಳ ಬಿಡಾರ ನಿರ್ಮಿಸಲಾಗಿತ್ತು. ಪಿ.ತಿರುಮಲೇಗೌಡರ ಎರಡು ಬೃಹತ್ ಮನೆಗಳಲ್ಲಿ ಸ್ವಾಗತಕಾರರ ಮತ್ತು ಸ್ವಯಂಸೇವಕರುಗಳ ಬಿಡಾರ ಏರ್ಪಡಿಸಿ ಸರ್ಕಾರದ ಯಾವುದೇ ತೊಂದರೆಯಿಲ್ಲದೆ ರಾಷ್ಟ್ರಕೂಟ ಸೇರಲು ಸರ್ವಸಿದ್ಧತೆ ಮಾಡಲಾಗಿತ್ತು. ರಾಷ್ಟ್ರಕೂಟದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಸಾಹುಕಾರ್ ಚನ್ನಯ್ಯ, ಪಿ.ತಿರುಮಲೇಗೌಡ, ಹೆಚ್.ಸಿ.ದಾಸಪ್ಪ, ಎಸ್.ರಂಗರಾಮಯ್ಯ ಅವರುಗಳು ಉಪಾಧ್ಯಕ್ಷರಾಗಿ ಕೊಪ್ಪದ ಜೋಗಿಗೌಡರು ಖಜಾಂಚಿಯಾಗಿ, ಹೆಚ್.ಕೆ.ವೀರಣ್ಣಗೌಡರು ಕಾರ್ಯದರ್ಶಿಯಾಗಿ ಆಯ್ಕೆಯಾದರು. ಎಂ.ಎನ್.ಜೋಯಿಸ್, ಜಿ.ಓ.ಸಿ. ಸ್ವಯಂಸೇವಕ ಪಡೆಯವರಾಗಿ ನೇಮಕಗೊಂಡರು. 10.04.1938 ರಿಂದ ನಾಲ್ಕು ದಿನಗಳ ಕಾಲ ರಾಷ್ಟ್ರಕೂಟದ ಕಾರ್ಯಕಲಾಪಗಳನ್ನು ನಡೆಸಲು ಸ್ವಾಗತ ಸಮಿತಿ ತೀರ್ಮಾನಿಸಿ ಕಾರ್ಯಕ್ರಮಗಳ ವಿವರಗಳನ್ನು ಕನ್ನಡ ದಿನಪತ್ರಿಕೆಗಳು ಮತ್ತು ಮದ್ರಾಸಿನಿಂದ ಪ್ರಕಟವಾಗುತ್ತಿದ್ದ ಇಂಗ್ಲೀಷ್ ದಿನಪತ್ರಿಕೆಗಳು ತಮ್ಮ ಮುಖಪುಟಗಳಲ್ಲಿ ಆಕರ್ಷಣೀಯವಾದ ಕಾಲಂಗಳಲ್ಲಿ ಪ್ರಕಟಿಸಿದವು[11]. ಟಿ.ಸಿದ್ಧಲಿಂಗಯ್ಯನವರು ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಗೊಂಡು ಅವರನ್ನು ನಯನಮನೋಹರವಾಗಿ ಸಿದ್ಧಗೊಳಿಸಿದ್ದ ರಥದಲ್ಲಿ ಮೆರವಣಿಗೆಯಲ್ಲಿ ಶಿವಪುರಕ್ಕೆ ಕರೆತರಲು ವ್ಯವಸ್ಥೆ ಮಾಡಲಾಗಿತ್ತು. ಮೆರವಣಿಗೆಯು ಮದ್ದೂರು ಪಶ್ಚಿಮ ದ್ವಾರದಿಂದ ಹೊರಟಿತು. ಸುಮಾರು ಒಂದೂವರೆ ಮೈಲಿ ಉದ್ದಕ್ಕೂ ತಳಿರುತೋರಣ, ತ್ರಿವರ್ಣ ಧ್ವಜಗಳಿಂದ ನಾನಾ ಬಣ್ಣದ ವಿದ್ಯುತ್ ದೀಪಗಳ ಸರಮಾಲೆಯಿಂದ ಮೆರವಣಿಗೆಯ ದಾರಿ ಇಂದ್ರಲೋಕವೋ ಎನ್ನುವಂತೆ

ಕಣ್ಮನಗಳಿಗೆ ಆಹ್ಲಾದವನ್ನುಂಟು ಮಾಡುವಂತಿತ್ತು ಎಂದು ಅಂದಿನ ಪತ್ರಿಕೆಗಳು ವರ್ಣಿಸಿವೆ[12].

ಆ ವೇಳೆಯಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟ್‌ರಾದ ಜಿ.ಎಂ..ಮೇಕ್ರಿ ಮದ್ದೂರು ಸುತ್ತಳತೆ ಮೂರು ಮೈಲಿಗಳೊಳಗೆ ಒಂದು ತಿಂಗಳ ಕಾಲ ಮೆರವಣಿಗೆ, ಸಭೆ ಮುಂತಾದವು. ಸೇರಕೂಡದೆಂದೂ ಧ್ವಜಾರೋಹಣ ಮಾಡಕೂಡದೆಂದೂ ನಿಷೇಧಾಜ್ಞೆ ಹೊರಡಿಸಿದ್ದರು. ಹಿಂದಿನ ದಿನ ಅಲ್ಲಿ ಸೇರಿದ್ದ ಸಹಸ್ರಾರು ಜನರು ನಿಷೇಧಾಜ್ಞೆಯನ್ನು ಕಟುವಾಗಿ ಟೀಕಿಸಿ ಸ್ವಾಗತ ಸಮಿತಿಯವರೂ, ಮುಖಂಡರು ರಾತ್ರಿ ಒಂದು ಗಂಟೆಗೆ ಸಭೆ ಸೇರಿ ನಿಷೇಧಾಜ್ಞೆಯನ್ನು ಉಲ್ಲಂಘಿಸಬೇಕೆಂದು ತೀರ್ಮಾನಿಸಿ ಪೂರ್ವಭಾವಿಯಾಗಿ ನಿಶ್ಚಿತವಾಗಿದ್ದಂತೆ ಕಾರ್ಯನಡೆಸಬೇಕೆಂದೂ ತೀರ್ಮಾನಿಸಿದರು. ಜಿಲ್ಲಾ ಮ್ಯಾಜಿಸ್ಟ್ರೇಟರ್‌ರ ನಿಷೇಧಾಜ್ಞೆಯನ್ನು ಉಲ್ಲಂಘಿಸಬೇಕೆಂದು ಹಿಂದಿನ ರಾತ್ರಿ ಮುಖಂಡರು ಮಾಡಿದ್ದ ತೀರ್ಮಾನಕ್ಕನುಸಾರವಾಗಿ 1938ನೇ ಏಪ್ರಿಲ್ 9ನೇ ತಾರೀಖು ಬೆಳಿಗ್ಗೆ 8.15 ಗಂಟೆಗೆ ಧ್ವಜವಂದನೆ ಮತ್ತು ಆರೋಹಣಕ್ಕೆ ಸರ್ವಸಿದ್ದತೆಗಳೂ ನಡೆದಿದ್ದವು[13]. ಸ್ವಾಗತ ಸಮಿತಿಯ ಅಧ್ಯಕ್ಷರಾದ ಎಸ್.ಚನ್ನಯ್ಯನವರು ಮೊದಲೇ ಸಿದ್ಧಪಡಿಸಿಕೊಂಡು ಬಂದಿದ್ದ ಸ್ವಾಗತ ಭಾಷಣವನ್ನು ಬಹಿರಂಗ ಅಧಿವೇಶನದ ಮುಂದೆ ಸ್ಪಷ್ಟವಾಗಿ ದಿಟ್ಟವಾಗಿ ಓದಿದರು.

ಟಿ.ಸಿದ್ಧಲಿಂಗಯ್ಯನವರು ಅಧ್ಯಕ್ಷ ಭಾಷಣ ಮಾಡಿದರು. ಸಿದ್ದಲಿಂಗಯ್ಯನವರ ಅಧ್ಯಕ್ಷ ಭಾಷಣದಲ್ಲಿ ಪ್ರಧಾನವಾಗಿ ಕಂಡುಬರುವ ಅಂಶಗಳೆಂದರೆ ಮಹಾರಾಜರ ಆಶ್ವಾಸನೆಗೂ ಆಡಳಿತ ಪದ್ಧತಿಗೂ ಸಂಬಂಧವಿಲ್ಲದಿರುವಿಕೆಯ ಬಗೆಗೆ ಟೀಕೆ, ಚುನಾಯಿತ ಪ್ರತಿನಿಧಿಗಳ ಮಂತ್ರಿಮಂಡಲಕ್ಕೆ ಒತ್ತಾಯ ಹಳ್ಳಿಗರ ಆರ್ಥಿಕ ಸ್ಥಿತಿಯ ಬಗೆಗೆ ಕಳಕಳಿ ಇಡೀ ಮೈಸೂರು ಸಂಸ್ಥಾನದ ಎಲ್ಲ ಜನರನ್ನು ಪ್ರತಿನಿಧಿಸುವ ಏಕೈಕ ಕಾಂಗ್ರೆಸ್ ಕೈಗೊಳ್ಳಬೇಕೆಂದಿರುವ ಕಾರ್ಯಕ್ರಮಗಳ ವಿವರ ನೀಡಿದರು. ಟಿ.ಸಿದ್ದಲಿಂಗಯ್ಯನವರು ಮಾತನಾಡಿ ಮಹಾತ್ಮಗಾಂಧಿಯವರ ಅಹಿಂಸೆ, ಸತ್ಯ, ಶಿಸ್ತುಗಳನ್ನು ನಿಮ್ಮದಾಗಿಸಿ ಕೊಳ್ಳಬೇಕೆಂದು ಹೇಳಿ ಧ್ವಜ ಹಾರಿಸಲು ಸಿದ್ಧರಾಗಿ ಧ್ವಜದ ದಾರ ಹಿಡಿಯುತ್ತಿದ್ದಾಗ ಪೊಲೀಸ್‌ನವರು ಸಿದ್ಧಲಿಂಗಯ್ಯನವರನ್ನು ಉದ್ದೇಶಿಸಿ ಪ್ರತಿಬಂಧಕಾಜ್ಞೆಯ ಅನ್ವಯ ನಿಮ್ಮನ್ನು ಬಂಧಿಸಿದ್ದೇವೆ ಎಂದು ಕೆಳಗಿಳಿಸುತ್ತಿದ್ದಂತೆಯೇ ಜಿ.ಓ.ಸಿ. ಎಂ.ಎನ್.ಜೋಯಿಸ್ ಅವರು ಧ್ವಜಾರೋಹಣ ಮಾಡಿಯೇಬಿಟ್ಟರು. ಧ್ವಜ ಆರೋಹಣ ಕಾರಣಾಂತರದಿಂದ ಎಂ.ಎನ್.ಜೋಯಿಸ್ ಅವರಿಂದ ನಡೆಯಲ್ಪಟ್ಟಿತ್ತು. ನಂತರ ಹೆಚ್.ಸಿ.ದಾಸಪ್ಪನವರು, ಪಿ.ವೆಂಕಟಪ್ಪನವರು, ಕೆ.ಪಿ.ರೆಡ್ಡಿಯವರು ನಂತರದ ದಿನಗಳಲ್ಲಿ ಧ್ವಜಾರೋಹಣ ಮಾಡುವ ಸಂದರ್ಭದಲ್ಲಿ ಬಂಧಿತರಾದರು. ಇವರ ಸಾಲಿನಲ್ಲಿ ಬಳ್ಳಾರಿ ಸಿದ್ದಮ್ಮನವರು ಸೇರಿಕೊಂಡರು. ಬಂಧನಗೊಂಡ ಮುಖಂಡರು ಪೊಲೀಸ್ ಗಾಡಿಯಲಿ ಹೋಗುತ್ತಿದ್ದ ದೃಶ್ಯಗಳು, ಕಾಂಗ್ರೆಸ್ ಧ್ವಜಾರೋಹಣ ಮತ್ತು ರಾಷ್ಟ್ರಗೀತೆಯ ಸಾಮೂಹಿಕ ಗಾಯನ

ಒಂದೊಂದು ಅವರ ಸ್ಮೃತಿಕೋಶದಲ್ಲಿ ಹಸಿರುಹಸಿರಾಗಿದ್ದು, ರಾಷ್ಟ್ರಕೂಟದ ಮುಂದಾಳುತ್ವ ವಹಿಸಿದ್ದ ಜಿಲ್ಲೆಯ ನಾಯಕರುಗಳಾದ ಎಸ್.ಚನ್ನಯ್ಯ ಮತ್ತು ವೀರಣ್ಣಗೌಡರ ಸೇವಾ ಮನೋಭಾವ ಜನಮೆಚ್ಚುವಂತಿತ್ತು. ಹಲವಾರು ನಾಯಕರುಗಳ ಬಂಧನವಾದ ನಂತರ ಏಪ್ರಿಲ್ 11ರಂದು ಶಿವಪುರ ರಾಷ್ಟ್ರಕೂಟದ ನಾಯಕರು ವಿಷಯ ನಿಯಮ ಸಮಿತಿ ಅಂಗೀಕರಿಸಿ ಸಿದ್ಧಗೊಳಿಸಿದ್ದ ಮೂರು ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟಿತು. ಜವಾಬ್ದಾರಿ ಸರ್ಕಾರ ಸ್ಥಾಪಿಸಬೇಕು. ಮೈಸೂರು ಕಾಂಗ್ರೆಸ್‌ನ್ನು ಒಂದು ರಾಜಕೀಯ ಪಕ್ಷವೆಂದು ಅಂಗೀಕರಿಸಬೇಕು ಹಾಗೂ ಸುಧಾರಣಾ ಸಮಿತಿಯು ಜವಾಬ್ದಾರಿ ಸರ್ಕಾರದ ವಿಷಯ ಪರಿಶೀಲಿಸಿ ಶಿಫಾರಸ್ಸು ಮಾಡಲು ಅವಕಾಶವಿರಬೇಕು[14]. ಈ ರೀತಿಯಾಗಿ ಮೈಸೂರು ಸಂಸ್ಥಾನದ ಮೊದಲ ಧ್ವಜ ಸತ್ಯಾಗ್ರಹವು ಯಶಸ್ವಿಯಾಗಿ ನಡೆದಿತ್ತು. ಇಂತಹ ಅಧಿವೇಶನದಲ್ಲಿ ಭಾಗವಹಿಸುವ ಅವಕಾಶವನ್ನು ಜಿ.ಮಾದೇಗೌಡರ ಪಡೆದುಕೊಂಡಿದ್ದರು. ಈ ಅಧಿವೇಶನದಲ್ಲಿ ಬಂದ ಸತ್ಯಗ್ರಹಿಗಳಿಗೆ ನೀರು ಕೊಡುವ ಕಾಯಕವನ್ನು ಕಾಂಗ್ರೇಸ್ ಮುಖಂಡರಾದ ಕೆಂಪೇಗೌಡರವರ ನೇತೃತ್ವದ ಸತ್ಯಗ್ರಹಿ ತಂಡದಲ್ಲಿ ಒಬ್ಬರಾಗಿದ್ದರು. ಈ ಅಧಿವೇಶನದಲ್ಲಿ ಜಿ.ಮಾದೇಗೌಡರಿಗೆ ಮೈಸೂರು ಸಂಸ್ಥಾನದ ಕಾಂಗ್ರೆಸ್‌ನ ಪ್ರಮುಖ ನಾಯಕರಾದ ಹೆಚ್.ಕೆ.ವೀರಣ್ಣಗೌಡ, ಪಿ.ಎನ್.ಜವರಪ್ಪಗೌಡ, ಹೆಚ್.ಸಿ.ದಾಸಪ್ಪ, ಎ.ಜಿ.ಬಂದೀಗೌಡ, ಕೆಂಗಲ್ ಹನುಮಂತಯ್ಯ, ಎಂ.ಎನ್.ಜೋಯಿಷ್, ಕೆ.ಪಿ.ರೆಡ್ಡಿ, ಬಳ್ಳಾರಿ ಸಿದ್ದಮ್ಮ, ಯಶೋಧರಮ್ಮ ದಾಸಪ್ಪ ಇನ್ನು ಹಲವಾರು ನಾಯಕರುಗಳನ್ನು ನೋಡುವ ಅವಕಾಶವೂ ದೊರೆಯಿತು. ಜೊತೆಗೆ ಸತ್ಯ, ಅಹಿಂಸಾ, ತ್ಯಾಗ, ನಿಸ್ವಾರ್ಥ ಸೇವಾ ಮನೋಭಾವನೆಯನ್ನು ಜೀವನದುದ್ದಕ್ಕೂ ರೂಢಿಸಿಕೊಳ್ಳಲು ಜಿ.ಮಾದೇಗೌಡರಿಗೆ ಮೊದಲ ಪ್ರೇರಣೆಯಾಯಿತು.[15] ಹೀಗೆ ಶಿವಪುರ ಅಧಿವೇಶನದಿಂದ ಸ್ಫೂರ್ತಿ ಪಡೆದು ಚಿಕ್ಕವಯಸ್ಸಿನಲ್ಲೇ ಜಿ.ಮಾದೇಗೌಡರು ಸಂಸ್ಥಾನದ ಎಲ್ಲಾ ಕಡೆಗಳಲ್ಲೂ ಧ್ವಜಾರೋಹಣ ಕಾರ್ಯಕ್ಕೆ ಸರ್ವತ್ಯಾಗಕ್ಕೂ ತಯಾರಾಗಿದ್ದರು.

## 2.6 ಮಂಡ್ಯ ಜಿಲ್ಲೆಯ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕರಪತ್ರ ವಿತರಣೆಯಲ್ಲಿ ಜಿ.ಮಾದೇಗೌಡರು (1942)

1942ರ ಕ್ವಿಟ್ ಇಂಡಿಯಾ ಅಥವಾ ಚಲೇಜಾವ್ ಚಳುವಳಿಯು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪ್ರಮುಖ ಘಟ್ಟವಾಗಿದೆ. 1942 ಆಗಸ್ಟ್ 8 ರಂದು ಮುಂಬಯಿಯ ಗೋವಳಿ ಮೈದಾನದಲ್ಲಿ ಜವಾಹರ್‌ಲಾಲ್‌ರ ಸಂಪೂರ್ಣ ಬಹುಮತದೊಂದಿಗೆ 'ಭಾರತಬಿಟ್ಟು ತೊಲಗಿ' ಚಳವಳಿ ಆರಂಭವಾಯಿತು. ಈ ನಿಟ್ಟಿನಲ್ಲಿ ಗಾಂಧೀಜಿಯವರು 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆಯನ್ನು ತಮ್ಮ ಹರಿಜನ ಪತ್ರಿಕೆಯ ಮೂಲಕ ದೇಶದಾದ್ಯಂತ ಕ್ವಿಟ್ ಇಂಡಿಯಾ ಚಳುವಳಿಯನ್ನು

ತೀವ್ರಗೊಳಿಸುವಂತೆ ಕರೆ ನೀಡಿದರು. ಈ ಪ್ರಕಟಣೆಯು ಬಿಡುಗಡೆಗೊಂಡ ತಕ್ಷಣ ಹೋರಾಟದ ಪೂರ್ವಭಾವಿಯಾಗಿ ರಾಷ್ಟ್ರದ ಪ್ರಮುಖ ನಾಯಕರುಗಳೆಲ್ಲರನ್ನೂ ಸರ್ಕಾರವು ಬಂಧಿಸಿತು.[16] ಮುಂಬೈ ಕಾಂಗ್ರೆಸ್ ಅಧಿವೇಶನದಲ್ಲಿ ಮೈಸೂರು ಸಂಸ್ಥಾನದ ಪ್ರಮುಖ ಮಂಡ್ಯ ಜಿಲ್ಲೆಯ ಕಾಂಗ್ರೆಸ್ ನಾಯಕರಾದ ಮಳವಳ್ಳಿ ವೀರಪ್ಪ, ಎ.ಜಿ.ಬಂದೀಗೌಡರವರೂ ಸಹ ಭಾಗವಹಿಸಿದ್ದರು. ಇವರು ಮುಂಬೈನಿಂದ ಮರಳಿ ಬರುವಾಗ ಇವರ ಬಂಧನವಾಗಿತ್ತು. ಇದರ ಪ್ರಭಾವ ಬೀರಿ ಹಳೆಯ ಮೈಸೂರು ಸಂಸ್ಥಾನದಲ್ಲೂ ಕ್ವಿಟ್ ಇಂಡಿಯಾ ಚಳುವಳಿಯು ವ್ಯಾಪಕವಕಾಗಿ ಆರಂಭವಾಯಿತು. ಹೀಗೆ ಕಾಂಗ್ರೆಸ್‌ನ ಪ್ರಮುಖ ನಾಯಕರ ಬಂಧನವಾದ ನಂತರ ದೇಶದಾದ್ಯಂತ ಚಳುವಳಿಯಲ್ಲಿ ವಿದ್ಯಾರ್ಥಿಗಳು, ಯುವಕರು, ಮಹಿಳೆಯರು, ಕಾರ್ಮಿಕರು, ರೈತರು, ಭಾಗವಹಿಸುವ ಮೂಲಕ ಯಶಸ್ವಿಗೊಳಿಸಿದ್ದರು. ಈ ಚಳುವಳಿ ಮಂಡ್ಯ ಜಿಲ್ಲೆಯಲ್ಲಿಯೂ ಸಹ ವ್ಯಾಪಕವಾಗಿ ಹರಡಿತು. ಈ ಚಳುವಳಿಯಲ್ಲಿ ಪಾಲ್ಗೊಂಡ ಪ್ರಮುಖರೆಂದರೆ ಎಚ್.ಕೆ.ವೀರಣ್ಣಗೌಡ, ಪಿ.ಎನ್.ಜವರಪ್ಪಗೌಡ ಸಾಹುಕಾರ್ ಎಸ್.ಚನ್ನಯ್ಯ, ಎ.ಕೆಂಚಪ್ಪ, ಬಿ.ಕೆ.ಪುಟ್ಟೇಗೌಡ ಮೊದಲಾದವರ ನಾಯಕತ್ವದಲ್ಲಿ ಈ ಚಳುವಳಿ ಜಿಲ್ಲೆಯಾದ್ಯಂತ ವ್ಯಾಪಕವಾಗಿ ನಡೆಯಿತು[17]. ಅಲ್ಲದೆ ಚಲೇಜಾವ್ ಅಥವಾ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಪ್ರಚೋದನಾತ್ಮಕ ಭಾಷಣ ಮಾಡಿ ಜಿಲ್ಲೆಯ ಜನರು ಸ್ವಾತಂತ್ರ್ಯದ ಬಗ್ಗೆ ಜಾಗೃತಗೊಳ್ಳುವಂತೆ ಮಾಡಿದರು. ಅಲ್ಲದೇ ಕೆಲವು ನಾಯಕರು ಇದರಿಂದ ಬಂಧನಕ್ಕೂ ಒಳಗಾದರು. ಈ ಚಳುವಳಿಯಿಂದ ಪ್ರೇರಣೆಗೊಂಡು, ನಾಯಕರ ಮಾರ್ಗದರ್ಶನದಿಂದ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕರಪತ್ರ ಹಂಚುವ ಕಾಯಕವನ್ನು ವಿದ್ಯಾರ್ಥಿಯಾಗಿ ಜಿ.ಮಾದೇಗೌಡರು ಮಾಡಿದರು. ಶಾಲಾಕಾಲೇಜುಗಳನ್ನು ಬಹಿಷ್ಕರಿಸಿ ವಿದ್ಯಾರ್ಥಿಗಳು ಸಹಸ್ರಾರು ಸಂಖ್ಯೆಯಲ್ಲಿ ಭಾಗವಹಿಸಿದರು. ಮಂಡ್ಯದಲ್ಲಿ ಮುನಿಸಿಪಲ್ ಪ್ರೌಢಶಾಲೆಯ ವಿದ್ಯಾರ್ಥಿಗಳು ಮುಷ್ಕರ ಪ್ರತಿಭಟನಾ ಮೆರವಣಿಗೆ ನಡೆಸಿದ್ದರು. ಪಿ.ಎನ್.ಜವರಪ್ಪಗೌಡ, ಸಿದ್ದರಾಮಯ್ಯ ಹಾಗೂ ಕೆಂಪಯ್ಯ ಇವರು ಮುಖಂಡತ್ವವನ್ನು ವಹಿಸಿಕೊಂಡಿದ್ದರು. ಈ ಪ್ರತಿಭಟನಾ ಮೆರವಣಿಗೆಯಲ್ಲಿ ಜಿ.ಮಾದೇಗೌಡರು ಸಹ ಗುಪ್ತವಾಗಿ ಕರಪತ್ರ ವಿತರಣೆ ಕೆಲಸದಲ್ಲಿ ತೊಡಗಿಕೊಂಡಿದ್ದರು[18]. ಈ ರೀತಿಯಾಗಿ ಭಾರತದ ಸ್ವಾತಂತ್ರ್ಯ ಚಳುವಳಿಯ ಅಂತಿಮ ಕಾಲಘಟ್ಟದ ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ಜಿ.ಮಾದೇಗೌಡರಿಗೂ ಸಹ ಕರಪತ್ರ ವಿತರಣೆ ಮಾಡುವ ಮೂಲಕ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಕೀರ್ತಿ ಸಲ್ಲಿಸುತ್ತದೆ.

## 2..7 ಮೈಸೂರು ವಿಲೀನ ವಿರೋಧಿ ಚಳುವಳಿಯಲ್ಲಿ ಜಿ. ಮಾದೇಗೌಡರ ಪಾತ್ರ

ಭಾರತ ಸ್ವಾತಂತ್ರ್ಯ ನಂತರ ಅನೇಕ ಸಮಸ್ಯೆಗಳನ್ನು ಎದುರಿಸಿತು. ಆ ಸಮಸ್ಯೆಗಳಲ್ಲಿ ನಿರುದ್ಯೋಗ, ಅನಕ್ಷರತೆ, ನಿರಾಶ್ರಿತ ಸಮಸ್ಯೆ, ಆಹಾರದ ಸಮಸ್ಯೆ, ಭಾಷಾವಾರು ವಿಂಗಡಣೆ ಸಮಸ್ಯೆ, ಕಾಶ್ಮೀರ ಸಮಸ್ಯೆ ಇವೆಲ್ಲವುಗಳನ್ನು ಎದುರಿಸಬೇಕಾಯಿತು. ಈ ಸಮಸ್ಯೆಗಳ ಪರಿಹಾರಕ್ಕಾಗಿ ಅಂದಿನ ಜವಾಹರಲ್‌ಲಾಲ್ ನೆಹರೂ ನೇತೃತ್ವದ ಹಂಗಾಮಿ ಸರ್ಕಾರವು ಪ್ರಯತ್ನಿಸಿ. ಅದರಲ್ಲಿ ಪ್ರಮುಖವಾಗಿ ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವುದು ಅವಶ್ಯಕವಾಗಿತ್ತು. ಆಡಳಿತದ ಅನುಕೂಲಕ್ಕಾಗಿ ಭಾಷಾವಾರು ಪ್ರಾಂತ್ಯಗಳನ್ನು ರಚಿಸಲು ಕಾಂಗ್ರೆಸ್ ಸಮಿತಿ ನಿರ್ಧರಿಸುತ್ತದೆ. ವಿದೇಶಿಯರ ಆಳ್ವಿಕೆಯಲ್ಲಿ ಕನ್ನಡಿಗರ ನಿರಾಭಿಮಾನ, ಜಾತೀಯತೆ ಅನೈಕ್ಯಗಳಿಂದಾಗಿ ಭೌಗೋಳಿಕ ದೃಷ್ಟಿಯಿಂದ ಕರ್ನಾಟಕಕ್ಕಾಗಿರುವಷ್ಟು ಅನ್ಯಾಯ ಭಾರತದಲ್ಲಿ ಬೇರಾವ ರಾಜ್ಯಗಳಿಗೂ ಆಗಿಲ್ಲ. ಕರ್ನಾಟಕ ಏಕೀಕರಣ ಚಳುವಳಿಯ ಕಾಲದಲ್ಲಿ ಕನ್ನಡಿಗರಲ್ಲಿಯೇ ಪರ ಮತ್ತು ವಿರೋಧ ಪಕ್ಷಗಳು ಹುಟ್ಟಿಕೊಳ್ಳುತ್ತವೆ. ಸ್ವತಂತ್ರ ಪೂರ್ವದಲ್ಲಿ ಅಂದರೆ ಮೈಸೂರಿನಲ್ಲಿ ನವೆಂಬರ್ 23, 1946ರಲ್ಲಿ ಕೆ.ಸಿ.ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಬೆಂಗಳೂರು ನಗರದಲ್ಲಿ ಸೇರಿದ್ದ ಮೈಸೂರು ಕಾಂಗ್ರೆಸ್ ಅಧಿವೇಶನವು, ಕನ್ನಡ ಭಾಷೆಯ ಸಕಲ ಪ್ರದೇಶಗಳನ್ನೂ ಒಳಗೊಂಡ ಕರ್ನಾಟಕ ಪ್ರಾಂತ್ಯವನ್ನು ಕೂಡಲೇ ರಚಿಸಬೇಕೆಂದು ಒತ್ತಾಯಿಸಿದ್ದರು. ಈ ಗುರಿಯನ್ನು ಗಮನದಲ್ಲಿಟ್ಟುಕೊಂಡು ಮೈಸೂರು ಕಾಂಗ್ರೆಸ್ ವಸ್ತುಸ್ಥಿತಿಯ ಬಗೆಗೆ ಅಂಕಿ–ಅಂಶ ಸಂಗ್ರಹಿಸಲು ಐವರ ಸಮಿತಿಯನ್ನು ನೇಮಿಸಿತು. ಈ ಐವರ ಸಮಿತಿ ಮೈಸೂರನ್ನೊಳಗೊಂಡ ಕರ್ನಾಟಕ ರಾಜ್ಯವನ್ನು ನಿರ್ಮಿಸಬೇಕೆಂದು ಹೇಳಿದರು. ಇದನ್ನು ಸಾಧಿಸಬೇಕಾದಲ್ಲಿ ಈಗಿನ ಪ್ರಾಂತಗಳ ಪ್ರದೇಶವನ್ನು ಸಂಸ್ಥಾನ ಪ್ರದೇಶಗಳಲ್ಲಿ ವಿಲೀನಗೊಳಿಸಬಾರದು. ಆ ಸಂಸ್ಥಾನಗಳು ವ್ಯಾವಹಾರಿಕವಾಗಿ ತಮ್ಮ ಅಸ್ಥಿತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ. ಇದರ ಬಗೆಗೆ ಮೈಸೂರಿನಲ್ಲಿ ಪರ ಹಾಗೂ ವಿರುದ್ಧ ಅಭಿಪ್ರಾಯಗಳು ವ್ಯಕ್ತಪಟ್ಟಿದ್ದವು. ಮಹಾರಾಜರು ಅಧಿಕಾರದಿಂದ ಹೋಗುತ್ತಾರೆಂದು ಕೆಲವರು ಆತಂಕ ವ್ಯಕ್ತಪಡಿಸಿದ್ದರು. ಇನ್ನು ಕೆಲವರು ಮಹಾರಾಜರ ಪ್ರಶ್ನೆಯನ್ನು ಮುಂದು ಮಾಡಿಕೊಂಡು ಕರ್ನಾಟಕ ಪ್ರಾಂತ ರಚನೆಯನ್ನು ಮುಂದಕ್ಕೆ ದೂಡಬಾರದೆಂದು ಆತಂಕ ವ್ಯಕ್ತಪಡಿಸಿದ್ದರು[19].

ಈ ವೇಳೆಯಲ್ಲಿ ಮೈಸೂರಿನ ಮಂತ್ರಿಮಂಡಲದಲ್ಲೂ ಭಿನ್ನಾಭಿಪ್ರಾಯಗಳು ತಲೆದೋರಿತು. ಸಚಿವರುಗಳಾದ ಎ.ಜಿ.ರಾಮಚಂದ್ರಾಯರು, ಕಡಿದಾಳ್ ಮಂಜಪ್ಪ, ಟಿ.ಚನ್ನಯ್ಯ ಪತ್ರಿಕೆಗಳಿಗೆ ಜಂಟಿ ಹೇಳಿಕೆಯನ್ನು ಕೊಟ್ಟು ಸಂಯುಕ್ತ ಕರ್ನಾಟಕದಲ್ಲಿ ಮೈಸೂರು ಐಕ್ಯವಾಗುವುದನ್ನು ವಿರೋಧಿಸಿದರು. ಹೈದರಬಾದ್ ಮತ್ತು ವಿದರ್ಭಗಳಿಗೆ

ಕೊಟ್ಟಿರುವ ಸೌಲಭ್ಯವನ್ನು ಮೈಸೂರಿಗೆ ತಪ್ಪಿಸಲಾಗಿದೆಯೆಂದೂ, ಆ ಎರಡು ಸಂಸ್ಥಾನಗಳ ಜನಸಂಖ್ಯೆಯು ಮೈಸೂರಿನದಕ್ಕಿಂತ ಕಡಿಮೆಯೆಂದೂ, ಸಂಸ್ಥಾನದ ಆಳರಸರು ಅನೇಕ ವರ್ಷಗಳಿಂದಲೂ ಒಂದೇ ಸಮನೆ ಶ್ರಮಿಸಿ ಮಹಾಸಂಸ್ಥಾನವನ್ನಾಗಿ ಮಾಡಿರುವ ಮೈಸೂರನ್ನು ಭಾರತದ ಭೂಪಟದಲ್ಲಿ ಈಗ ತೆಗೆದುಹಾಕಲಾಗಿದೆಯೆಂದೂ ಮೈಸೂರು ಎಂಬ ಹೆಸರನ್ನು ಸಹ ಉಳಿಯಗೊಟ್ಟಿಲ್ಲವೆಂದೂ ಸಚಿವರುಗಳು ಅಭಿಪ್ರಾಯ ವ್ಯಕ್ತಪಡಿಸಿದ್ದರು.

ಮೈಸೂರನ್ನು ಅದಕ್ಕಿಂತಲೂ ದೊಡ್ಡ ಮತ್ತು ಹಿಂದೆ ಬಿದ್ದುದೂ ಪ್ರದೇಶದಲ್ಲಿ ಐಕ್ಯಗೊಳಿಸುವ ಪ್ರಯತ್ನ ನಡೆಯುತ್ತಿದೆ ಎಂದು ಮೈಸೂರು ಸಂಸ್ಥಾನದ ಭಾಗದ ಜನರು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳಲು ಆರಂಭಿಸಿದರು. ಮೈಸೂರಿನ ಪ್ರಗತಿಯ ಮತ್ತು ಅಭಿವೃದ್ಧಿಯು ಇದರಿಂದ ಕುಂಠಿತವಾಗುವುವು ಮೈಸೂರಿನ ಪ್ರಗತಿಗೆ ಅದರ ಈಗಿನ ಅಚ್ಚುಕಟ್ಟು ಮುಖ್ಯ ಕಾರಣವಾಗಿದೆ  ಮೈಸೂರಿನ ಜನರು ಸಂಸ್ಥಾನದ ಪೂರ್ವ ಮತ್ತು ಪಶ್ಚಿಮ ಕಡೆ ಇರುವ ಕನ್ನಡ ಪ್ರದೇಶಗಳುಳ್ಳ ಎರಡು ಸಂಸ್ಥಾನಗಳನ್ನು ರಚಿಸುವಂತೆ ಒತ್ತಾಯಪಡಿಸಲು ಆರಂಭಿಸಿದರು. ಈ ಎರಡು ಪ್ರದೇಶಗಳಲ್ಲಿ ಹೆಚ್ಚು ಕಡಿಮೆ ಸಮಸಂಖ್ಯೆಯ ಜನರು ಇದ್ದು ಉಭಯರಿಗೂ ಸುಖ ಮತ್ತು ಅಭ್ಯುದಯ ಸಾಧನೆಗೆ ಅವಕಾಶವಾಗುವುದು. ಬಳ್ಳಾರಿಯ ಭಾಗವನ್ನು ಆಂಧ್ರಕ್ಕೆ ವರ್ಗಾಯಿಸುವುದನ್ನು ವಿರೋಧಿಸಬೇಕಾಗಿದೆ ಎಂದು ತಿಳಿಸಿದರು[20].

ಕರ್ನಾಟಕ ಏಕೀಕರಣವಾದರೆ ಮೈಸೂರು ದೇಶದಲ್ಲಿ ಅಗಾಧ ಪ್ರಮಾಣದ ಅಭಿವೃದ್ಧಿ ಕಾರ್ಯ ಕುಂಠಿತವಾಗಿ ಹೊಸದಾಗಿ ಸೇರಿದ ಕರ್ನಾಟಕದ ಭಾಗಗಳು ವಿದ್ಯಾಭ್ಯಾಸ, ರಸ್ತೆ ನಿರ್ಮಾಣ, ಮುಂತಾದ ಅನೇಕ ಅಭಿವೃದ್ದಿ ಕಾರ್ಯಗಳು ನಡೆದು, ಅವು ಮೈಸೂರಿನ ಸಮಕ್ಕೆ ಬರಬೇಕಾದರೆ, ಮೈಸೂರಿನ ಅಭಿವೃದ್ಧಿ ಕಾರ್ಯಗಳು ಹತ್ತಾರು ವರ್ಷಗಳಾದರೂ ನಿಂತು ಹೋಗುವುದೆಂದೂ, ಹೊಸ ಪ್ರಾಂತಗಳಿಗೆ ಹೆಚ್ಚು ಗಮನ ಹರಿಸಬೇಕಾಗಿ ಬಂದು ಹೆಚ್ಚು ಹಣವೂ ದಕ್ಷ ಅಧಿಕಾರಿಗಳು ಮೈಸೂರಿಗೆ ಸಿಗದೆ, ಏಕೀಕರಣದಿಂದ ಹಳೆಯ ಮೈಸೂರಿಗೆ ತೊಡಕಾಗುವುದೆಂದೂ ಯೋಚಿಸಿ, ಎರಡು ಭಾಗಗಳ ಸ್ಥಿತಿಗತಿಗಳನ್ನು ಮನವರಿಕೆ ಮಾಡಿಕೊಂಡಿದ್ದ ವೀರಣ್ಣಗೌಡರವರ ನೇತೃತ್ವದಲ್ಲಿ ಕರ್ನಾಟಕ ಏಕೀಕರಣದಿಂದ ಹಳೆಯ ಮೈಸೂರಿಗೆ ತೊಂದರೆಯಾಗುವುದೆಂದು ಭಾವಿಸಿ ಏಕೀಕರಣವನ್ನು ತೀವ್ರವಾಗಿ ವಿರೋಧಿಸುವ ಮನೋಭಾವ ತಳೆದರು[21]. ಈ ಸಂದರ್ಭದಲ್ಲಿ ಮಂಡ್ಯ ಜಿಲ್ಲೆಯಲ್ಲಿಯೂ ಸಹ ಪರ ವಿರೋಧ ನಿಲುವುಗಳು ವ್ಯಕ್ತವಾದವು. ಮೈಸೂರು ರಾಜ್ಯವನ್ನು ಸೇರಿ ಅಖಿಲ ಕರ್ನಾಟಕ ರಚನೆಯನ್ನು ವಿರೋಧಿಸಿ ಉಪವಾಸ ಸತ್ಯಗ್ರಹವನ್ನು 19 ಮೇ 1955ರಂದು ಮಂಡ್ಯ ನಗರದ ಗಾಂಧಿ ಪಾರ್ಕಿನಲ್ಲಿ ಜಿ.ಮಾದೇಗೌಡರು ಮತ್ತು ಗೌಡಗೆರೆಯ ಸಾಗಪ್ಪ ಪ್ರಾರಂಭಿಸಿದರು.

ಉಪವಾಸ ಆರಂಭಿಸುವ ಮುಂಚೆ ಅವರು ನಗರದಾದ್ಯಂತ ಮೆರವಣಿಗೆ ನಡೆಸಿದ್ದರು. ಈ ಸಂದರ್ಭದಲ್ಲಿ ಮಂಡ್ಯ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಕೆ.ವಿ.ಶಂಕರಗೌಡರು ಇವರಿಬ್ಬರಿಗೂ ಹೂವಿನ ಹಾರಹಾಕಿ ಉಪವಾಸ ಸತ್ಯಗ್ರಹಕ್ಕೆ ಯಶಸ್ವಿಗಾಗಿ ಶುಭಕೋರಿದರು. ಮೈಸೂರು ಸಂಸ್ಥಾನಕ್ಕೆ ಇತರ ಕನ್ನಡ ಭಾಗಗಳು ಸೇರಕೂಡದೆಂದು ಮೈಸೂರು ಮೈಸೂರಾಗಿ ಉಳಿಯಲೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಕೇಂದ್ರ ನಾಯಕರಿಂದ ಸೂಕ್ತ ಆಶ್ವಾಸನೆ ಬರುವವರೆಗೂ ಉಪವಾಸ ನಡೆಸುವುದಾಗಿ ಜಿ.ಮಾದೇಗೌಡರು ಅಭಿಪ್ರಾಯ ವ್ಯಕ್ತಪಡಿಸಿದರು. ಕೆ.ವಿ.ಶಂಕರಗೌಡರು 20 ಮೇ 1955 ರಂದು ಕರ್ನಾಟಕ ಏಕೀಕರಣ ಆಗುವುದು ಇಲ್ಲವೋ ಕಂಡವರ್ಯಾರು ಏನು ಬೇಸರ ನಿಮಗೆ ಉಪವಾಸವನ್ನು ಮುಕ್ತಾಯಮಾಡಿ ಎಂದು ಹಣ್ಣಿನ ರಸ ಕುಡಿಸಿ ಜಿ.ಮಾದೇಗೌಡ ಮತ್ತು ಗೌಡಗೆರೆ ನಾಗಪ್ಪನವರ ಸತ್ಯಗ್ರಹವನ್ನು ಅಂತ್ಯಗೊಳಿಸಿದರು. ಈ ಯುವ ಮುಂದಾಳುಗಳು ಸತ್ಯಗ್ರಹವನ್ನು ನಿಲ್ಲಿಸಿದ್ದರು. ಅನೇಕ ಹಿರಿಯ ಮುಖಂಡರು ಅಧಿಕೃತವಾಗಿ ಚಳುವಳಿಯನ್ನು ಮುಂದುವರೆಸಿದ್ದರು.[22]

1956ನೇ ಇಸವಿಯಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಅಧಿವೇಶನವೊಂದು ಮೈಸೂರು ಕ್ರಾಫರ್ಡ್ ಹಾಲ್‌ನಲ್ಲಿ ನಡೆಯಿತು. ಅಲ್ಲಿ ಕೆ.ಪುಟ್ಟಸ್ವಾಮಿ, ಎ.ವಿ.ನರಸಿಂಹರೆಡ್ಡಿಯವರು ವೀರಣ್ಣಗೌಡರನ್ನು ಭೇಟಿ ಮಾಡಿ ಏಕೀಕರಣ ವಿಚಾರದಲ್ಲಿ ನಿರ್ಲಿಪ್ತತೆ ಸಾಧುವಲ್ಲ ಇದನ್ನು ಉಗ್ರವಾಗಿ ಪ್ರತಿಭಟಿಸಬೇಕು ಇಲ್ಲವಾದರೆ ನಾವು ಮೈಸೂರನ್ನು ಮಾರಿಕೊಂಡಂತಾಗುತ್ತದೆ ಎಂದು ತಿಳಿಸಿದರು. ಆಗ ವೀರಣ್ಣಗೌಡರು ಒಂದು ಪಟ್ಟಿಯನ್ನು ತಯಾರಿಸಿ ಬೆಂಬಲ ಕೊಡುವವರನ್ನು ಹೆಸರಿಸಿದರು. ಪ್ರಜಾಪ್ರತಿನಿಧಿ ಸಭೆಯಲ್ಲೂ ಬಹಿರಂಗ ಪ್ರತಿಭಟನೆಯಾದವು. ಮೈಸೂರು ಸರ್ಕಾರ ನಿಯಮಿಸಿದ ವಸ್ತುಸ್ಥಿತಿ ಮಾಪಕ ಸಮಿತಿ, ಮೈಸೂರು ಸಂಸ್ಥಾನ ಹೊರಗಿನ ಕನ್ನಡ ಭಾಗಗಳು ಕೊರತೆಯ ಪ್ರದೇಶವಾಗುವವೆಂದು ಸೂಚನೆ ಮಾಡಿದುದರಿಂದ ಏಕೀಕರಣ ವಿರೋಧಿಸುತ್ತಿದ್ದ ಮೈಸೂರಿಗರ ಸಂಖ್ಯೆ ಹೆಚ್ಚಾಯಿತು. ಈ ವಿರೋಧಿಗಳು ದ್ವಿ ಕರ್ನಾಟಕ ವಾದವನ್ನು ಪ್ರಮುಖ ನಾಯಕರು ಬೆಂಬಲಿಸಿದರು. ಆ ನಾಯಕರಲ್ಲಿ ಪ್ರಮುಖರೆಂದರೆ ಹೆಚ್.ಕೆ.ವೀರಣ್ಣಗೌಡ, ವಿ.ವೆಂಕಟಪ್ಪ, ಎನ್.ಹುಚ್ಚಮಾಸ್ತಿಗೌಡ, ಕೆ.ವಿ.ಶಂಕರಗೌಡ, ಜಿ.ಮಾದೇಗೌಡ, ಪಿ.ಎನ್.ಜವರಪ್ಪಗೌಡ, ಎಂ.ಪಿ.ಎಲ್. ಶಾಸ್ತ್ರಿ ಮೊದಲಾದವರು ಮೈಸೂರು ಕರ್ನಾಟಕದೊಡನೆ ವಿಲೀನವಾಗುವುದನ್ನು ವಿರೋಧಿಸುತ್ತಿದ್ದರು. ಇವರ ಪ್ರಕಾರ ವಿಲೀನವಾದರೆ ಒಂದು ಪ್ರಬಲ ಕೋಮಿನ ಜನಾಂಗ ಪ್ರಾಬಲ್ಯರಾಗಿ ಹಳೆ ಮೈಸೂರಿಗೆ ಆರ್ಥಿಕವಾಗಿ ತೊಂದರೆಯಾಗುತ್ತದೆಂದು ರಾಜಕೀಯ ಹಾಗೂ ಧಾರ್ಮಿಕ ದೃಷ್ಟಿಯಿಂದಲೂ ದ್ವಿಕರ್ನಾಟಕವಾದವು ಮುಖ್ಯವೆಂದು ತಿಳಿಸಿದರು. ಈ ಮಧ್ಯೆ ಮೈಸೂರಿನ ಅಸ್ತಿತ್ವನ್ನು ಉಳಿಸಿಕೊಳ್ಳಬೇಕೆಂದೂ ನೆಹರು, ಕೇಂದ್ರ ಗೃಹಮಂತ್ರಿ ಗೋವಿಂದವಲ್ಲಭಪಂತ್, ವಿದ್ಯಾಮಂತ್ರಿ ಮೌಲಾನಾಆಜಾದ್ ಮುಂತಾದ ನಾಯಕರಲ್ಲಿ

ಒತ್ತಾಯ ಮಾಡಲು ಎನ್.ಹುಚ್ಚಮಾಸ್ತಿಗೌಡ, ಡಿ.ದೇವರಾಜ ಅರಸು, ನಾಗಪ್ಪ ಶೆಟ್ಟಿ, ಆರ್.ಕೆ.ಪ್ರಸಾದ್, ಎಲ್.ಟಿ.ಕಾರ್ಲೆ, ಹೆಚ್.ಕೆ.ವೀರಣ್ಣಗೌಡ, ಕೆ.ವಿ.ಶಂಕರಗೌಡ, ಎಂ.ಕೆ.ಶಿವನಂಜಪ್ಪ ಅಧಿಕೃತವಾಗಿ ಇವರ ಜೊತೆ ಮೈಸೂರು ವಿಲೀನವಿರೋಧಿ ನಿಯೋಗವೊಂದು ದೆಹಲಿಗೆ ತೆರಳಿದ್ದರು.

ಮೈಸೂರು ವಿಲೀನ ವಿರೋಧಿ ಸಮ್ಮೇಳನವನ್ನು ಮಂಡ್ಯದಲ್ಲಿ ನಡೆಸಲು ಸಿದ್ಧತೆಗಳಾಗಬೇಕೆಂದೂ ಕೆ.ವಿ.ಶಂಕರಗೌಡರು ಈ ಸಮ್ಮೇಳನದ ನೇತಾರರಾಗಬೇಕೆಂದು ವಿ.ವೆಂಕಟಪ್ಪನವರು, ಎಚ್.ಕೆ.ವೀರಣ್ಣಗೌಡರು ಹಾಗೂ ಜಿ.ಮಾದೇಗೌಡರು ತಿಳಿಸಿದರು[24]. ಅದರಂತೆ ಮಂಡ್ಯ ಜಿಲ್ಲೆಯಲ್ಲಿ ಪ್ರಮುಖರ ಸಭೆಯೊಂದು ನಡೆದು ಮೈಸೂರು ಸಂಸ್ಥಾನವು ಪ್ರತ್ಯೇಕವಾಗಿ ಉಳಿಯುವ ಬಗ್ಗೆ ಜನಾಭಿಪ್ರಾಯವನ್ನು ರೂಢಿಸಲು ಸಂಸ್ಥಾನ ಸಮ್ಮೇಳನವೊಂದನ್ನು ಕರೆಯಲು ಸ್ವಾಗತ ಸಮಿತಿಯೊಂದನ್ನು ಕೆ.ವಿ.ಶಂಕರಗೌಡರ ಅಧ್ಯಕ್ಷತೆಯಲ್ಲಿ ರಚಿಸಲಾಗಿತ್ತು. ಈ ಸಮಿತಿಯ 04.12.1955ರಂದು ಮಂಡ್ಯದಲ್ಲಿ ಸಭೆ ಸೇರಿ ಸಂಸ್ಥಾನದ ಸಮ್ಮೇಳನವನ್ನು ಕರೆಯಲು ನಿರ್ಧರಿಸಿ ಪ್ರಾಂತ ಪುನರ್ವಿಂಗಡಣಾ ಸಮಿತಿ ವರದಿಯನ್ನು ವಿರೋಧಿಸಿ ಮೈಸೂರು ಪ್ರತ್ಯೇಕ ಸಂಸ್ಥಾನವಾಗಿಯೇ ಉಳಿಯಬೇಕೆಂದು ಆತ್ಮಸಾಕ್ಷಿಯಾಗಿ ಇಚ್ಛೆಪಡುವವರು ಸಮ್ಮೇಳನದಲ್ಲಿ ಪ್ರತಿನಿಧಿಗಳಾಗಿ ಭಾಗವಹಿಸಬಹುದೆಂದೂ ಹೇಳಿದರು[25]. ಈ ನಿರ್ಣಯದಂತೆ 06.12.1955ರಂದು ಮಂಡ್ಯದಲ್ಲಿ ಮೂರು ಸಾವಿರ ಜನರು ಏಕ ಕರ್ನಾಟಕದ ವಿರುದ್ಧವಾಗಿ ಪ್ರದರ್ಶನ ನಡೆಸಿದರು. ಮೈಸೂರು ಈಗಿರುವಂತೆಯೇ ಇರಬೇಕೆಂದು ಸೂಚಿಸುವ ಬೋರ್ಡುಗಳನ್ನು ಜನರು ಹಿಡಿದು ಘೋಷಣೆಗಳನ್ನು ಕೂಗಿದರು. 65 ಜೊತೆ ಎತ್ತುಗಳನ್ನು ಕಟ್ಟಿದ ರಥದಲ್ಲಿ ಭಾರತ ಮಾತೆ ಶ್ರೀಮನ್ಮಹಾರಾಜರ ಭಾವಚಿತ್ರಗಳನ್ನಿಟ್ಟು ಮುಖ್ಯ ಬೀದಿಗಳಲ್ಲಿ ಮೆರವಣಿಗೆ ನಡೆಸಲಾಯಿತು. ಪಟ್ಟಣದ ವ್ಯಾಪಾರಿಗಳು, ಹೋಟೆಲ್‌ನವರು, ಅಂಗಡಿಗಳನ್ನು ಮುಚ್ಚಿದರು. ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷ ಎಂ. ಪಾಪೇಗೌಡ, ಕಾರ್ಯದರ್ಶಿ ಪಿ.ಎನ್.ಜವರಪ್ಪಗೌಡ ಪೌರಸಭಾಧ್ಯಕ್ಷ ಜಿ.ಎಂ.ಮಹಮ್ಮದ್‌ರವರು ಹಾಗೂ ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ಬಹಿರಂಗ ಸಭೆ ನಡೆಯಿತು[26].

1956ನೇ ಜನವರಿ 1 ರಂದು ಕರ್ನಾಟಕ ಏಕೀಕರಣವನ್ನು ವಿರೋಧಿಸುವ ಬೃಹತ್ ಸಭೆಯೊಂದನ್ನು ಮಂಡ್ಯದಲ್ಲಿ ಸೇರಿಸಬೇಕೆಂದು ಅದಕ್ಕೆ ತಕ್ಕ ವ್ಯವಸ್ಥೆಗಾಗಿ ಏರ್ಪಾಡು ಮಾಡಲಾಯಿತು. ಕೆ.ವಿ.ಶಂಕರಗೌಡರು ಮುಖಂಡರಾಗಿದ್ದರು. ಹಾಸನದ ಕೆ.ಲಕ್ಕಪ್ಪಗೌಡರು ಅಧ್ಯಕ್ಷರಾಗಿ ಆಯ್ಕೆಯಾದರು. ಸಮಿತಿಯ ನಿರ್ಣಯದಂತೆ ಮೈಸೂರು ವಿಲೀನ ವಿರೋಧ ಸಮ್ಮೇಳನವು 01.01.1956ರಂದು ಮಂಡ್ಯದಲ್ಲಿ ಆರಂಭವಾಯಿತು. ಸಂಸ್ಥಾನದ ನಾನಾ ಭಾಗಗಳಿಂದ 20,000 ಕ್ಕೂ ಹೆಚ್ಚು ಪ್ರತಿನಿಧಿಗಳು ಭಾಗವಹಿಸಿದ್ದರು.

ಪ್ರತಿನಿಧಿಗಳು ತಲೆಗೊಂದು ರೂಪಾಯಿಗಳಂತೆ ಪ್ರತಿನಿಧಿ ಶುಲ್ಕ ಕೊಟ್ಟು ಭಾಗವಹಿಸಿದ್ದರು. ಆ ದಿನ 8.15 ಗಂಟೆಗೆ ಮಾಜಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಹೆಚ್.ಕೆ.ವೀರಣ್ಣಗೌಡರು ಧ್ವಜಾರೋಹಣ ಮಾಡಿ, ಧ್ವಜದ ಹಿರಿಮೆಯನ್ನು ವಿವರಿಸಿದರು ಮತ್ತು ಎಲ್ಲಾ ರಾಷ್ಟ್ರದ ಧ್ವಜಗಳಿಗೂ ಸಮಾನವಾದ ಗೌರವವನ್ನು ನೀಡಬೇಕೆಂದು ಸೂಚಿಸಿದರು. ಮೈಸೂರಿನ ವೈಶಿಷ್ಟ್ಯತೆಯನ್ನು ಅವರು ತಿಳಿಸಿ ಆಡಳಿತದ ಹಿತದೃಷ್ಟಿಯಿಂದ ಮೈಸೂರು ಕರ್ನಾಟಕದಲ್ಲಿ ಐಕ್ಯವಾಗುವುದು ಸರಿಯಲ್ಲವೆಂದು ಸೂಚಿಸಿದರು ನಂತರ 10.30 ಗಂಟೆಗೆ ಸಮ್ಮೇಳನದ ಅಧ್ಯಕ್ಷ ಕೆ.ಲಕ್ಕಪ್ಪಗೌಡರನ್ನು ಮೆರವಣಿಗೆಯಲ್ಲಿ ನಗರದ ಬೀದಿಗಳಲ್ಲಿ ಕರೆತರಲಾಯಿತು. ಹೆಚ್.ಕೆ.ವೀರಣ್ಣಗೌಡ, ಕೆ.ವಿ.ಶಂಕರಗೌಡ, ಜಿ.ಮಾದೇಗೌಡ ಮುಂತಾದವರು ಮೆರಣಿಗೆಯ ಮುಂದೆ ಕಾಲ್ನಡಿಗೆಯಲ್ಲಿ ಸಾಗುತ್ತಿದ್ದರು. 11 ಗಂಟೆಗೆ ಸರಿಯಾಗಿ ಸಮ್ಮೇಳನದ ಚಪ್ಪರದ ಬಳಿ ಅವರನ್ನು ಸ್ವಾಗತಿಸಲಾಯಿತು. ನಂತರ ಸ್ವಾಗತ ಸಮಿತಿ ಅಧ್ಯಕ್ಷರಾದ ಕೆ.ವಿ.ಶಂಕರಗೌಡರು ಭಾಷಣ ಮಾಡಿ ಮೈಸೂರಿನ ಇತಿಹಾಸದಲ್ಲಿ ಮೊಟ್ಟಮೊದಲನೆ ಬಾರಿಗೆ ಇಂತಹ ಸಮ್ಮೇಳನವು ನಡೆಯುತ್ತಿರುವುದಾಗಿಯೂ, ಇದಕ್ಕೆ ಅನೇಕ ರೀತಿಯ ಎಡರು ತೊಡರುಗಳನ್ನು ವಿರೋಧಿಗಳು ತಂದೊಡ್ಡುತ್ತಿರುವರೆಂದೂ ತಿಳಿಸಿದರು. ಸಮ್ಮೇಳನದ ಧ್ಯೇಯಗಳನ್ನು ಅವರು ವಿವರಿಸಿ, ಮುಖ್ಯಮಂತ್ರಿಗಳ ಮತ್ತು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರ ದಾಕ್ಷಿಣ್ಯಕ್ಕಾಗಿ ಜನತೆ ತನ್ನ ನಿಜವಾದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿಲ್ಲವೆಂದು ತಿಳಿಸಿದರು. ನಗರದಲ್ಲೆಲ್ಲಾ 'ಮೈಸೂರನ್ನು ಉಳಿಸಿ' ಭಿತ್ತಿಪತ್ರಗಳನ್ನು ಹಚ್ಚಲಾಗಿತ್ತು[27]. ಈ ಸಮ್ಮೇಳನದಲ್ಲಿ ಕೆಲವು ನಿರ್ಣಯಗಳಾದವು ಹಳೆಯ ಮೈಸೂರಿಗೆ ಮಂಗಳೂರು ಮತ್ತು ಕೊಡಗು ಪ್ರಾಂತ್ಯಗಳನ್ನು ಮಾತ್ರ ಸೇರಿಸಿಕೊಂಡು ಮೈಸೂರು ರಾಜ್ಯವಾಗಬೇಕೆಂದೂ ಉಳಿದ ಪ್ರಾಂತಗಳು ಕರ್ನಾಟಕ ಎಂಬ ಹೆಸರಿನಿಂದ ಒಟ್ಟಾಗಿ ಬೇರೆ ಸರ್ಕಾರವನ್ನು ಸ್ಥಾಪಿಸಿಕೊಳ್ಳಬೇಕೆಂದೂ ನಿರ್ಣಯಮಾಡಿತು. ಮಂಡ್ಯದಲ್ಲಿ ನಡೆದ ಮೈಸೂರು ವಿಲೀನ ವಿರೋಧ ಸಮ್ಮೇಳನದಲ್ಲಿ ಭಾಗವಹಿಸಿದ ಕಾಂಗ್ರೆಸ್ಸಿನವರ ಮೇಲೆ ಕಾಂಗ್ರೆಸ್ ಪಕ್ಷದ ಕಾರ್ಯಕಾರಿ ಸಮಿತಿಯು ಶಿಸ್ತುಕ್ರಮ ಕೈಗೊಳ್ಳುವಂತೆ ತೀರ್ಮಾನಿಸಿತು.

ಕೆ.ಹನುಮಂತಯ್ಯನವರು ಏಕೀಕರಣದ ಬಗ್ಗೆ ಒಂದು ಸಷ್ಟ ನಿಲುವು ತಾಳುವವರಾಗಿರಲಿಲ್ಲ. ಹೊಸದಾಗಿ ರಚಿತವಾಗಲಿರುವ ಕರ್ನಾಟಕ ಪ್ರಾಂತ್ಯಕ್ಕೆ ಸೇರತಕ್ಕ ವಿವಿಧ ಪ್ರದೇಶಗಳನ್ನು ವಿಲೀನಗೊಳಿಸುವ ಕಾರ್ಯವು ಯಶಸ್ವಿಯಾಗಿ ನಡೆಯುವ ಬಗ್ಗೆ ಸಚಿವ ಮಟ್ಟದ ಒಂದು ಸಮಿತಿಯನ್ನು ರಚಿಸಲು ತಾವು ಆಲೋಚಿಸಿರುವುದಾಗಿಯೂ, ವಿವಿಧ ಕರ್ನಾಟಕ ಪ್ರದೇಶಗಳ ಪಾರ್ಲಿಮೆಂಟ್ ಮತ್ತು ಶಾಸನ ಸಭಾ ಸದಸ್ಯರುಗಳು ಅದರಲ್ಲಿರುವರೆಂದೂ ಮೈಸೂರಿನ ಮುಖ್ಯಮಂತ್ರಿ ಹನುಮಂತಯ್ಯನವರು ತಿಳಿಸಿದ್ದರು. ಮೈಸೂರು ಸಂಸ್ಥಾನದ ಹೊರಗಿನ ಕರ್ನಾಟಕ ಪ್ರದೇಶಗಳ ನಾಯಕರ ಸಮಸ್ಯೆಗಳನ್ನು ಅರಿಯುವ ಸಲುವಾಗಿ ಅವರುಗಳನ್ನು ಭೇಟಿ ಮಾಡಲು ತಾವು ಆಶಿಸಿರುವುದಾಗಿಯೂ

ಈ ಉದ್ದೇಶಕ್ಕಾಗಿ ಸದ್ಯದಲ್ಲಿಯೇ ತಾವು ಬೊಂಬಾಯಿಯ ಕನ್ನಡ ಪ್ರದೇಶಗಳಲ್ಲಿ ಪ್ರವಾಸ ಕೈಗೊಳ್ಳುವುದಾಗಿಯೂ ತಿಳಿಸಿದರು[28].

ಆದರೆ ಏಕೀಕರಣದ ವಿಲೀನವಾಗಿದ್ದ ಹಲವಾರು ನಾಯಕರು ಅಭಿಪ್ರಾಯ ಬದಲಿಸಿ ಏಕೀಕರಣ ವಿರುದ್ಧ ನಡೆಯುತ್ತಿದ್ದ ಹೋರಾಟಕ್ಕೆ ಭಂಗವನ್ನುಂಟು ಮಾಡಿದರು. ಏಕೀಕರಣದ ವಿರುದ್ಧ ಸಮ್ಮೇಳನದ ಅಧ್ಯಕ್ಷರಾಗಿದ್ದ ಕೆ.ಲಕ್ಕಪ್ಪಗೌಡರೇ ಪತ್ರಿಕೆಗಳಿಗೆ ಹೇಳಿಕೆಯನ್ನು ನೀಡಿ ದೇಶದ ಹಿತದೃಷ್ಟಿಯಿಂದ ಕರ್ನಾಟಕ ಏಕೀಕರಣ ಆಗಲೇಬೇಕೆಂದೂ ಅದನ್ನು ತಪ್ಪಿಸಲು ಮಾಡುವ ಪ್ರಯತ್ನ ಒಳ್ಳೆಯದಲ್ಲವೆಂದೂ ಹೇಳಿಕೆ ಕೊಟ್ಟರು. ನಂತರ ಎಸ್.ಚನ್ನಯ್ಯ, ಕೆ.ಹನುಮಂತಯ್ಯ ಇನ್ನೂ ಮೊದಲಾದವರು ಸಹಾ ತಮ್ಮ ಅಭಿಪ್ರಾಯವನ್ನು ಬದಲಿಸಿಕೊಂಡರು. ಕರ್ನಾಟಕದ ಏಕೀಕರಣವನ್ನು ಪ್ರಬಲವಾಗಿ ವಿರೋಧಿಸಿ ಮೈಸೂರು ಮೈಸೂರಾಗಿಯೇ ಉಳಿಯಲಿ ಎಂಬ ಚಳುವಳಿಯ ಮುಖಂಡರಲ್ಲೊಬ್ಬರಾದ ವಿಜಯ ದೈನಿಕತೆಯ ಸಂಪಾದಕ ಎ.ರಾಮಣ್ಣನವರ ಮಾತು ಪ್ರಮಾಣಬದ್ಧ, ಸಂಪೂರ್ಣಸತ್ಯ, ಹನುಮಂತಯ್ಯನವರಿಲ್ಲದಿದ್ದರೆ ಮೈಸೂರು ದೇಶ ಒಂದಾಗುತ್ತಿರಲಿಲ್ಲ. ಇಂದು ರಾಜ್ಯದ ಹೆಸರು ಕರ್ನಾಟಕವಾಗುವುದಕ್ಕೆ ಅವಕಾಶವಾಗುತ್ತಿರಲಿಲ್ಲ. ಪ್ರಾಂತ್ಯ ಪುನರ್ವಿಂಗಡನೆಯ ವರದಿ ಬಂದ ಕೂಡಲೇ ಮೈಸೂರು ರಾಜ್ಯದಲ್ಲಿ ಕರ್ನಾಟಕಕ್ಕೆ ಪ್ರಬಲ ವಿರೋಧಿಗಳಾಗಿದ್ದರು. ಆದರೆ ಹನುಮಂತಯ್ಯನವರ ದಿಟ್ಟತನದಿಂದ ತನ್ನ ಮಂತ್ರಿಮಂಡಲದ ಮೂವರು ಸದಸ್ಯರ ವಿರೋಧವಿದ್ದರೂ ಕರ್ನಾಟಕವಾಗಲೇಬೇಕೆಂಬ ತೀರ್ಮಾನಕ್ಕೆ ಬಂದು ಅಸೆಂಬ್ಲಿಯಲ್ಲಿ ಗೊತ್ತುವಳಿ ಪಾಸು ಮಾಡಿಸಿದರು. ಅದರಿಂದಾಗಿ ಅವರು ತನ್ನ ಮುಖ್ಯಮಂತ್ರಿ ಪದವಿಯನ್ನು ಕಳೆದುಕೊಳ್ಳಬೇಕಾಗಿ ಬಂತು. ಅಷ್ಟೇ ಅಲ್ಲದೆ, ಕರ್ನಾಟಕದಲ್ಲಿ ಅವರು ಚೇತರಿಸಿಕೊಳ್ಳಬೇಕಾದರೆ ಸುಮಾರು 14 ವರ್ಷಗಳು ಬೇಕಾಯಿತು[29]. ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಗೋಪಾಲಗೌಡರ ಹೆಸರು ಸಹ ಪ್ರಮುಖವಾದದ್ದು ಅಖಂಡ ಕರ್ನಾಟಕಕ್ಕಾಗಿ ಶ್ರಮಿಸಿದ್ದ ಸ್ಮರಣೀಯ ವ್ಯಕ್ತಿಗಳಲ್ಲಿ ಕೆ.ಆರ್.ಕಾರಂತ, ಎಸ್.ನಿಜಲಿಂಗಪ್ಪ, ಅ.ನ.ಕೃ. ದೊಡ್ಡ ಮೇಟಿಯವರಂತೆ ಗೋಪಲಗೌಡರೂ ಒಬ್ಬರು. ಕರ್ನಾಟಕ ಏಕೀಕರಣವಾದರೆ ಲಿಂಗಾಯಿತರ ಪ್ರಾಬಲ್ಯ ಬೆಳೆಯುವುದೆಂದು ಹಳೆಯ ಮೈಸೂರಿನ ಒಕ್ಕಲಿಗರು ಆತಂಕಗೊಂಡಿದ್ದ ಕಾಲ. ಹೆಚ್.ಕೆ.ವೀರಣ್ಣಗೌಡ, ಕೆ.ವಿ.ಶಂಕರಗೌಡ ಹಾಗೂ ಜಿ.ಮಾದೇಗೌಡ ಮೊದಲಾದವರೂ ಈ ಆತಂಕಕ್ಕೆ ಈಡಾಗಿದ್ದು ಇಂತ ವಿಷಮ ಪರಿಸ್ಥಿಯಲ್ಲೂ ಒಕ್ಕಲಿಗರನ್ನು ಒಲಿಸಿಕೊಂಡು ಏಕೀಕರಣದ ಹಾದಿಯನ್ನು ಸುಗಮಗೊಳಿಸಿದ ಶ್ರೇಯಸ್ಸಿನ ಪ್ರಮುಖ ಪಾಲು ಗೋಪಾಲಗೌಡರಿಗೆ ಸಲ್ಲುತ್ತದೆ[30].

ಓೀಗೆ ಮಂಡ್ಯದಲ್ಲಿ ಆರಂಭಗೊಂಡಿದ್ದ ಮೈಸೂರು ವಿಲೀನ ವಿರೋಧಿ ಚಳುವಳಿಯು ಹಲವಾರು ನಾಯಕರ ಬದಲಾದ ನಿಲುವಿನಿಂದ ಸೋಲನ್ನಪ್ಪಿತು.

ಚಳುವಳಿಯ ಮುಂಚೂಣಿಯಲ್ಲಿದ್ದ ಅಗ್ರನಾಯಕರೇ ಕೇಂದ್ರ ನಾಯಕರನ್ನು ಸಂಪ್ರೀತಿಗೊಳಿಸುವ, ಸ್ವಾರ್ಥ ಸಾಧಿಸಿಕೊಳ್ಳುವ ಉದ್ದೇಶದಿಂದಲೇ ಈ ವ್ಯಕ್ತಿಗಳು ಏಕೀಕರಣದ ಕಡೆ ವಾಲಿದರು. ಈ ಬದಲಾವಣೆ ಹೆಚ್.ಕೆ.ವೀರಣ್ಣಗೌಡ, ಕೆ.ವಿ.ಶಂಕರಗೌಡ, ಜಿ.ಮಾದೇಗೌಡ ಇನ್ನೂ ಮುಂತಾದ ನಾಯಕರಿಗೆ ಬೇಸರವನ್ನುಂಟು ಮಾಡಿತು. ಇದರಿಂದ ಅಂತಿಮವಾಗಿ ಚಳುವಳಿಯು ಅಖಂಡ ಕರ್ನಾಟಕದ ಏಕೀಕರಣದ ನಿಲುವಿಗೆ ವಿಧಿ ಇಲ್ಲದೇ ಬದ್ಧವಾಗಬೇಕಾಯಿತು[31]. ಈ ರೀತಿಯಾಗಿ ಜಿ.ಮಾದೇಗೌಡರು ಅಖಂಡ ಕರ್ನಾಟಕ ರಚನೆಯಾಗುವ ಪೂರ್ವದಲ್ಲಿ ನಡೆದ ಪ್ರಮುಖ ಚಳುವಳಿಗಳಾದ ಶಿವಪುರ ಸತ್ಯಗ್ರಹ, ಕ್ವಿಟ್ ಇಂಡಿಯಾ ಚಳುವಳಿ, ಮೈಸೂರು ವಿಲೀನ ವಿರೋಧಿ ಚಳುವಳಿಗಳಲ್ಲಿ ಭಾಗವಹಿಸಿದ್ದರು. ಮುಂದೆ ನಾಡು–ನುಡಿ, ನೆಲ–ಜಲ ಹೋರಾಟಗಳಲ್ಲಿ ಅಖಂಡ ಕರ್ನಾಟಕದ ಪರವಾಗಿಯೇ ತಮ್ಮ ಅಭಿಪ್ರಾಯವ್ಯಕ್ತಪಡಿಸಿದ್ದನ್ನು ಗೌಡರ ಜೀವನದಿಂದಲೇ ವ್ಯಕ್ತವಾಗುತ್ತದೆ. ಇದಕ್ಕೆ ಅತ್ಯುತ್ತಮವಾದ ನಿದರ್ಶನವೆಂದರೆ ಗೌಡರ ಜೀವನದಲ್ಲಿ ಗೋಕಾಕ್ ಚಳುವಳಿಯಲ್ಲಿ ಭಾಗವಹಿಸುವ ಸದಾವಕಾಶ ದೊರೆಯಿತು. ಈ ಚಳುವಳಿಯಲ್ಲಿಯೂ ಸಹ ಮಂಡ್ಯ ಜಿಲ್ಲೆಯ ನೇತೃತ್ವವನ್ನು ವಹಿಸಿದ್ದವರಲ್ಲಿ ಜಿ.ಮಾದೇಗೌಡರು ಒಬ್ಬರು.

## 2.8 ಗೋಕಾಕ್ ಚಳುವಳಿಯಲ್ಲಿ ಜಿ. ಮಾದೇಗೌಡರ ಪಾತ್ರ

ಕರ್ನಾಟಕವು ಒಂದುಗೂಡಬೇಕು ಎಂಬ ಉದ್ದೇಶದಿಂದ ನಡೆದ ಏಕೀಕರಣ ಚಳುವಳಿಯನ್ನು ಹೊರತುಪಡಿಸಿದರೆ ಮತ್ತೆ ಅಷ್ಟೇ ಪೂರ್ಣ ಪ್ರಮಾಣದಲ್ಲಿ ಹಾಗೂ ಪ್ರಭಾವಯುತವಾಗಿ ನಡೆದ ಚಳುವಳಿ ಎಂದರೆ 'ಗೋಕಾಕ್ ಚಳುವಳಿ' ಮಾತ್ರ ನಾಡಿನ ಎಲ್ಲ ಕಡೆಗಳಿಂದಲೂ ಕನ್ನಡಿಗರು ಗೋಕಾಕ್ ವರದಿಯ ಅನುಷ್ಠಾನಕ್ಕಾಗಿ ಸ್ಪಂದಿಸಿದ್ದು ಗಮನಾರ್ಹವಾದದ್ದು, ಏಕೆಂದರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಹಾಗೂ ಅಷ್ಟೇ ವ್ಯಾಪಕವಾಗಿ ಇನ್ನಾವುದೇ ಚಳುವಳಿ ಏಕೀಕರಣದ ನಂತರ ನಡೆದಿರಲಿಲ್ಲ. ಆದ್ದರಿಂದಲೇ ಈ ಚಳುವಳಿ ಭಿನ್ನ ನೆಲೆಯಲ್ಲಿ ನಿಲುವುದು. ಅಷ್ಟೇ ಜನಪರವಾದ ಚಳುವಳಿಯೂ ಇದಾಗಿದೆ. ಸ್ವಾತಂತ್ರ್ಯಾನಂತರ ಭಾಷಾವಾರು ಪ್ರಾಂತ್ಯಗಳು ರಚನೆಯಾದ ಮೇಲೆ ಆಯಾ ರಾಜ್ಯದಲ್ಲಿ ಅಲ್ಲಿನ ರಾಜ್ಯ ಭಾಷೆಗಳಿಗೆ ಪ್ರಾಧಾನ್ಯತೆ ದೊರೆಯಿತು. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಪ್ರಧಾನ ಪಟ್ಟ ದೊರೆಯಬೇಕೆಂಬುದೇ ಬಹುಸಂಖ್ಯಾತ ಕನ್ನಡಿಗರ ಅಭಿಪ್ರಾಯ, ಆಡಳಿತ ಶಿಕ್ಷಣ ಪೂರ್ವ ಕನ್ನಡಮಯವಾಗಬೇಕೆಂದು ಅವರ ಇಚ್ಛೆ, ಅದಕ್ಕೆ ಸೂಕ್ತ ವಾತಾವರಣ ಸೃಷ್ಟಿಸಲು ಹಲವು ಪ್ರಯತ್ನ ನಡೆಯುತ್ತಿದ್ದವು[32].

ರಾಜ್ಯದ ಅಂದಿನ ಮುಖ್ಯಮಂತ್ರಿ ಡಿ.ದೇವರಾಜ ಅರಸು ಅವರ ಅಧಿಕಾರಾವಧಿಯಲ್ಲಿ (1979) ಶಾಲಾ ಪಠ್ಯಕ್ರಮದಲ್ಲಿನ ಭಾಷೆಗಳಿಗೆ ಸಂಬಂಧಿಸಿದಂತೆ ಸಮಸ್ಯೆ ಹುಟ್ಟಿತು. ಆ ವೇಳೆಯಲ್ಲಿ ಪ್ರೌಢಶಾಲಾ ತರಗತಿಗಳಲ್ಲಿ ಅದುವರೆಗಿನ ಶಿಕ್ಷಣ ನೀತಿಯ ಪ್ರಕಾರ ಕನ್ನಡ, ಇಂಗ್ಲೀಷ್, ತೆಲುಗು, ತಮಿಳು ಮೊದಲಾದ ಮಾತೃಭಾಷೆಗಳ ಜೊತೆಗೆ ಸಂಸ್ಕೃತವನ್ನು ಸಹ ಪ್ರಥಮ ಭಾಷಾ ಸ್ಥಾನದಲ್ಲಿ ಕಲಿಯಬಹುದಾಗಿತ್ತು. ಇದು ಯಾವುದೇ ಮಾಧ್ಯಮದ ಪ್ರೌಢಶಾಲಾ ವಿದ್ಯಾರ್ಥಿಗಳಿಗಾದರೂ ಅನ್ವಯ ಆಗುವಂಥದ್ದು. ಒಂದನೆಯ ತರಗತಿಯಿಂದ ತಮ್ಮ ಮಾತೃಭಾಷೆಯಲ್ಲಿ ಓದಿದವರಿಗೆ ಏಕಾಏಕಿ ಎಂಟನೆಯ ತರಗತಿಯಿಂದ ಹೊಸ ಭಾಷೆಯಾದ ಸಂಸ್ಕೃತವನ್ನು ಕಲಿಯಲು ಅನುವು ಮಾಡಿಕೊಡಲಾಗಿತ್ತು. ಕೇವಲ ಪ್ರೌಢಶಾಲೆಯಲ್ಲಿ ಓದಲು ಆರಂಭಿಸುವ ಸಂಸ್ಕೃತವು ಮಾಡಿಕೊಡಲಾಗಿತ್ತು. ಹಿಂದಿನ ಏಳು ವರ್ಷಗಳಲ್ಲಿ ಓದಿದ ಭಾಷೆಯೊಂದಕ್ಕೆ ಸಮವೆಂದು ಅಳವಡಿಸಿದ್ದರು. ಇದೊಂದು ಅವೈಜ್ಞಾನಿಕ ಶಿಕ್ಷಣ ನೀತಿ ಆಗಿತ್ತು. ಕನ್ನಡಿಗರೂ ಸಹ ಹೆಚ್ಚು ಅಂಕಗಳಿಸುವ ದೃಷ್ಟಿಯಿಂದ ಕನ್ನಡದ ಜೊತೆಗೆ ಸಂಸ್ಕೃತವನ್ನು ಪ್ರಥಮ ಭಾಷೆಯನ್ನಾಗಿ ಕಲಿಯಲು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಸಂಸ್ಕೃತ ಪ್ರಶ್ನೆ ಪತ್ರಿಕೆಯನ್ನು ಕನ್ನಡ ಅಥವಾ ಇಂಗ್ಲೀಷಿನಲ್ಲಿ ಉತ್ತರಿಸುವಂಥದ್ದು. ಹೀಗಾಗಿ ವಿದ್ಯಾರ್ಥಿಗಳು ರ್‍ಯಾಂಕ್ ಗಳಿಸುವಲ್ಲಿ ಹೆಚ್ಚಿನ ಅನುಕೂಲಗಳು ಇದ್ದವು. ಇದೆಲ್ಲದರಿಂದ ಕನ್ನಡಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದಂತೆ ಆಗಿರಲಿಲ್ಲ. ಈ ಅವೈಜ್ಞಾನಿಕ ಭಾಷಾ ಬೋಧನ ಕ್ರಮವನ್ನು ದೇವರಾಜ ಅರಸು ಸರ್ಕಾರ 1979ರ ಅಕ್ಟೋಬರ್‌ನಲ್ಲಿ ಆಜ್ಞೆಯೊಂದರ ಮೂಲಕ ರದ್ದುಪಡಿಸಿತು. ಅಂದರೆ ಸಂಸ್ಕೃತವನ್ನು ಪ್ರಥಮ ಭಾಷೆಗಳ ಪಟ್ಟಿಯಿಂದ ತೆಗೆದುಹಾಕಿ ಅದನ್ನು ಮೂರನೆಯ ಸ್ಥಾನಕ್ಕೆ ಇಳಿಸಲಾಯಿತು. ಸಂಸ್ಕೃತ ಪರವಾದಿಗಳು ಈ ಆಜ್ಞೆಯ ವಿರುದ್ಧ ಪ್ರತಿಭಟಿಸಿದರು. ಈ ಎರಡೂ ಬಣಗಳ ವಾದ ವಿವಾದಗಳು ಸರ್ಕಾರವನ್ನು ಪೇಚಿಗೆ ಸಿಲುಕಿಸಿದವು. ಸಂಸ್ಕೃತಾಭಿಮಾನಿಗಳು, ಪಂಡಿತರು ಸರ್ಕಾರದ ಕ್ರಮವನ್ನು ನ್ಯಾಯಾಲಯಕ್ಕೆ ತೆಗೆದುಕೊಂಡು ಹೋದರು. ವಿಧಾನ ಮಂಡಲದ ಎರಡೂ ಸದನಗಳಲ್ಲೂ ಈ ಕುರಿತು ಚರ್ಚೆ ಆಯಿತು. ತೀರ್ಮಾನವಾಗದೆ ಕೊನೆಗೆ ಭಾಷಾತಜ್ಞರ ಸಮಿತಿಯೊಂದರಿಂದ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವುದು ಸೂಕ್ತವೆಂದು ನಿರ್ಧರಿಸಲಾಯಿತು[33]. ಸರ್ಕಾರವು 1980ರ ಜುಲೈ 5 ರಂದು ಭಾಷಾತಜ್ಞರ ಸಮಿತಿಯ ರಚನೆಯನ್ನು ಕುರಿತು ಆಜ್ಞೆಯೊಂದನ್ನು ಹೊರಡಿಸಿತು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಆಜ್ಞೆಯು ಹೊರಬಿದ್ದಿದ್ದು. ಆರ್. ಗುಂಡೂರಾಯರು ಮುಖ್ಯಮಂತ್ರಿಗಳಾಗಿದ್ದಾಗ. ಇವರು ನೇಮಿಸಿದ್ದ ಸಮಿತಿಯು ವಿ.ಕೃಗೋಕಾಕ್‌ರವರ ಅಧ್ಯಕ್ಷತೆಯಲ್ಲಿ ಸದಸ್ಯರಾಗಿ ಜಿ.ನಾರಾಯಣ, ಎಸ್.ಕೆ.ರಾಮಚಂದ್ರ ರಾವ್, ತ.ಸು.ಶಾಮರಾವ್, ಕೆ.ಕೃಷ್ಣಮೂರ್ತಿ, ಎಚ್.ಪಿ.ಮಲ್ಲೇದೇವರು, ಸಾ.ಮಂಚಯ್ಯ ಅವರು ಇದ್ದರು. ಸರ್ಕಾರವು ಗೋಕಾಕ್ ಅವರ ಅಧ್ಯಕ್ಷ ಸಮಿತಿಗೆ ಸಂಸ್ಕೃತ ಶಾಲಾ ಪಠ್ಯ

ವಸ್ತುವಿನಲ್ಲಿ ಅಭ್ಯಾಸದ ವಿಷಯವಾಗಿ ಉಳಿಯಬೇಕೆ ಉಳಿಯಬೇಕಾದರೆ ಕನ್ನಡಕ್ಕೆ ಪರ್ಯಾಯವಾಗದೆ ಉಳಿಸುವುದು ಹೇಗೆ ತ್ರಿಭಾಷಾ ಸೂತ್ರದಂತೆ ಕನ್ನಡ ಕಡ್ಡಾಯ ಮಾಡಿ ಉಳಿದೆರಡು ಭಾಷೆಗಳ ಆಯ್ಕೆಯ ಸ್ವಾತಂತ್ರ್ಯವನ್ನು ವಿದ್ಯಾರ್ಥಿಗಳಿಗೆ ಬಿಡುವುದು ಸೂಕ್ತವೆ ಎಂಬ ಮೂರು ವಿಷಯಗಳ ಬಗ್ಗೆ ಪರಿಶೀಲನೆ, ಅಧ್ಯಯನ ನಡೆಸಿ ಮೂರು ತಿಂಗಳೊಳಗಾಗಿ ವರದಿ ನೀಡಲು ಸೂಚಿಸಿತ್ತು. ಅದರಂತೆ ಗೋಕಾಕ್ ಸಮಿತಿಯು ಕರ್ನಾಟಕದಾದ್ಯಂತ ಸಂಚರಿಸಿದಾಗ ಹಲವಾರು ಪ್ರತಿಭಟನೆಗಳಾದವು. ಧಾರವಾಡದ ಟ್ರೈನಿಂಗ್ ಕಾಲೇಜಿನ ಹೊರಗೆ ಕಾಯುತ್ತಿದ್ದ ಪ್ರತಿಭಟನಕಾರರು ಸಮಿತಿಗೆ ಮನವಿಗಳೂ ಸಂಗ್ರಹವಾಗದ ರೀತಿಯಲ್ಲಿ ಅಡ್ಡಿಪಡಿಸುತ್ತಿದ್ದರಷ್ಟೇಯಲ್ಲದೆ, ಸಂಸ್ಕೃತ ಪರವಾಗಿ ಈ ಪರಿಶೀಲನಾ ಸಮಿತಿ ಬಂದಿರುವುದೆಂದು ಶಂಕಿಸಿ ಮೊದಲಾದವರು ಗೋಕಾಕರು ಸಭೆ ಸೇರಿದ್ದ ಕೊಠಡಿಗಳಿಗೆ ನುಗ್ಗಿ 'ಗೋಕಾಕ್ ಗೋ ಬ್ಯಾಕ್' ಎಂಬ ಘೋಷಣೆಗಳನ್ನು ಕೂಗಿ ಪ್ರತಿಕ್ರಿಯಿಸಿದರು. ಇವರೊಂದಿಗೆ ಬಸವರಾಜ ಕಟ್ಟಿಮನಿ, ಚನ್ನವೀರ ಕಣವಿ ಕೂಡ ಸೇರಿಕೊಂಡಿದ್ದರು. ತೀವ್ರ ಸ್ವರೂಪದ ಪ್ರತಿಭಟನೆಗಳು ಗೋಕಾಕ್ ಸಮಿತಿಯವರನ್ನು ಬೆಳಗಾಂ ಹಾಗೂ ಬೀಜಾಪುರಗಳಲ್ಲೂ ಸುತ್ತುವರೆದವು. ಇಂಥ ಅನೇಕ ಪ್ರತಿರೋಧಗಳ ನಡವೆಯೂ ಈ ಭಾಷಾ ತಜ್ಞರ ಸಮಿತಿ ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿತು. ಕನ್ನಡ ಪರವಾದಿಗಳು ಗುಮಾನಿ-ಶಂಕೆಗಳಿಂದ ಗಮನಿಸುತ್ತಿದ್ದ ಗೋಕಾಕ್ ವರದಿಯು ಕನ್ನಡಕ್ಕೆ ಮೊದಲ ಸ್ಥಾನವನ್ನು, ಸಂಸ್ಕೃತಕ್ಕೆ ಮೂರನೆಯ ಸ್ಥಾನವನ್ನು ನೀಡಿತು[34]. ಗೋಕಾಕ್ ವರದಿಯು ಪ್ರಕಟವಾದ ಮೇಲೆ ಮುಖ್ಯಮಂತ್ರಿ ಗುಂಡೂರಾಯರು ಅದನ್ನು ಅನುಷ್ಠಾನಗೊಳಿಸುವುದರ ಬಗ್ಗೆ ಚಕಾರವೆತ್ತಲಿಲ್ಲ. ಈ ವರದಿಯನ್ನು ವಿರೋಧಿಸಿ ಅಲ್ಪಸಂಖ್ಯಾತ ಮುಖಂಡರಾದ ಎಫ್.ಎಂ. ಖಾನರ ನೇತೃತ್ವದಲ್ಲಿ ವಿಧಾನಸೌಧದ ಎದುರು ಪ್ರತಿಭಟನೆಗಳು, ಪ್ರದರ್ಶನಗಳು ನಡೆದವು. ಇದಕ್ಕೆ ಸರ್ಕಾರ ಮಣಿಯುವ ಸಂದರ್ಭ ಕಂಡಾಗ ಕನ್ನಡಿಗರು ಉಗ್ರವಾಗಿ ಪ್ರತಿಭಟಿಸಿದರು. ಗೋಕಾಕ್ ವರದಿ ಜಾರಿಗೆ ಒತ್ತಾಯಿಸಿ 1982ರಲ್ಲಿ ಕನ್ನಡ ನಾಡಿನಾದ್ಯಂತ ಚಳುವಳಿ ಪ್ರಾರಂಭಿಸಿದರು. ಈ ಸಂದರ್ಭದಲ್ಲಿ ಚಳುವಳಿಯಲ್ಲಿ ಕಾರ್ಮಿಕರು, ವಿದ್ಯಾರ್ಥಿಗಳು, ಶಿಕ್ಷಕರು, ರೈತರು, ಮಹಿಳೆಯರು, ಕನ್ನಡ ಪರ ಸಂಘಟನೆಗಳು, ಸಂಘ-ಸಂಸ್ಥೆಗಳು, ಪ್ರಗತಿ ಪರ ಚಿಂತಕರು, ಕವಿಗಳು, ಲೇಖಕರು, ಸಕ್ರಿಯವಾಗಿ ಭಾಗವಹಿಸಿದರು. ಹೋರಾಟದ ವಿವಿಧ ರೂಪುರೇಷೆಗಳನ್ನು ರೂಪಿಸಿದರು. ಗೋಕಾಕ್ ಚಳುವಳಿಯು ರಾಜ್ಯದಾದ್ಯಂತ ವ್ಯಾಪಿಸಿತು. ಅದೇ ರೀತಿಯಾಗಿ ಮಂಡ್ಯ ಜಿಲ್ಲೆಯಲ್ಲಿಯೂ ಸಹ ಗೋಕಾಕ್ ವರದಿಯ ಅನುಷ್ಠಾನಕ್ಕಾಗಿ ಚಳುವಳಿಯನ್ನು ಹಮ್ಮಿಕೊಳ್ಳಲಾಯಿತು. ದಿನಾಂಕ 15.02.1982ರಂದು ಮಂಡ್ಯನಗರದಲ್ಲಿ ಹೆದ್ದಾರಿ ಬಂದ್ ಚಳುವಳಿ ನಡೆದು ಇದರಲ್ಲಿ ಪಿ.ಎನ್.ಜವರಪ್ಪಗೌಡ, ಹೆಚ್.ಎಲ್.ಕೇಶವಮೂರ್ತಿ, ಜಿ.ಮಾದೇಗೌಡ, ಎಸ್.ಡಿ.ಜಯರಾಂ ಮುಂತಾದವರನ್ನು ಬಂಧಿಸಲಾಯಿತು. ಈ ಸಂದರ್ಭದಲ್ಲಿ ಶಂಕರಗೌಡ ಶಿಕ್ಷಣ ಕಾಲೇಜಿನ ವಿದ್ಯಾರ್ಥಿಗಳು

ಘೋಷಣೆ ಕೂಗುತ್ತಾ ಬಂಧಿತರಿಗೆ ಬೆಂಬಲ ಸೂಚಿಸಿದ್ದು ಒಂದು ವೈಶಿಷ್ಟ್ಯ. 16.04.1982ರಂದು ಮಂಡ್ಯದ ಸಿಲ್ವರ್ ಜ್ಯೂಬಿಲಿ ಪಾರ್ಕ್‌ನಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಕೆ.ಸಿ.ಚನ್ನಯ್ಯ, ಪಿ.ಎನ್.ಜವರಪ್ಪಗೌಡರ ನೇತೃತ್ವದಲ್ಲಿ ಜಿ.ಟಿ.ವೀರಪ್ಪ, ಹೆಚ್.ಎಸ್.ನರಸಿಂಹಮೂರ್ತಿ, ಎಸ್.ವಿ.ಧರಣೇಂದ್ರಯ್ಯ ಮತ್ತು ಸಚಿವ ಕೆ.ಟಿ.ಬೆಟ್ಟಶೆಟ್ಟಿ, ಜಿ.ಮಾದೇಗೌಡ ಮೊದಲಾದವರು ಗೋಕಾಕ್ ವರದಿ ಅನುಷ್ಠಾನ ಒತ್ತಾಯಿಸಿ ಧರಣಿ ನಡೆಸಿದರು[35]. 18.05.1985ರಂದು ಮಂಡ್ಯದಲ್ಲಿ ಪ್ರಸಿದ್ಧ ಚಿತ್ರ ನಟ ಡಾ. ರಾಜಕುಮಾರ್ ಅವರ ನೇತೃತ್ವದಲ್ಲಿ ಬಹಿರಂಗ ಸಭೆ ನಡೆಯಿತು. ಹಲವು ಚಿತ್ರ ನಟ ನಟಿಯರು ಭಾಗವಹಿಸಿದ್ದರು.

ಗೋಕಾಕ್ ಚಳುವಳಿ ಸರ್ಕಾರದ ಹತೋಟಿ ಮಿರಿ ಬೆಳೆದಿದ್ದರಿಂದ ಮುಖ್ಯಮಂತ್ರಿ ಗುಂಡೂರಾಯರು ಜೂನ್ 4 ರಂದು ಚಳುವಳಿಗಾರರನ್ನು ಮಾತುಕತೆಗೆ ಕರೆದರು. ಕುವೆಂಪು, ಮಾಸ್ತಿ ವೆಂಕಟೇಶ್‌ಅಯ್ಯಂಗಾರ್, ಶಿವರಾಮಕಾರಂತ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ತ.ರಾ.ಸು. ಎಸ್.ಎಲ್.ಭೈರಪ್ಪ, ಕೆ.ವಿಶಂಕರಗೌಡ, ಡಾ.ರಾಜಕುಮಾರ್, ಶ್ರೀರಂಗರಾಜು, ಹಂಪ ನಾಗರಾಜಯ್ಯ, ಹಾ.ಮಾ.ನಾಯಕ, ಪಾಟೀಲ ಪುಟ್ಟಪ್ಪ ಮೊದಲಾದ 40ಕ್ಕೂ ಹೆಚ್ಚಿನ ಗಣ್ಯರನ್ನು ಸೇರಿಸಿಕೊಳ್ಳಲಾಗಿತ್ತು[36]. ಸಭೆಯಲ್ಲಿ ಮುಖ್ಯಮಂತ್ರಿಗಳು ಗೋಕಾಕ್ ವರದಿಯ ಪರಿಷ್ಕೃತ ಆದೇಶವನ್ನು ಹೊರಡಿಸುವ, ಬಂಧಿತ ಚಳುವಳಿಕಾರರನ್ನು ಬಿಡುಗಡೆಗೊಳಿಸುವ ನಿರ್ಣಯಗಳನ್ನು ಪ್ರಕಟಿಸಿದರು. ಆದರೆ ಎಂದಿನಂತೆ ಸರ್ಕಾರವು ತನ್ನ ಮೌನವ್ರತವನ್ನು ಅನುಸರಿಸಿತು. ಇದರಿಂದ ಬೇಸತ್ತ ಕೇಂದ್ರ ಕನ್ನಡ ಕ್ರಿಯಾ ಸಮಿತಿಯು ಜೂನ್ 21 ರಿಂದ ಸರ್ಕಾರದ ವಿಳಂಬ ನೀತಿಯ ವಿರುದ್ಧ ಮತ್ತೆ ಚಳುವಳಿ ಹೂಡಿದಿರಲಿಲ್ಲ. ಹುಬ್ಬಳ್ಳಿಯಲ್ಲಿ ಪಾಟೀಲ ಪುಟ್ಟಪ್ಪ ಧಾರವಾಡದಲ್ಲಿ ಚಂಪಾ, ಎಂ.ಎಂ.ಕಲಬುರ್ಗಿ, ಧಾರವಾಡಕರ, ಬೆಂಗಳೂರಿನಲ್ಲಿ ಜಿ.ಎಸ್.ಶಿವರುದ್ರಪ್ಪ, ಲಂಕೇಶ್, ಬರಗೂರು, ಚಿದಾನಂದಮೂರ್ತಿ ಮೊದಲಾದವರು ಸಾವಿರಾರು ಸಂಖ್ಯೆಗಳಲ್ಲಿ ಸಭೆಸೇರಿ ಕಪ್ಪುಬಟ್ಟೆಯನ್ನು ಕಟ್ಟಿಕೊಂಡು ಮೌನ ಮೆರವಣಿಗೆ ನಡೆಸಿದರು. ಮಂಡ್ಯದಲ್ಲಿಯೂ ಸಹ ಜಿ.ಮಾದೇಗೌಡ, ಕೆ.ವಿ.ಶಂಕರಗೌಡರು ಕಪ್ಪುಬಟ್ಟೆಯನ್ನು ಕಟ್ಟಿಕೊಂಡು ಮೌನ ಮೆರವಣಿಗೆ ನಡೆಸಿದ್ದರು. ಸರ್ಕಾರವು ಪ್ರರಿಸ್ಥಿತಿಗಳನ್ನು ಗಮನಿಸಿ 'ಸರ್ವಸಮ್ಮತ ಭಾಷಾ ಸೂತ್ರ'ವನ್ನು ಪ್ರಕಟಿಸಿತು. ವಿಧಾನಮಂಡಲದಲ್ಲಿ ಒಪ್ಪಿಗೆ ಪಡೆದ ಈ ಸೂತ್ರದ ಪ್ರಕಟಣೆಯಿಂದ ಗೋಕಾಕ್ ಚಳುವಳಿಯು ಅಂತ್ಯಗೊಂಡಿತು. ಈ ರೀತಿಯಾಗಿ ಕನ್ನಡ ನುಡಿಯ ರಕ್ಷಣೆಗಾಗಿ ಜಿ.ಮಾದೇಗೌಡರು ಗೋಕಾಕ್ ಚಳುವಳಿಯ ಅನುಷ್ಠಾನದಲ್ಲಿ ಮಂಡ್ಯ ಜಿಲ್ಲೆಯಲ್ಲಿ ನೇತೃತ್ವ ವಹಿಸಿದ ನಾಯಕರಲ್ಲಿ ಒಬ್ಬರಾಗಿದ್ದರು.

## 2.9 ಗಾಂಧೀಜಿಯ ಪ್ರಭಾವ ಹಾಗೂ ರಚನಾತ್ಮಕ ಕಾರ್ಯಗಳ ಅನುಷ್ಠಾನದಲ್ಲಿ ಜಿ.ಮಾದೇಗೌಡರು

ಸ್ವತಂತ್ರ ಹೋರಾಟದ ಸಂದರ್ಭದಿಂದ ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರ ತತ್ವ ಸಿದ್ದಾಂತಗಳು ದೇಶದಾದ್ಯಂತ ಅನೇಕ ಜನಗಳ ಮೇಲೆ ಪ್ರಭಾವ ಬೀರಿದೆ. ಅಂತಹ ಮಹಾತ್ಮನ ಪ್ರಭಾವಕ್ಕೆ ಒಳಗಾದವರಲ್ಲಿ ಕರ್ನಾಟಕದಲ್ಲಿ ಜಿ.ಮಾದೇಗೌಡರು ಒಬ್ಬರು. ಇವರು ವಿದ್ಯಾರ್ಥಿ ಜೀವನದಿಂದಲೇ ಗಾಂಧೀಜಿಯವರ ತತ್ವ ಮತ್ತು ಆದರ್ಶಗಳನ್ನು ಮೈಗೂಡಿಸಿಕೊಂಡಿರುವುದನ್ನು ಪ್ರಸ್ತುತ ಸಂಶೋಧನಾ ಅಧ್ಯಯನದಿಂದ ಕಾಣಬಹುದಾಗಿದೆ. ಸ್ವತಃ ಜಿ.ಮಾದೇಗೌಡರೇ ಹೇಳಿರುವಂತೆ ಜೀವನದಲ್ಲಿ ಗಾಂಧಿ ತತ್ವಗಳು ನನ್ನ ಮೇಲೆ ಪರಿಣಾಮ ಬೀರಿದ ಕಾರಣ ಸತ್ಯ, ಅಹಿಂಸೆ, ಭ್ರಷ್ಟತೆಯ ವಿರುದ್ದ ಹೋರಾಡುವುದು ಹಳ್ಳಿಗಳಲ್ಲಿ ಏನಾದರೂ ಒಳ್ಳೆ ಕೆಲಸ ಮಾಡಬೇಕು, ಸುಳ್ಳು ಹೇಳಬಾರದು, ಲಂಚ ಸ್ವೀಕರಿಸಬಾರದು ಇಂಥವು ಕಾಲಕ್ರಮೇಣ ಮನಸ್ಸಿನಲ್ಲಿ ಗಟ್ಟಿಯಾಗಿ ಬೇರೂರಿದವು. ಜೊತೆಗೆ ಸ್ವಾತಂತ್ರ್ಯ ಚಳವಳಿಯ ಪ್ರಾರಂಭದಲ್ಲಿ ಗಾಂಧೀಜಿಯವರ ಸಂಪಾದಕತ್ವದ ಹರಿಜನ ಮತ್ತು ಯಂಗ್ ಇಂಡಿಯಾ ಎಂಬ ಎರಡು ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಅದರಲ್ಲಿ ಪ್ರಕಟಗೊಳ್ಳುತ್ತಿದ್ದ ವಿಷಯಗಳನ್ನು ಓದಿ ಚಳವಳಿಗಳಲ್ಲಿ ಭಾಗವಹಿಸುತ್ತಿದ್ದರು. ಅವರ ಪತ್ರಿಕೆಗಳನ್ನು ಓದುತ್ತಾ ಗಾಂಧೀಜಿಯವರ ಸತ್ಯ, ಅಹಿಂಸೆ, ಅಸ್ಪೃಶ್ಯತೆ, ಬಡತನ ಬಗೆಗಿನ ಅವರ ನಿಲುವು, ಬಡತನದ ಬಗೆಗಿನ ಅವರ ಹೇಳಿಕೆಗಳು, ಕ್ವಿಟ್ ಇಂಡಿಯಾ ಚಳವಳಿ, ಗಾಂಧಿಜಿಯವರ ತತ್ವಾದರ್ಶಗಳು ಹಾಗೂ ಕ್ರಿಯಾತ್ಮಕ ಕೆಲಸಗಳು ಗೌಡರ ಮೇಲೆ ಬಾಲ್ಯದಲ್ಲಿಯೇ ಪರಿಣಾಮ ಬೀರಿದವು. ಶಿವಪುರ ಧ್ವಜಸತ್ಯಾಗ್ರಹ ಸಭೆಯಲ್ಲಿ ಸತ್ಯಾಗ್ರಹಿಗಳಿಗೆ ನೀರು ಕೊಡುವ ಕಾಯಕದೊಂದಿಗೆ ಗಾಂಧೀ ತತ್ವಗಳ ಸೇವಾ ಮನೋಭಾವನೆಯನ್ನು ಅಂದೇ ಪ್ರದರ್ಶಿಸಿದರು. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿ ಕರಪತ್ರ ವಿತರಿಸಿದ್ದ ಕ್ರಮೇಣ ಅವರ ಸಂಪೂರ್ಣ ಅನುಯಾಯಿಯಾಗಿ ಅವರಂತೆ ಗೌಡರು ಉತ್ತಮ ಜನೋಪಯುಕ್ತ ಕೆಲಸಗಳನ್ನು ಮಾಡಬೇಕೆನಿಸಿ ಪ್ರಾಮಾಣಿಕವಾಗಿ ಪ್ರಯತ್ನಿಸಿದರು. ಇದರ ಉಪಯುಕ್ತತೆಯನ್ನು ಜನರು ಪ್ರೀತಿ ಮತ್ತು ನಿಷ್ಠೆಯಿಂದ ಪಡೆದುಕೊಳ್ಳಬೇಕು ಎಂದು ತಮ್ಮ ಮನದಾಳದ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ.

ಭಾರತವು ವಿಶ್ವದಲ್ಲಿಯೇ ಬೃಹತ್ ಪ್ರಜಾಪ್ರಭುತ್ವ ವ್ಯವಸ್ಥೆಯನ್ನ ಹೊಂದಿರುವ ರಾಷ್ಟ್ರವಾಗಿದೆ ಪ್ರಜಾಪ್ರಭುತ್ವ ವ್ಯವಸ್ಥೆಯಡಿಯಲ್ಲಿನ ಚುನಾವಣೆಯಲ್ಲಿ ಚುನಾಯಿತರಾಗಿ ಆಯ್ಕೆಯಾಗುವ ಪ್ರಜಾಪ್ರತಿನಿಧಿಗಳು ತಮ್ಮ ವೈಯಕ್ತಿಕ ಜೀವನ ಹಾಗೂ ಸಾರ್ವಜನಿಕ ಅಭಿವೃದ್ಧಿ ಕೆಲಸಗಳಲ್ಲಿ ಮಹಾತ್ಮ ಗಾಂಧೀಜಿಯವರ ತತ್ವಾದರ್ಶನಗಳನ್ನು ಅಳವಡಿಸಿಕೊಳ್ಳಬೇಕು. ಅಸಂಸ್ಕೃತ, ಅನಾಗರಿಕ ಮತ್ತು ಅಪಕ್ವ ರಾಜಕಾರಣಿಗಳಿಂದ

ರಾಜಕೀಯ ಕ್ಷೇತ್ರದಲ್ಲಿ ಮಾನವೀಯ ಮೌಲ್ಯಗಳು ನಶಿಸುತ್ತಿವೆ. ಮಹಾತ್ಮ ಗಾಂಧೀಜಿಯವರ ಆದರ್ಶ, ಸಿದ್ಧಾಂತಗಳಾಗಲೀ, ನಿಷ್ಠೆಯಾಗಲೀ, ಕೆಲವು ನಾಯಕರುಗಳಲ್ಲಿ ಗೋಚರಿಸುತ್ತಿಲ್ಲ. ಇದಕ್ಕೆಲ್ಲಾ ಕಾರಣ ಸಾರ್ವಜನಿಕರ ಶ್ರೇಯೋಭಿವೃದ್ದಿಗೆ ದುಡಿಯುವ ನಿಸ್ವಾರ್ಥ ಜನನಾಯಕರ ಕೊರತೆ. ಇದರಿಂದಾಗಿ ಭಾರತದ ಅಭಿವೃದ್ಧಿಗೆ ಹಿನ್ನೆಡೆಯಾಗಿರುತ್ತಿದೆ. ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಗುರುದೇವರಹಳ್ಳಿಯ ಅತ್ಯಂತ ಸಾಮಾನ್ಯ ಕುಟುಂಬದಲ್ಲಿ ಜನಿಸಿದ ಜಿ.ಮಾದೇಗೌಡರು 1942ರಲ್ಲಿ ಗಾಂಧಿಜಿಯವರು ಕರೆ ನೀಡಿದ "ಬ್ರಿಟಿಷರೇ ಭಾರತದಿಂದ ತೊಲಗಿ" ಚಳವಳಿಯಲ್ಲಿ ಕರಪತ್ರವನ್ನು ಹಂಚುವುದರ[37] ಮೂಲಕ ಗಾಂಧೀಜಿಯವರ ಅನುಯಾಯಿಯಾಗಿ ದೇಶ ಪ್ರೇಮಿಯಾದರು. ನಂತರ ಗಾಂಧೀಜಿಯವರ ಲೇಖನಗಳು, ಭಾಷಣಗಳು ಅವರ ಜೀವನದ ನಡೆ-ನುಡಿಗಳಿಂದ ಪ್ರಭಾವಿತರಾಗಿ, ರಾಜಕೀಯ ಕ್ಷೇತ್ರದಲ್ಲಿ ಹಂತ ಹಂತವಾಗಿ ಬೆಳೆದು ಅವರ 40 ವರ್ಷಗಳ ರಾಜಕೀಯ ಜೀವನದಲ್ಲಿ ನಿಷ್ಕಲ್ಮಶ ಮನೋಭಾವನೆಯಿಂದ ಭ್ರಷ್ಟಾಚಾರದ ಕಡುವೈರಿಯಾಗಿ, ಪ್ರಾಮಾಣಿಕ ಜನಸೇವಾ ನಾಯಕರಾಗಿ ಮಂಡ್ಯ ಜಿಲ್ಲೆಯ ಹಾಗೂ ಕಿರುಗಾವಲು ಕ್ಷೇತ್ರದ ಹಳ್ಳಿಗಳ ಸಮೃದ್ಧ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರಗಳ ಪ್ರಗತಿಗೆ ವೈಯಕ್ತಿಕವಾಗಿ ಕಾರಣರಾಗಿದ್ದಾರೆ. ಸುಸಂಸ್ಕೃತ ಮನೋಭಾವನೆಯ ಜಿ.ಮಾದೇಗೌಡರು ಮಹಾತ್ಮ ಗಾಂಧೀಜಿಯವರ ಸರ್ವೋದಯ ಸಮಾಜದ ಪರಿಕಲ್ಪನೆಯ ಆದರ್ಶ ಧ್ಯೇಯಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡು ಎಲ್ಲಾ ಕ್ಷೇತ್ರಗಳನ್ನೂ ಸಬಲೀಕರಣಗೊಳಿಸಿದ್ದಾರೆ. ಈ ಎಲ್ಲಾ ಅಭಿವೃದ್ಧಿ ಹೊಂದಿರುವ ಕ್ಷೇತ್ರಗಳು ಗಾಂಧೀಜಿಯವರ ತತ್ವಾದರ್ಶಗಳ ಲೇಪನವನ್ನು ಹೊಂದಿವೆ. ಜಿ.ಮಾದೇಗೌಡರು ರೂಪಿಸಿರುವ ಎಲ್ಲಾ ರೈತ ಹೋರಾಟಗಳು ಇಂದಿಗೂ ಅಹಿಂಸಾ ತತ್ವಗಳನ್ನು ಒಳಗೊಂಡಿರುವುದು ವಿಶೇಷವಾಗಿದೆ. ಈ ನಿಟ್ಟಿನಲ್ಲಿ ಇವರು ಗಾಂಧೀಜಿಯವರ ತತ್ವಾದರ್ಶಗಳನ್ನು ಅಳವಡಿಸಿಕೊಂಡು ಸಾಧನೆಗೈದಿರುವುದನ್ನು ಕ್ಷೇತ್ರಾಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಮಹಾತ್ಮ ಗಾಂಧೀಜಿಯವರ ಸರ್ವೋದಯ ತತ್ವದ ಆಶಯಗಳನ್ನು ಅಕ್ಷರಶಃ ಆಚರಣೆಗೆ ತರುವಲ್ಲಿ ಜಿ.ಮಾದೇಗೌಡರು ಅಹೋರಾತ್ರಿ ಶ್ರಮಿಸುತ್ತಿದ್ದಾರೆ. ಸರ್ವರ ಹಿತಕ್ಕಾಗಿ, ಕಲ್ಯಾಣಕ್ಕಾಗಿ ಕೆಳವರ್ಗದವರ ಸಬಲೀಕರಣಕ್ಕಾಗಿ ಮತ್ತು ಮಾನವ ಸಂಪನ್ಮೂಲದ ಪ್ರಗತಿಗಾಗಿ ಹತ್ತು ಹಲವು ಅವಶ್ಯಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದಾರೆ. ಮಹಾತ್ಮ ಗಾಂಧಿಜಿಯವರು ಶ್ರಮಕ್ಕೆ ಗೌರವ ನೀಡುತ್ತಿದ್ದರು. ಇದನ್ನು ಅಳವಡಿಸಿಕೊಂಡು ಆಚರಣೆಗೆ ತಂದ ಗುರುದೇವರಹಳ್ಳಿ ಮಾದೇಗೌಡರು ಶ್ರಮ ಜೀವಿಯಾದ ನೇಗಿಲ ಯೋಗಿಯ ಸಬಲೀಕರಣಕ್ಕಾಗಿ ಅವಿರತ ದುಡಿಯುತ್ತಿದ್ದಾರೆ. ರೈತರಿಗೋಸ್ಕರ ಏತ ನೀರಾವರಿ ಯೋಜನೆ, ಹೊಸ ಕಾಲುವೆಗಳ ನಿರ್ಮಾಣ, ರೈತರ

ಬೆಳಗಳಿಗೆ ಉತ್ತಮವಾದ ಬೆಲೆ, ರೈತರಿಗೆ ಕಡಿಮೆ ದರದಲ್ಲಿ ಆರ್ಥಿಕ ನೆರವು ನೀಡಲು ರೈತರ ವ್ಯವಸಾಯೋತ್ಪನ್ನ ಸಹಕಾರ ಸಂಘಗಳ ಸ್ಥಾಪನೆ, ಭಾರತಿ ಸಹಕಾರ ಸಂಘ, ವಿವಿಧ ಬ್ಯಾಂಕ್‌ಗಳ ಸ್ಥಾಪನೆಯಂತಹ[38] ರೈತ ಪ್ರಗತಿ ಕಾರ್ಯಕ್ರಮಗಳನ್ನು ಜಾರಿಗೆ ತಂದು ರೈತಾಪಿ ವರ್ಗವನ್ನು ಸಬಲೀಕರಣಗೊಳಿಸುತ್ತಾ ಹಲವು ಸಾಮಾಜಿಕ ಸಮಸ್ಯೆಗಳಿಗೆ ನಾಂದಿ ಹಾಡಿದ್ದಾರೆ. ಗಾಂಧೀಜಿಯವರ ಕನಸಿನ ಬಲಿಷ್ಠವಾದ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನು ಸಾಧ್ಯವಾದಷ್ಟು ಆಚರಣೆಗೆ ತಂದಿದ್ದಾರೆ.

ಸಮಾಜದಲ್ಲಿ ಆರ್ಥಿಕ ಸೌಲಭ್ಯಗಳು ಸಮಾನವಾಗಿ ಹಂಚಿಕೆಯಾಗಬೇಕು. ಸಂಪತ್ತಿನ ಕೇಂದ್ರೀಕರಣವಾಗಬಾರದು ಎಂಬ ಗಾಂಧೀಜಿಯವರ ಸಂದೇಶದಂತೆ ವರ್ಗಭೇದವನ್ನು ಕಡಿಮೆ ಮಾಡುವ ಸದುದ್ದೇಶದಿಂದ ರೈತರ, ಶೋಷಿತರ ಮತ್ತು ಹಿಂದುಳಿದ ವರ್ಗದವರನ್ನು ಆರ್ಥಿಕವಾಗಿ ಮೇಲೆತ್ತಲು ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯನ್ನು ಭಾರತೀನಗರದಲ್ಲಿ ಸ್ಥಾಪಿಸಿ ರೈತರ, ಕಾರ್ಮಿಕರ, ಮಹಿಳೆಯರ ಹಾಗೂ ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದ್ದಾರೆ.

ಗಾಂಧೀಜಿಯವರ ಪ್ರಧಾನ ತತ್ವಾದರ್ಶಗಳಾದ ಸತ್ಯ ಮತ್ತು ಅಹಿಂಸೆ ಜಿ.ಮಾದೇಗೌಡರ ಸಾಧನೆಗಳ ಆಧಾರಸ್ಥಂಭವಾಗಿವೆ. ವರುಣಾ ನಾಲಾ ವಿರೋಧಿ ಚಳವಳಿಯ ಸಂಘಟನೆಯ ಸಂಚಾಲಕರಾಗಿ ಸಾರ್ವಜನಿಕ ಚಳವಳಿಗೆ ಪ್ರವೇಶ ಪಡೆದಾಗಿನಿಂದಲೂ ಸತ್ಯ ಮತ್ತು ಅಹಿಂಸೆಯನ್ನು ಚಾಚೂ ತಪ್ಪದೇ ಇಂದಿನವರೆಗೂ ಅಳವಡಿಸಿಕೊಂಡು ಆಚರಿಸುತ್ತಿದ್ದಾರೆ. ಗುರುದೇವರಹಳ್ಳಿ ಮಾದೇಗೌಡರು ಸಂಘಟಿಸಿರುವ ಕಾವೇರಿ ನದಿ ನೀರಿನ ಹೋರಾಟವೂ ಸೇರಿದಂತೆ ರೈತರ ಹಲವು ಉಗ್ರ ಹೋರಾಟಗಳಲ್ಲಿ ಯಾವುದೇ ಘರ್ಷಣೆ, ಸಾವು–ನೋವು, ಸರ್ಕಾರಿ ಹಾಗೂ ಖಾಸಗಿ ಆಸ್ತಿ–ಪಾಸ್ತಿಗಳಿಗೆ ನಷ್ಟ ಉಂಟಾಗದಂತೆ ಗಾಂಧೀಜಿಯವರ ಅಹಿಂಸಾ ತತ್ವದಡಿಯಲ್ಲಿ ಚಳವಳಿಗಾರರನ್ನು ಸಂಘಟಿಸಿ, ಮಾರ್ಗದರ್ಶನ ನೀಡಿ ಎಚ್ಚರಿಕೆಯಿಂದ ನಾಯಕತ್ವವನ್ನು ನಿರ್ವಹಿಸಿದ್ದಾರೆ. ಎಲ್ಲಾ ಹೋರಾಟ ಹಾಗೂ ಸಾಧನೆಗಳಲ್ಲಿ ನೈತಿಕತೆಗೆ ಆದ್ಯತೆ ನೀಡಿರುವುದು ಮಹತ್ವದ್ದಾಗಿದೆ. ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗೆ ಶೀಲಯುತವಾದ ಶಿಕ್ಷಣವೇ ಪರಿಹಾರ ಎಂಬುದು ಗಾಂಧೀಜಿಯವರ ಅಭಿಪ್ರಾಯ. ವೃತ್ತಿ ಶಿಕ್ಷಣ, ಸಾಂಪ್ರದಾಯಿಕ ಶಿಕ್ಷಣ ಹಾಗೂ ಔಪಚಾರಿಕ ಶಿಕ್ಷಣಕ್ರಮಗಳು ಸಮಾಜದ ಅಭಿವೃದ್ಧಿಯ ಪ್ರಬಲ ಸಾಧನಗಳು ಎಂದು ಪ್ರಬಲವಾಗಿ ಪ್ರತಿಪಾದಿಸಿದ ಮಹಾತ್ಮ ಗಾಂಧೀಜಿಯವರ ತತ್ವವನ್ನು ಜಿ.ಮಾದೇಗೌಡರು ಅಕ್ಷರಶಃ ಆಚರಣೆಗೆ ತಂದಿದ್ದಾರೆ.

ಸುತ್ತಮುತ್ತಲ ಹಳ್ಳಿಯ ಜನರ ಬದುಕನ್ನು ಜಿ.ಮಾದೇಗೌಡರು ಹತ್ತಿರದಿಂದ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಗಾಂಧೀಜಿಯವರ ಗ್ರಾಮೋದ್ಧಾರ ಸಿದ್ಧಾಂತಗಳು ಗೌಡರ ಮನಸ್ಸನ್ನು ಪ್ರಭಾವಿಸಿವೆ. ಹಳ್ಳಿ ಮಕ್ಕಳ ವಿದ್ಯಾಭ್ಯಾಸದ ಅನಿವಾರ್ಯತೆಯನ್ನು

ತಮ್ಮಲ್ಲೇ ಚಿಂತಿಸಿದರು. ಗ್ರಾಮೀಣ ಮಕ್ಕಳಿಗೆ ಶಿಕ್ಷಣ ಜ್ಞಾನ ಸುಲಭ ರೀತಿಯಲ್ಲಿ ಮತ್ತು ಅತ್ಯಂತ ಕಡಿಮೆ ಖರ್ಚಿನಲ್ಲಿ ಸಿಗಬೇಕೆಂದು ಬಹುವಾಗಿ ಶ್ರಮಿಸಿದ್ದಾರೆ. ಈ ನಿಟ್ಟಿನಲ್ಲಿ ಕಾಳಮುದ್ದನದೊಡ್ಡಿಯಲ್ಲಿ ಭಾರತೀ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿ ಶಿಕ್ಷಣದಲ್ಲಿ ಹಿಂದುಳಿದ ಮಂಡ್ಯ ಜಿಲ್ಲೆಯ ಶೈಕ್ಷಣಿಕ ಕ್ಷೇತ್ರದ ಪ್ರಗತಿಗಾಗಿ ಅವಿರತ ದುಡಿಯುತ್ತಿದ್ದಾರೆ. ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಆರ್ಥಿಕ-ಸಹಾಯದಿಂದ ದೀನ-ದಲಿತರ ಮಕ್ಕಳಿಗೆ ಉಚಿತವಾಗಿ ಶಿಕ್ಷಣ, ಊಟ, ವಸತಿ, ಸೌಕರ್ಯಗಳನ್ನು ನೀಡಬೇಕೆಂಬ ಹಂಬಲವನ್ನು ಸಾಕಾರಗೊಳಿಸಿದ್ದಾರೆ. ಪೂರ್ವ ಪ್ರಾಥಮಿಕ ತರಗತಿಯಿಂದ ತಾಂತ್ರಿಕ ಶಿಕ್ಷಣದವರೆಗೂ ಅನೇಕ ವೈವಿಧ್ಯಮಯ ಕೋರ್ಸ್‌ಗಳನ್ನು ಪ್ರಾರಂಭಿಸಿ ಹಳ್ಳಿಯ ಮಕ್ಕಳಿಗೆ ಶೈಕ್ಷಣಿಕ ಸೌಲಭ್ಯ ಒದಗಿಸಿದ್ದಾರೆ. ಒಂದೇ ಆವರಣದಲ್ಲಿ ಎಲ್ಲಾ ಕೋರ್ಸ್‌ಗಳನ್ನು ಪ್ರಾರಂಭಿಸಿ ಶಿಕ್ಷಣ ನೀಡುತ್ತಿರುವ ಭಾರತೀ ಶಿಕ್ಷಣ ಸಂಸ್ಥೆಯು ಮಾನಸ ಗಂಗೋತ್ರಿ ಎಂಬ ಕೀರ್ತಿಗೆ ಪಾತ್ರವಾಗಿದೆ. ಇದಕ್ಕೆಲ್ಲಾ ಗುರುದೇವರಹಳ್ಳಿ ಮಾದೇಗೌಡರ ಪರಿಶ್ರಮವೇ ಕಾರಣ. ಭಾರತೀ ಶಿಕ್ಷಣ ಸಂಸ್ಥೆಯಿಂದ ಶಿಕ್ಷಣವನ್ನು ಪಡೆದ ಹಲವು ವಿದ್ಯಾರ್ಥಿಗಳು ವೈಯಕ್ತಿಕ, ಕೌಟುಂಬಿಕ ಸಮುದಾಯ ಮತ್ತು ಸಮಾಜದ ಅಭಿವೃದ್ಧಿಗೆ ಪೂರಕವಾಗಿ ಶ್ರಮಿಸುತ್ತಿದಾರೆ. ಆ ಮೂಲಕ ಭಾಗಶಃವಾದರೂ ಗಾಂಧೀಜಿಯವರ ಗ್ರಾಮ ಸ್ವರಾಜ್ಯ ಕಲ್ಪನೆಯನ್ನು ಸಾಕಾರಗೊಳಿಸಿದ ಕೀರ್ತಿ ಜಿ.ಮಾದೇಗೌಡರಿಗೆ ಸಲ್ಲುತ್ತದೆ.

ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗೆ ಕಬ್ಬು ಸಾಗಿಸುವ ರೈತರು, ಕಾರ್ಮಿಕರು ಹಾಗೂ ನಾಗರೀಕರು ಬಿಡುವಿನ ವೇಳೆಯಲ್ಲಿ ಯಾವುದೇ ತರಹದ ಹಲವಾರು ದುಶ್ಚಟಗಳಿಗೆ ಬಲಿಯಾಗಬಾರದು. ಅವರು ತಮ್ಮ ಬಿಡುವಿನ ಸಮಯವನ್ನು ದೇವಾಲಯದಲ್ಲಿ ಆಧ್ಯಾತ್ಮಿಕವಾಗಿ ಕಳೆಯಬೇಕೆಂಬುದು ಜಿ.ಮಾದೇಗೌಡರ ಆಶಯ ವಾಗಿತ್ತು. ಅದರಂತೆ ಆತ್ಮಲಿಂಗೇಶ್ವರ ದೇವಸ್ಥಾನವನ್ನು ಕಾಳಮುದ್ದನದೊಡ್ಡಿಯ ಸಕ್ಕರೆ ಕಾರ್ಖಾನೆಯ ಪಕ್ಕದಲ್ಲಿ ಪ್ರಾರಂಭಿಸಬೇಕೆಂಬ ಯೋಜನೆಯು ಗೌಡರದಾಗಿತ್ತು ಸ್ಥಳಾವಕಾಶದ ಅಲಭ್ಯತೆಯಿಂದಾಗಿ ಎರಡು ಕಿ.ಮೀ. ದೂರದ ಹನುಮಂತನಗರದಲ್ಲಿ ದೇವಾಲಯವನ್ನು ಪ್ರತಿಸ್ಥಾಪನೆ ಮಾಡಲಾಯಿತು[39]. ಕಾಳಮುದ್ದನದೊಡ್ಡಿಯಲ್ಲಿ ಸ್ಥಾಪನೆಯಾಗಬೇಕಾದ ದೇವಾಲಯ ಕೊರತೆಯನ್ನು ನೀಗಿಸುವ ಸಲುವಾಗಿ ಭಾರತೀ ಶಿಕ್ಷಣ ಸಂಸ್ಥೆಯ ಆವರಣದಲ್ಲಿ ಸಕ್ಕರೆ ಕಾರ್ಖಾನೆಗೆ ಹತ್ತಿರವಾಗುವಂತೆ ಗಾಂಧೀ ಭವನವನ್ನು ಸ್ಥಾಪಿಸಿದ್ದಾರೆ. ಗಾಂಧೀಜಿಯವರ ಜೀವನ ಮತ್ತು ತತ್ವಗಳನ್ನು ಪ್ರದರ್ಶಿಸುವ ಅಪರೂಪದ ಛಾಯಾಚಿತ್ರಗಳು, ಗಾಂಧೀಜಿಯವರ ಜೀವನ ವಿಧಾನವನ್ನು ಒಳಗೊಂಡ ಸಹಸ್ರಾರು ಗ್ರಂಥಗಳನ್ನು ಸಂಗ್ರಹಿಸಿ ಸಮಾಜದ ಎಲ್ಲಾ ವರ್ಗದವರಿಗೆ ವಿಶೇಷವಾಗಿ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ಗಾಂಧೀಜಿಯರನ್ನು ಹತ್ತಿರವಾಗಿಸಿದ್ದಾರೆ.

ಈ ಕಾಲೇಜಿನ ಆವರಣದಲ್ಲಿ ಸ್ಥಾಪಿಸಲಾಗಿರುವ ಗಾಂಧೀಭವನದ ಬಗ್ಗೆ ಸಾರ್ವಜನಿಕರಿಂದ ಮತ್ತು ವಿದ್ಯಾರ್ಥಿಗಳಿಂದ ಉತ್ತಮವಾದ ಪ್ರತಿಕ್ರಿಯೆ ವ್ಯಕ್ತವಾದ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯ ಕೇಂದ್ರ ಸ್ಥಾನದಲ್ಲಿ ಸುಸಜ್ಜಿತವಾದ ಮತ್ತೊಂದು ಗಾಂಧೀಭವನವನ್ನು ನಿರ್ಮಿಸಬೇಕೆಂಬ ಜಿ.ಮಾದೇಗೌಡರ ದೂರದರ್ಶಿತ್ವದ ಪರಿಣಾಮವಾಗಿ 'ಗಾಂಧೀ ಪ್ರತಿಷ್ಠಾನ'ವನ್ನು ಆರಂಭಿಸಿದರು[40]. ಸಂಸ್ಥಾಪಕ ಅಧ್ಯಕ್ಷರಾದ ಜಿ.ಮಾದೇಗೌಡರು ಬಹಳ ಶ್ರಮವಹಿಸಿ ಮಾದರಿ ಹಾಗೂ ಸುಂದರವಾದ ಗಾಂಧೀಭವನವನ್ನು ನಿರ್ಮಿಸಿ ಲೋಕಾರ್ಪಣೆ ಮಾಡಿದರು. ಸ್ವತಃ ಗಾಂಧೀವಾದಿಯಾದ ಜಿ.ಮಾದೇಗೌಡರ ಕಲ್ಪನೆಗೆ ಮಂಡ್ಯದಲ್ಲಿ ಸ್ಥಾಪಿಸಿರುವ ಗಾಂಧೀಭವನದಲ್ಲಿ ಜೀವಂತಿಕೆ ನೀಡಲಾಗಿದೆ. ವರ್ಷದಿಂದ ವರ್ಷಕ್ಕೆ ವಿಕಾಸಹೊಂದುತ್ತಾ ಸದೃಢತೆಯ ಸಂಕೇತವಾಗುತ್ತಿದೆ. ಗಾಂಧೀಜಿಯವರ ಜೀವನ ಮತ್ತು ತತ್ವಗಳಾಧಾರಿತ ಪುಸ್ತಕಗಳನ್ನು ಸಂಗ್ರಹಿಸಿ ಗ್ರಂಥಾಲಯದ ಮುಖಾಂತರ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ವಿತರಿಸಲಾಗುತ್ತಿದೆ. ಗುಡಿ ಕೈಗಾರಿಕೆಗೆ ಉತ್ತೇಜನ ನೀಡುವ ನಿಟ್ಟಿನಲ್ಲಿ ಮಹಿಳೆಯರಿಗೆ ಹೋಲಿಗೆ ತರಬೇತಿ, ಅಗರಬತ್ತಿ ಉತ್ಪಾದನೆ ತರಬೇತಿ, ಮೇಣದ ಬತ್ತಿ ತಯಾರಿಕಾ ತರಬೇತಿ, ಸೀಮೆಸುಣ್ಣ ಮತ್ತು ಪಿನಾಯಿಲ್‌ನಂತ ಗೃಹ ಬಳಕೆಯ ವಸ್ತುಗಳ ತಯಾರಿಕಾ ತರಬೇತಿಯನ್ನು ಗಾಂಧಿಭವನದಲ್ಲಿ ಏರ್ಪಡಿಸಿ ಮಹಿಳೆಯರು ಹಾಗೂ ನಿರ್ಗತಿಕರ ಬಾಳಿಗೆ ಬೆಳಕು ನೀಡಿದ್ದಾರೆ.

ಗಾಂಧೀಭವನದಲ್ಲಿ ತೆರೆಯಲಾಗಿರುವ ಗ್ರಂಥಾಲಯದಲ್ಲಿ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ತ್ರೈಮಾಸಿಕ ಪತ್ರಿಕೆ ಹಾಗೂ ಇತರೆ ಪುಸ್ತಕಗಳನ್ನು ಓದಲು ಅನುಕೂಲವಾಗುವಂತೆ ಪರಾಮರ್ಶನ ಕೇಂದ್ರವನ್ನು ತೆರೆದು ಗಾಂಧೀಜಿಯವರ ತತ್ವಾದರ್ಶಗಳನ್ನು ಸಾಮಾನ್ಯ ಜನತೆಗೆ ತಲುಪಿಸುತ್ತಿದ್ದಾರೆ. ಗಾಂಧೀ ಭವನದ ಒಳ ಆವರಣವು ಗಾಂಧೀಜಿಯವರ ಸ್ವಾತಂತ್ರ್ಯ ಹೋರಾಟದ ಕ್ಷಣಗಳು ಅವರ ಜೀವನ ಮತ್ತು ತತ್ವಾದರ್ಶಗಳನ್ನು ಒಳಗೊಂಡ ಅಪರೂಪದ ಛಾಯಾ ಚಿತ್ರಗಳಿಂದ ಕಂಗೊಳಿಸುತ್ತಿದೆ. ಪ್ರತಿ ಹಳ್ಳಿಗೂ ಗಾಂಧಿ ತತ್ವಾದರ್ಶಗಳನ್ನು ಪ್ರಸರಿಸುವ ಸದುದ್ದೇಶದಿಂದ ಗಾಂಧೀಜಿಯವರ ಜೀವನ ಚರಿತ್ರೆಯ ಕಿರುಚಿತ್ರವನ್ನು ಸಂಚಾರಿವಾಹನದ ಮೂಲಕ ಗಾಂಧೀಭವನದ ಸಹಯೋಗದಲ್ಲಿ ಪ್ರಸರಿಸಲಾಗುತ್ತಿದೆ. ರಾಷ್ಟ್ರೀಯ ಸೇವಾ ಯೋಜನೆಯ ವಾರ್ಷಿಕ ಶಿಬಿರಗಳಲ್ಲಿ, ಶಾಲಾ ಕಾಲೇಜುಗಳಲ್ಲಿ, ಹಬ್ಬ ಹರಿದಿನಗಳಲ್ಲಿ ವಿಶೇಷ ಜಾತ್ರೆಗಳಲ್ಲಿ ಗ್ರಾಮಸ್ಥರೇ ಸ್ವಯಂ ಪ್ರೇರಣೆಯಿಂದ ಸಂಚಾರಿ ವಾಹನವನ್ನು ಆಹ್ವಾನಿಸಿ ಗಾಂಧೀಜಿಯವರ ಸಾಕ್ಷ್ಯ ಚಿತ್ರವನ್ನು ವೀಕ್ಷಿಸಿ ಅವರ ತತ್ವಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಜಿ.ಮಾದೇಗೌಡರ ಗಾಂಧೀಭವನದ ಸ್ಥಾಪನೆಯ ಆರಂಭಿಕ ಕಲ್ಪನೆಗೆ ಪ್ರಸ್ತುತ ಜಿಲ್ಲೆಯಾದ್ಯಂತ ಕಳೆ ಬಂದಿದೆ ಗಾಂಧೀಜಿಯವರ ಪ್ರತಿರೂಪದಂತೆ ಕಾಣುವ ಗುರುದೇವರಹಳ್ಳಿ ಮಾದೇಗೌಡರು ಸದಾ ಶ್ವೇತಧಾರಿಗಳಾಗಿ,

ಗಾಂಧೀತತ್ವಗಳನ್ನು ಸ್ವತಃ ಮೈಗೂಡಿಸಿಕೊಂಡು ಆಚರಣೆಗೆ ತರುತ್ತಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿ ಗಾಂಧಿಗ್ರಾಮವೊಂದನ್ನು ಸ್ಥಾಪಿಸಬೇಕೆಂಬ ಮಹತಾತ್ವಕಾಂಕ್ಷೆಯ ಯೋಜನೆಯ ಜಾರಿಗಾಗಿ ಅವಶ್ಯಕವಿರುವ 50 ಎಕರೆ ಜಾಗಕ್ಕೆ ಸರಕಾರದ ಜೊತೆ ಇಂದಿಗೂ ಆಡಳಿತಾತ್ಮಕ ಹೋರಾಟ ನಡೆಸುತ್ತಿದ್ದಾರೆ[41]. ಗಾಂಧೀಜಿಯವರ ಸರ್ವೋದಯ ಪರಿಕಲ್ಪನೆಯಂತೆ ಇಡೀ ಸಮುದಾಯವು ಸರ್ವಾಂಗೀಣ ಅಭಿವೃದ್ಧಿ ಹೊಂದಲೇಬೇಕೆಂಬ ಹಟಕ್ಕೆ ಬಿದ್ದವರಂತೆ ಗರುದೇವರಹಳ್ಳಿ ಮಾದೇಗೌಡರು ಗಾಂಧೀಜಿಯವರ ತತ್ವಗಳ ಅನುಷ್ಠಾನಕ್ಕೆ ಹಗಲಿರುಳು ಶ್ರಮಿಸುತ್ತಿದ್ದಾರೆ. ಹಾಗೂ ಸಂಘಟಿಸುತ್ತಿದ್ದಾರೆ.

ಹೀಗೆ ಜಿ.ಮಾದೇಗೌಡರಿಗೆ ಗಾಂಧಿಜಿಯವರ ಪ್ರಭಾವ ಅಲ್ಲದೆ ಇತರ ನಾಯಕರ ಪ್ರಭಾವಕ್ಕೂ ಒಳಗಾಗಿದ್ದರೆ. ಅವರುಗಳೆಂದರೆ, ನೆಹರು, ಲಾಲಾಬಹುದ್ದೂರ್‌ಶಾಸ್ತ್ರಿ, ಕೆ.ಟಿ.ಭಾಷ್ಯಂ, ಹನುಮಂತಯ್ಯ, ನಿಜಲಿಂಗಪ್ಪ ಇವರುಗಳ ಕಾರ್ಯಕ್ರಮಗಳು ಜಿ.ಮಾದೇಗೌಡರು ಬದುಕಿನಲ್ಲಿ ಸ್ವಲ್ಪಮಟ್ಟಿಕಾದರೂ ಚಿಂತನೆ ಹಾಗೂ ಹೋರಾಟ ನಡೆಸುವುದಕ್ಕೆ ಆದರ್ಶ ವ್ಯಕ್ತಿಗಳಾಗಿ ಪ್ರಭಾವ ಬೀರಿದ್ದಾರೆ ಎನ್ನಬಹುದಾಗಿದೆ. ಇವರ ಜೊತೆಗೆ ಸಾಹುಕಾರ್‌ಚನ್ನಯ್ಯನವರು ಮದ್ದೂರಿನ ಎಚ್.ಕೆ.ವೀರಣ್ಣಗೌಡ, ಬಂದೀಗೌಡ, ಪಿ.ಎನ್.ಜವರಪ್ಪಗೌಡ ಸಹ ಕಾರಣರಾಗಿದ್ದಾರೆ[42]. ಈ ಎಲ್ಲಾ ವ್ಯಕ್ತಿಗಳು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಆಯಾ ಆಯಾ ಕ್ಷೇತ್ರದಲ್ಲಿ ಜನಪರ ಕಾರ್ಯಗಳನ್ನು ಮಾಡಿ ಜನ ನಾಯಕರಾಗಿ ಶ್ರಮಿಸಿದ್ದಾರೆ. ಜಿ.ಮಾದೇಗೌಡರ ವ್ಯಕ್ತಿತ್ವ ಮತ್ತು ಸಾಧನೆಗಳನ್ನು ಪರಿಗಣಿಸಿ 2013ರ ಘಟಿಕೋತ್ಸವದಲ್ಲಿ ಭಾರತದಲ್ಲಿಯೇ ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳಲ್ಲೊಂದಾದ ಮೈಸೂರು ವಿಶ್ವವಿದ್ಯಾನಿಲಯವು ಗೌರವ ಡಾಕ್ಟರೇಟ್ ಪದವಿ ನೀಡಿದೆ. ಸಾಕಷ್ಟು ಸನ್ಮಾನ–ಸಮಾರಂಭಗಳನ್ನು ಸ್ವತಃ ಜಿ.ಮಾದೇಗೌಡರೇ ತಿರಸ್ಕರಿಸಿರುವುದು ವ್ಯಕ್ತಿ ವೈಭವೀಕರಣವನ್ನು ಒಪ್ಪದ ಮನಸ್ಥಿತಿಯ ಪ್ರತೀಕವಾಗಿದೆ. ಜಿ.ಮಾದೇಗೌಡರು ತಮ್ಮ ವಿದ್ಯಾರ್ಥಿದೆಸೆಯಿಂದಲೇ ಗಾಂಧೀಜಿಯವರ ಆಲೋಚನೆ, ಆಚರಣೆ, ನಂಬಿಕೆ, ಕ್ರಿಯೆಗಳನ್ನು ಅವರೆ ಹೊರಡಿಸಿದ್ದ ಪತ್ರಿಕೆಗಳಲ್ಲಿ ಓದಿ ಅರಿಯುತ್ತಿದ್ದರು. ಅಂತೆಯೇ ಗಾಂಧಿಜಿಯವರ ಈ ದೃಷ್ಟಿಕೋನಗಳು ತೋರಿಕೆಯ ಅಂಶಗಳಾಗಿರದೇ ಇವು ದಿನನಿತ್ಯದ ಬದುಕಿನ ಮಾರ್ಗಗಳಾಗಿದ್ದವು. ಗಾಂಧೀಜಿಯವರಿಗೆ ಸಾಮಾನ್ಯ ಜನರ ಹೋರಾಟದ ಸಾಮರ್ಥ್ಯದಲ್ಲಿ ಅಪಾರವಾದ ವಿಶ್ವಾಸವಿತ್ತು ಅಂತೆಯೇ ಜಿ.ಮಾದೇಗೌಡರು ತಮ್ಮ ವಿದ್ಯಾರ್ಥಿ ಜೀವನದಲ್ಲೆ ಗಾಂಧಿಜೀಯವರ ತತ್ವಾದರ್ಶಗಳನ್ನು ಕ್ರೂಢೀಕರಿಸಿ ಹೇಳಿದ ತತ್ವವೆಂದರೆ, ನನ್ನಲಿವೇ ಎಂದು ಹೇಳಿಕೊಳ್ಳಬಹುದಾದ ಒಳ್ಳೆಯ ಗುಣಗಳು ಎಂದರೆ ಸತ್ಯ ಮತ್ತು ಅಹಿಂಸೆ ಮಾತ್ರ, ನನ್ನಲ್ಲಿ ಯಾವ ಅತಿಮಾನುಷಶಕ್ತಿಗಳೂ ಇಲ್ಲ. ಅವು ನನಗೆ ಬೇಡವೇ ಬೇಡ ಎಂದಿರುತ್ತಾರೆ.[43] ಅಂದರೆ ಜಿ.ಮಾದೇಗೌಡರು ತಮ್ಮ ರಾಜಕೀಯ ನಾಯಕತ್ವದ ವೃತ್ತಿ ಜೀವನದಲ್ಲಿ ಗಾಂಧೀಜಿ

ಸ್ಥಾಪಿತ ಮಾರ್ಗ ಅನುಸರಿಸುತ್ತಾ ತಮ್ಮದೇ ಸ್ವರೂಪದ ರಾಜಕೀಯ ಜೀವನ ಪ್ರಯೋಗಕ್ಕೂ ಸಿದ್ಧತೆಗಳನ್ನು ನಡೆಸಲು ಮುಂದಾಗಿರುವುದು ಈ ಕೆಳಗಿನಂತೆ ಕಂಡುಬರುತ್ತದೆ.

ಜಿ.ಮಾದೇಗೌಡರು ಗಾಂಧೀಜಿಯವರ ಕಲ್ಪನೆಯಂತೆ ಕರ್ನಾಟಕ ರಾಜ್ಯದ ರಾಜಕೀಯ ಶಕ್ತಿ ಕೇಂದ್ರವಾದ ವಿಧಾನಸಭೆಯ ಕೆಳಮನೆ ಜನಪ್ರತಿನಿಧಿಗಳ ಶಾಸನಸಭೆಯಲ್ಲಿ ಎತ್ತಿರುವ ಪ್ರಶ್ನೆಗಳು, ಕೇಳಿರುವ ಮಾಹಿತಿಗಳು ಜನಪರವಾಗಿದ್ದು, ರಾಜ್ಯದ ಅಭಿವೃದ್ಧಿ ಪರವಾಗಿ ನೀಡಿರುವ ಸಲಹೆಗಳನ್ನು ನಾವು ಕಂಡುಕೊಳ್ಳಬಹುದು. ಅಲ್ಲದೆ ತನ್ನ ಸ್ಥಳೀಯ ಕ್ಷೇತ್ರಾಭಿವೃದ್ಧಿಯ ಬಗೆಗೆ ತಳೆದ ಧೋರಣೆಗಳನ್ನು ನಾವು ಮನಗಾಣಬಹುದು. ಜಿ.ಮಾದೇಗೌಡರು ವಿಧಾನಸಭಾ ಸದಸ್ಯರಾಗಿ ಅವರು ಶಾಸನ ಸಭೆಯಲ್ಲಿ ಸಾರ್ವಜನಿಕರ ಪರವಾಗಿ ಎತ್ತಿದ ಪ್ರಶ್ನೆಗಳೆಂದರೆ ಸಹಕಾರಿ ಸಂಘಗಳ ಅಗತ್ಯ. ದಿನನಿತ್ಯದ ವಸ್ತುಗಳಲ್ಲಿ ಒಂದಾದ ಸಕ್ಕರೆಯನ್ನು ಸಹಕಾರಿ ಸಂಘಗಳ ಮುಖಾಂತರ ಸರಿಯಾಗಿ ತಲುಪಿಸುತ್ತಿಲ್ಲವೆಂದು 1964 ಜುಲೈ 10 ರಂದು ಮಾನ್ಯ ನಾಗರೀಕ ಆಹಾರ ಪೂರೈಕೆ ಸಚಿವರಾದ ಬಿ.ಡಿ.ಜತ್ತಿರನ್ನು ಪ್ರಶ್ನಿಸಿರುತ್ತಾರೆ. ಅಂತೆಯೇ ಮಂಡ್ಯ ಲೋಕಸಭೆಯ ಚುನಾವಣೆಯಲ್ಲಿ ಸರ್ಕಾರಿ ಅಧಿಕಾರಿಗಳ ನೇರ ಹಸ್ತಕ್ಷೇಪ ಭಾಗವಹಿಸುವಿಕೆ ಬಗ್ಗೆ ದೂರು ನೀಡಿಕೆ. ಮಂಡ್ಯ ಜಿಲ್ಲಾ ರೈತ ಪರ ಪ್ಯಾಕೇಜ್ ಕಾರ್ಯಕ್ರಮಗಳನ್ನು ಕೈಗೊಂಡಿರುವ ಬಗ್ಗೆ ಕಡ್ಡಾಯ ಶಿಕ್ಷಣದ ಬಗ್ಗೆ, ಮಂಡ್ಯ ಜಿಲ್ಲೆಯಲ್ಲಿ ಷುಗರ್ ಕೇನ್ ಸೆಸ್ ಪಡೆಯುತ್ತಿದ್ದು ಅದನ್ನು ಅಲ್ಲಿನ ಸ್ಥಳೀಯ ರಸ್ತೆ ಅಭಿವೃದ್ಧಿಗೆ ಬಳಸಬೇಕೆಂದು ಅಂದಿನ ಕೃಷಿ ಮತ್ತು ಶಿಕ್ಷಣ ಸಚಿವರಾಗಿದ್ದ ಕೆ.ವಿ.ಶಂಕರಗೌಡರನ್ನು ಜಿ.ಮಾದೇಗೌಡರು ವಿಧಾನಸಭಾ ಪ್ರಶ್ನೋತ್ತರ ಅವಧಿಯಲ್ಲಿ ಒತ್ತಾಯಿಸಿರುತ್ತಾರೆ. ಇದು ಅವರ ಕ್ಷೇತ್ರ ಕಾಳಜಿಗೆ ಸಾಕ್ಷಿಯಾಗಿದೆ.[44] 1967ರ ನವೆಂಬರ್ ತಿಂಗಳಿನಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಕ್ಷಾಮ ಬರಗಾಲ, ಬೆಳೆ ನಷ್ಟ ಹಾನಿ, ಪರಿಹಾರ ಕಾರ್ಯಗಳು, 1972 ರಲ್ಲಿ ತಮ್ಮ ಕ್ಷೇತ್ರದ ಶಿಂಷಾ ನದಿಗೆ ಅಡ್ಡಲಾಗಿ ಇಗ್ಗಲೂರು ಬಳಿ ಅಣೆಕಟ್ಟೆ ನಿರ್ಮಿಸಲು ಯೋಜನಾ ರೂಪಣೆ ಮತ್ತು ಏತ ನೀರಾವರಿ ಸ್ಥೂಲನಕ್ಷೆ, ಮುಡುಕು ತೊರೆಯಿಂದ, ಮಳವಳ್ಳಿ ತಾಲ್ಲೂಕಿಗೆ ನೀರಾವರಿ ಯೋಜನೆಗಳನ್ನು ಕೈಗೊಳ್ಳಬೇಕೆಂಬ ಬೇಡಿಕೆಗಳನ್ನು ಕಾಣಬಹುದು. ರಾಜ್ಯ ಯೋಜನಾ ಮತ್ತು ಮಾಹಿತಿ ಸಚಿವರಾದ ದೇವೇಂದ್ರಪ್ಪ ಗಾಲಪ್ಪರವರಿಗೆ 1972 ರಲ್ಲಿ ಜಿ.ಮಾದೇಗೌಡರು 4ನೇ ಪಂಚವಾರ್ಷಿಕ ಯೋಜನೆ ಪೂರ್ಣಗೊಂಡಿದೆಯೇ ಒಟ್ಟು ಹಣ ಹೂಡಿಕೆ ಮತ್ತು ಕೇಂದ್ರ ಸರ್ಕಾರದ ಅನುದಾನ ಪಡೆಯುವ ಬಗೆಗೆ ಪ್ರಶ್ನೋತ್ತರ ವೇಳೆಯಲ್ಲಿ ಚರ್ಚಿಸಿದ್ದಾರೆ. 1974ರಲ್ಲಿ ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಡಿ.ದೇವರಾಜ ಅರಸ್‌ರವರಿಗೆ ಮಳವಳ್ಳಿ ತಾಲ್ಲೂಕಿನ ಕಿರುಗಾವಲು ವಿಧಾನಸಭಾ ಸದಸ್ಯರಾದ ಜಿ.ಮಾದೇಗೌಡರು[45] 1924ರ ಕಾವೇರಿ ನದಿ ನೀರಿನ ಒಪ್ಪಂದವನ್ನು 1974ರಲ್ಲಿ ಪರಿಷ್ಕರಣೆ ಮಾಡುವಂತೆ ಗಮನಕ್ಕೆ

ತಂದರು. ಅಂತೆಯೇ ಮಳವಳ್ಳಿ ತಾಲ್ಲೂಕು ದೊಡ್ಡೆಗೌಡನ ಕೊಪ್ಪಲು ಬಳಿ ಭೂಕಂಪನ ತೊದರೆಯ ಅಂದಾಜು ಪರಿಹಾರ ಕಾರ್ಯಕ್ಕೆ ಸಭೆಯ ಗಮನವನ್ನು ಸೆಳೆದಿದ್ದಾರೆ. ರೈತರ ವ್ಯವಸಾಯ ಉಪಕರಣ ತಯಾರಿಕೆಯನ್ನು ಗ್ರಾಂಟ್ ಮತ್ತು ಲೈಸೆನ್ಸ್ ನೀಡಿ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್‌ಗೆ ನೀಡಿದ್ದರೂ ಪ್ರಾರಂಭವಾಗಿಲ್ಲವೆಂದು ಎಚ್ಚರಿಸಿರುತ್ತಾರೆ. ಅಂತೆಯೇ ಕಬ್ಬು ಬೆಳೆಗೆ ಬಳಸುವ ನೀರಿನ ಮೇಲಿನ ಯೋಗ್ಯದರ ತೀರ್ಮಾನ, ಜೊತೆಗೆ ಅಧಿಕಾರಿಶಾಹಿತ್ವ ಬಗೆಗೆ ವಿರೋಧ ಜನಪರ ನೀತಿಗಳ ಪರಿಗಣನೆಗೆ ಸದನದಲ್ಲಿ ಮನವಿ ಮಾಡಿರುವುದಲ್ಲದೆ 1979 ರಲ್ಲಿ ನಿರುದ್ಯೋಗ ನಿವಾರಣೆ ಬಗೆಗೆ ಮುಖ್ಯಮಂತ್ರಿಯಾಗಿದ ಡಿ.ದೇವರಾಜ ಅರಸುರವರಿಗೆ ಸಭಾ ನಡವಳಿಕೆಗಳಲ್ಲಿ ಸಾವದಾನವಾಗಿ ಸದಸ್ಯರ ಸ್ಥಳೀಯ ಸಮಸ್ಯೆಗಳ ಭಿನ್ನಹಗಳನ್ನು ಆಲಿಸುವಂತೆ, ಬಗೆಹರಿಸುವಂತೆ ತಿಳಿಸುತ್ತಾ ಮಾನ್ಯ ಮುಖ್ಯ ಮಂತ್ರಿಗಳನ್ನು ಮಾದರಿ ಮೈಸೂರಿನ, ಮಾದರಿ ಕರ್ನಾಟಕದ ಜವಾಬ್ದಾರಿ ಸರ್ಕಾರದ ಸ್ಥಾನಮಾನ ಪರಿಪಾಲನೆ ಬಗ್ಗೆ ಭಿನ್ನಪಿಸಿಕೊಳ್ಳುತ್ತಾ ಸರ್ಕಾರವನ್ನು ಟೀಕಿಸಿರುವುದು ವ್ಯಕ್ತವಾಗುತ್ತದೆ. ಅಂದರೆ ಡಿ.ದೇವರಾಜ ಅರಸ್ ರವರು ಮಾನ್ಯ ಮುಖ್ಯಮಂತ್ರಿಗಳಾಗಿದ್ದು ನಿರುದ್ಯೋಗ ಸಮಸ್ಯೆ ಬಗ್ಗೆ ಸ್ಪಂದಿಸುತ್ತಾ ನಿರುದ್ಯೋಗ ಸಮಸ್ಯೆ ಇದೆ ಅದು ಕರ್ನಾಟಕಕ್ಕೆ ಮಾತ್ರ ಮೀಸಲಾಗಿಲ್ಲ. ಎಲ್ಲಾ ರಾಜ್ಯಗಳಲ್ಲೂ ಇದೆ. ಅಲ್ಲದೆ ಎಲ್ಲಾ ರಾಜ್ಯಗಳಲ್ಲೂ ಇನ್ನು ಬೆಳೆಯುತ್ತಲೇ ಇದೆ. ಈಗ ಹತ್ತು ವರ್ಷದಲ್ಲಿ ಈ ಸಮಸ್ಯೆಯನ್ನು ಮುಗಿಸುತ್ತೇವೆಂದು ಕೇಂದ್ರ ಸರ್ಕಾರದವರು ಹೇಳಿಕೆ ಕೊಟ್ಟಿದ್ದಾರೆ. ಬಹುಶಃ 10 ವರ್ಷದಲ್ಲಿ ಈ ನಿರುದ್ಯೋಗ ಸಮಸ್ಯೆ ಮುಗಿದುಹೋಗಬಹುದು ಎಂದು ಉತ್ತರ ನೀಡಿದಾಗ ಜಿ.ಮಾದೇಗೌಡರು ಮಾನ್ಯ ಮುಖ್ಯಮಂತ್ರಿಗಳು ವ್ಯಂಗ್ಯವಾಗಿ ಉತ್ತರ ಕೊಟ್ಟಿದ್ದಾರೆಂದು[46] ಮೇಲಿನಂತೆ ಪ್ರಶ್ನಿಸಿದರು. ಅಂತೆಯೇ 1979ರ 19ನೇ ತಾರೀಖು ಸಂಜೆ 6 ಗಂಟೆಯಿಂದ 20ನೇ ತಾರೀಖು ಸಂಜೆ 6 ಗಂಟೆವರೆಗೆ ರಾಜ್ಯದಲ್ಲಿ ಪೊಲೀಸ್ ಅಧಿಕಾರಿಗಳ ನಿಷ್ಕ್ರಿಯತೆಯಿಂದ ಇದ್ದರೂ ಆ ಬಗ್ಗೆ ಈ ಸಮಯದಲ್ಲಿ ಶ್ರೀಮತಿ ಇಂದಿರಾಗಾಂಧಿಯವರನ್ನು ಅರೆಸ್ಟ್ ಮಾಡುತ್ತಾರೆಂದು ಅವರ ಅನುಯಾಯಿಗಳು ಎಬ್ಬಿಸಿದ ಗಲಭೆಯಲ್ಲಿ 9 ಜನ ಸತ್ತಿದ್ದರ ಬಗ್ಗೆ, ಲೂಟಿ, ಪುಂಡಾಟಿಕೆ ಬಗ್ಗೆ ಪೊಲೀಸ್ ಅದಿಕಾರಿಗಳು ಸಂಪೂರ್ಣವಾಗಿ ನಿಷ್ಕ್ರಿಯತೆಯಿಂದ ಇದ್ದ ಬಗ್ಗೆ ನ್ಯಾಯಾಂಗ ವಿಚಾರಣೆಯಾಗಬೇಕೆಂಬುದರ ಬಗ್ಗೆ ಸದನದಲ್ಲಿ ಗದ್ದಲ ಎದ್ದಾಗ, ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಡಿ.ದೇವರಾಜ ಅರಸುರವರು ಇಂತಹ ಗಲಭೆಗಳು ದೇಶದ ಎಲ್ಲಾ ರಾಜ್ಯಗಳಲ್ಲೂ ಸಾಮಾನ್ಯವೆಂದು ನ್ಯಾಯಾಂಗ ವಿಚಾರಣೆಯನ್ನು ನಿರಾಕರಿಸಿರುತ್ತಾರೆ. ಅಲ್ಲದ ವಿಧಾನಸಭಾಧ್ಯಕ್ಷರೂ ಕೂಡ ಇದೆ ಮಾತುಗಳನ್ನು ಕೇವಲ ಬೇಡಿಕೆ ಎಂದು ಲಘುವಾಗಿ ಪರಿಗಣಿಸಿರುತ್ತಾರೆ.[47] ಆ ವೇಳೆ ಜಿ.ಮಾದೇಗೌಡರ ನಿರ್ಣಯವು ಸದನದಲ್ಲಿ ಸುತ್ತ್ಯರ್ಥವಾದುದು.

ಭಾರತ ಸ್ವಾತಂತ್ರ್ಯ ಹೋರಾಟದ ವೇಳೆ ಮಹಾತ್ಮಗಾಂಧೀಜಿಯವರು ಸಹ ನೊಂದ ಜನಸಾಮಾನ್ಯರಿಗೆ ಪರಿಹಾರ ನೀಡುವಂತೆ ಬ್ರಿಟಿಷರಿಗೆ ತಿಳಿಸಿ, ನ್ಯಾಯಾಂಗ ವಿಚಾರಣೆಗೆ ಪರಿಗಣಿಸುವಂತೆ ತಿಳಿಸಿರುವುದನ್ನು ನೆನೆದರು. ಅಂದರೆ ಜಿ.ಮಾದೇಗೌಡರ ನೇರ ಮಾತುಗಳಲ್ಲಿ ಹೇಳುವುದಾದರೆ, ಸ್ವಾಮಿ ಮಾನ್ಯ ಸಭಾಧ್ಯಕ್ಷರೇ ನಮ್ಮ ಹಳ್ಳಿಗಳ ಕಡೆ ಒಂದು ಗಾದೆ ಇದ್ದು ಅದು ಹಾಡಿದ್ದೇ ಹಾಡೋ ಕಿಸಬಾಯಿ ದಾಸ ಎಂದು ಅಂದರೆ ನಾವು ವಿಧಾನಸಭಾ ಸದಸ್ಯರು. ಏನೇ ಹೇಳಿದರೂ ಮಾನ್ಯ ಮುಖ್ಯಮಂತ್ರಿಯವರು ಜುಡಿಷಿಯಲ್ ಏನ್‌ಕ್ವೈರಿ ಬೇಡವೆಂದೇ ಹೇಳುತ್ತಿದ್ದು, ನೀವು ಏನ್‌ಬೇಕಾದರೂ ಮಾತನಾಡಿಕೊಂಡು ಹೋಗಿ ನಾನು ಮಾತ್ರ ಜಗ್ಗುವುದಿಲ್ಲ, ನಾನು ಅಂದುಕೊಂಡಿರುವುದನ್ನೇ ಮಾಡುತ್ತೇನೆ ಎನ್ನುವ ಅರ್ಥದಲ್ಲಿ ಸೂಚಿಸುತ್ತಿದ್ದಾರೆ. ಇದು ಅವರಿಗೆ ಒಳ್ಳೇದಯಲ್ಲ. ಮಾನ್ಯ ಮುಖ್ಯಮಂತ್ರಿಗಳಿಗೆ 30–40 ವರ್ಷಗಳ ಆಡಳಿತ ಅನುಭವವಿದೆ ಎನ್ನುತ್ತಲೆ. ಭಾರತದ ಸ್ವಾತಂತ್ರ್ಯ ಹೋರಾಟದ ದಿನಗಳನ್ನು ಗಾಂಧೀಜಿಯವರ ವ್ಯಕ್ತಿತ್ವವನ್ನು ನೆನಪಿಸಿದರು. ಅಂದರೆ, ಹಿಂದೆ ಇಂಗ್ಲೀಷರ ಕಾಲದಲ್ಲೂ ಕೂಡ ಕಾನೂನುಭಂಗ ಚಳುವಳಿ ಮಾಡಿದ ಸಂದರ್ಭದಲ್ಲಿ ಆದ ಗಲಭೆಗಳಲ್ಲಿ ನೊಂದ ಜನರಿಗೆ ಪರಿಹಾರವನ್ನು ಕೋಡಬೇಕೆಂದು ಮಹಾತ್ಮಗಾಂಧೀಜಿಯವರೂ ಹೇಳಿದ್ದಾಗ ಅಂಥಹ ಇಂಗ್ಲೀಷರೂ ಕೂಡ ನ್ಯಾಯಾಂಗ ತನಿಖೆ ಮಾಡಿ ನೊಂದ ಜನರಿಗೆ ಪರಿಹಾರವನ್ನು ಕೊಟ್ಟಿದ್ದಾರೆ.[48] ಅಂದ ಮೇಲೆ ಇವತ್ತು ನಾವು ಪ್ರಜಾಪ್ರಭುತ್ವದಲ್ಲಿದ್ದು ಕೊಂಡು ಇಂಥ ಗಲಭೆಗಳಾದಾಗ ನ್ಯಾಯಾಂಗ ತನಿಖೆ ಮಾಡಿ ನೊಂದ ಜನರಿಗೆ ಪರಿಹಾರ ಕೊಡದೇ ಹೋಗುವುದು ಸರಿಯಲ್ಲ. ಇದನ್ನು ನಾವು ಒಂದು ತತ್ವದ ಆಧಾರದ ಮೇಲೆ ಕೇಳುತ್ತಿದ್ದೇವೆ. ಹಿಂದೆ ಒಂದು ಸಾರಿ ಮಂಡ್ಯದಲ್ಲಿ ಗಲಾಟೆ ಅದಾಗ ಇದೇ ಸರ್ಕಾರ ಅಲ್ಲಿನ ನೊಂದ ಜನಗಳಿಗೆ ಪರಿಹಾರವನ್ನು ಕೊಟ್ಟಿದ್ದಾರೆ. ಅಲ್ಲದೆ ಲಾಲ್‌ಬಹದ್ದೂರುಶಾಸ್ತ್ರೀಯವರು ರೈಲ್ವೆ ಸಚಿವರಾಗಿದ್ದಾಗ ಎಲ್ಲೋ ಒಂದು ಕಡೆ ರೈಲು ಬಿದ್ದು ಹೋಯಿತ್ತೆಂದು ತಮ್ಮ ರಾಜೀನಾಮೆಯನ್ನು ಕೊಟ್ಟರು. ಅದು ಸತ್ಪುರುಷ ಲಕ್ಷಣ ನೀವು ಅದೇ ರೀತಿ ಮಾಡಿದರೆ ನಿಮ್ಮ ಕೀರ್ತಿ ಹೆಚ್ಚುತ್ತದೆ. ನೀವು ಇತರರಿಗೆ ಮಾದರಿಯಾಗುತ್ತೀರಿ. ಉದಾಹರಣೆಗೆ ಹೇಳುವುದಾದರೆ ಕೆಲವು ಕೆಲಸಗಳನ್ನು ಇತರೆ ರಾಜ್ಯಗಳಿಗಿಂತಲೂ ಮಾದರಿಯಾದ ಕೆಲಸ ಮಾಡಿದೆಯೆಂದು ನಿಮಗೆ ನೀವೆ ಹೊಗಳಿಕೊಳ್ಳುತ್ತೀರಿ. ಅದೇ ರೀತಿ ಇದನ್ನು ಮಾಡಿ. ನಿಮ್ಮ ಮನಸ್ಸಿನಲ್ಲಿರುವುದನ್ನು ಬದಲಾವಣೆ ಮಾಡಿಕೊಳ್ಳುವಂತೆ ಕ್ರಮ ತೆಗೆದುಕೊಳ್ಳುವಂತೆ ತಮ್ಮ ಅಭಿಪ್ರಾಯವನ್ನು ನಿರ್ಭಯವಾಗಿ ವ್ಯಕ್ತಪಡಿಸಿರುವುದನ್ನು ನಾವು ಮನಗಾಣಬಹುದು. ಜಿ.ಮಾದೇಗೌಡರು ಶಾಸಕಾಂಗ ಸಭೆ ಸದಸ್ಯರಾಗಿ ಪ್ರಯಾಣಿಕರ ಖಾಸಗಿ ಸಾರಿಗೆ ಸೇವೆ ರಾಷ್ಟ್ರೀಕರಣ ಬಗ್ಗೆ, ಅಂತೆಯೇ ತಮ್ಮ ಸ್ಥಳೀಯ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯು ರೈತರಿಗೆ ಬೆಳೆಬಾಕಿಯನ್ನು ನೀಡದಿರುವ ಬಗ್ಗೆ ಮತ್ತು ರಾಷ್ಟ್ರೀಕರಣಗೊಳಿಸುವಂತೆ ಕೂಡ ಚರ್ಚೆ

ಮಾಡಿರುವುದು ಕಂಡುಬರುತ್ತದೆ. ಕಾಳಿನದಿ ಜಲವಿದ್ಯುತ್ ಯೋಜನೆ ನಿರ್ಮಾಣದ ಬಗ್ಗೆ ಪ್ರಸ್ತಾಪ, ಸಹಕಾರಿ ಸಂಘದ ಕಟ್ಟಡ ನಿರ್ಮಾಣಕ್ಕೆ ತೋಟಿ ಇನಾಂ ಭೂಮಿ ಬಳಸಲು ಪ್ರಸ್ಥಾಪವನ್ನು ಮಾಡಿರುವುದು ಸಾಮಾಜಿಕ ಮತ್ತು ಆರ್ಥಿಕ ಕಳಕಳಿಯನ್ನು ವ್ಯಕ್ತಪಡಿಸುತ್ತದೆ. ಪ್ರಾಥಮಿಕ ಶಾಲಾ ಮಕ್ಕಳ ಕಡ್ಡಾಯ ಶಿಕ್ಷಣ ಪಡೆಯುತ್ತಿರುವುದರ ಬಗ್ಗೆ ಪಾನವಿರೋಧ ಬಗ್ಗೆ ಕ್ರಮಗಳನ್ನು ಪ್ರಶ್ನಿಸಿರುತ್ತಾರೆ.

ಅಲ್ಲದೆ ಜಿ.ಮಾದೇಗೌಡರು ವಿದ್ಯಾಭೂದಾನ ಚಳುವಳಿ ಬಗೆಗೆ, ಜಮೀನ್ದಾರರು ಒತ್ತುವರಿ ಮಾಡುತ್ತಾ ಪ್ರಾಕೃತಿಕದತ್ತ ನದಿಬಯಲನ್ನು ಅತಿಕ್ರಮಣ ಮಾಡಿರುವುದನ್ನು ತನ್ನ ಸ್ವಗ್ರಾಮದಲ್ಲೇ ಅಂದರೆ ಮದ್ದೂರು ತಾಲ್ಲೋಕು, ಗುರುದೇವರ ಹಳ್ಳಿಯಲ್ಲಿ ನದಿ ಬಯಲನ್ನು ಅತಿಕ್ರಮಿಸಿ ಖರಾಬು ಭೂಮಿ ಒತ್ತುವರಿ ಆಗಿರುವ ಬಗ್ಗೆ ಸರ್ವೆ ಇಲಾಖೆಗಮನಕ್ಕೆ ತಂದು ಸಾರ್ವಜನಿಕ ಆಸ್ತಿಗೆ ಹೆಚ್ಚಿನ ಹಾನಿಯಾಗುವುದನ್ನು ತಪ್ಪಿಸಿರುತ್ತಾರೆ. ಇದು ಅವರ ನಿಶಪಕ್ಷಪಾತ ನಿಲುವನ್ನು ತಿಳಿಸುತ್ತದೆ.[49] ಅವರು ತಮ್ಮ ಕ್ಷೇತ್ರದ ಜಿಲ್ಲಾಪಂಚಾಯತ್ ಅಧ್ಯಕ್ಷರು ಮತ್ತು ಮಂಡಲ್‌ಪಂಚಾಯಿತಿ ಚುನಾವಣೆಗಳನ್ನು ಪಕ್ಷಪಾತ ರಹಿತವಾಗಿ ನಡೆಸುವುದರ ಬಗ್ಗೆ 1987 ಫೆಬ್ರವರಿ 10 ರಂದು ಮಾತನಾಡುತ್ತಾ ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರ ಸ್ಥಾನಕ್ಕೆ ಚುನಾವಣೆ ನಡೆಯುವ ವೇಳೆ ಓಟುದಾರರ ಲಿಸ್ಟ್ ಜಿಲ್ಲಾ ವಿಭಾಗದ ಕಮೀಷನರ ಬಳಿ ಇದ್ದು ಆ ಅಧಿಕಾರಿಗಳು, ಶಾಸಕರು ಅಲಿಸ್ಟ್ ಕೇಳಿದಾಗ ನೀಡಿರುವುದಿಲ್ಲ. ಇಂತಹ ಅವರ ದುರ್ವರ್ತನೆ ಬಗೆಗೆ ಅಧಿಕಾರ ಶಾಹಿತ್ವ, ನೌಕರರಶಾಹಿತ್ವ ಬಗೆಗೆ ಪ್ರಸ್ಥಾಪಮಾಡಿ ಮುಖ್ಯ ಮಂತ್ರಿಗಳಾದಿಯಾಗಿ ಸದನವನ್ನು ಈ ಕೆಳಗಿನ ಮಾತುಗಳಲ್ಲಿ ತರಾಟೆಗೆ ತೆಗೆದುಕೊಂಡಿರುತ್ತಾರೆ.[50] ರಾಜ್ಯದಲ್ಲಿ ಐ.ಎ.ಎಸ್. ಅಧಿಕಾರಿಗಳು, ಹೇಗೆ ಕೆಲಸ ಮಾಡುತ್ತಿ ದ್ದಾರೆಂಬುದನ್ನು ನಾನು ಹೇಳುತ್ತಿದ್ದೇನೆ. ನಿಮ್ಮ ಆಸೆ ಗುರಿ ಏನಿದೆ ಎಂದರೆ. ಈ ರಾಜ್ಯ ರಾಮರಾಜ್ಯ ಆಗಬೇಕು. ಮೌಲ್ಯಾಧಾರಿತ ರಾಜಕಾರಣ ಮಾಡಬೇಕೆಂಬುದರ ಬಗ್ಗೆ ಬಹಳ ಅಸೆ ಇದೆ. ಆದರೆ ನಿಮ್ಮ ಅಧಿಕಾರಶಾಹಿ ವರ್ಗ, ಅಧಿಕಾರಿಗಳು ನಿಮ್ಮ ಆಸೆಯನ್ನು ಜನಗಳ ಹತ್ತಿರಕ್ಕೆ ಕೊಂಡೊಯ್ಯುತ್ತಾರೆಯೆ ಎನ್ನುತ್ತಾ ನಾನು ಒಬ್ಬ ಜನಪ್ರತಿನಿಧಿ ವಿಧಾನಸಭಾ ಸದಸ್ಯ ಒಬ್ಬ ಐ.ಎ.ಎಸ್. ಅಧಿಕಾರಿಯಾದ ಡಿವಿಜನಲ್ ಕಮೀಷನರ್‌ರಿಗೆ ಒಂದು ಓಟರ್ ಲಿಸ್ಟ್ ಕೊಡಿ ಎಂದು ಕೇಳಿದಾಗ ಅವರು ವಿಧಾನಸೌಧದ ಕಾರ್ಯದರ್ಶಿಯವರನ್ನು ಪೋನ್ ಮೂಲಕ ಕೇಳಿ ನಿಮಗೆ ಓಟರ್‌ಲಿಸ್ಟ್ ಕೋಡಬೇಕೇ ಬೇಡವೇ ಎಂದು ಕೇಳಿ ನಂತರ ಕೊಡುತ್ತೇನೆ ಎಂದರೆ ಈ ದೇಶದಲ್ಲಿ ಆಡಳಿತವನ್ನು ಯಾರು ಮಾಡುತ್ತಿದ್ದಾರೆ ಎನ್ನುವುದನ್ನು, ಮಾನ್ಯ ಮುಖ್ಯಮಂತ್ರಿಯವರು ಯೋಚನೆ ಮಾಡಬೇಕು ಎನ್ನುತ್ತಲೇ ಮುಂದುವರೆಸಿ ತಮ್ಮ ಭಾಷಣದಲ್ಲಿ ಇವೊತ್ತು ಅಧಿಕಾರ ವಿಧಾನಸೌಧದಲ್ಲಿ ಇರಬಾರದು[51] ಅದು ಜನರಲ್ಲಿ ಹೋಗಬೇಕೆಂದು ಆಶಯವನ್ನು ಇಟ್ಟುಕೊಳ್ಳಲಾಗಿದೆ. ಆ ಬಗ್ಗೆ ನಿಮ್ಮ ಅಧಿಕಾರಿಗಳು ಎಷ್ಟರ ಮಟ್ಟಿಗೆ ಅದನ್ನು ಜಾರಿಗೆ ತರುತ್ತಾರೆ. ಎನ್ನುವ ವಿಚಾರವನ್ನು ಇಲ್ಲಿ

ನೋಡಬೇಕು ಎಂಬ ನಿರ್ದಿಷ್ಟ ಅಪಾದನೆಯನ್ನು ಅಧಿಕಾರಿಗಳ ಮೇಲೆ ಮಾಡಿರುತ್ತಾರೆ. ಹೀಗೆ ಅವರ ಕಾರ್ಯವೈಖರಿಯನ್ನು ನೇರವಾಗಿ ಖಂಡಿಸಿರುತ್ತಾರೆ. 1988 ಮಾರ್ಚ್ 30 ರಂದು ಜಿ.ಮಾದೇಗೌಡರು ಆಂದ್ರ ರಾಜ್ಯವು ತೆಲುಗು-ಗಂಗಾ ಪ್ರಾಜೆಕ್ಟ್ ಅನ್ನು ಕಾರ್ಯರೂಪಕ್ಕೆ ತರುವ ಬಗ್ಗೆ ಪ್ರತಿಕ್ರಿಯಿಸಿ ಇದರಿಂದ ಕರ್ನಾಟಕಕ್ಕೆ ಅದರಲ್ಲೂ ಉತ್ತರ ಕರ್ನಾಟಕದವರಿಗೆ ದೊಡ್ಡ ಹಾನಿ ಉಂಟಾಗುತ್ತದೆ. ಅದರಲ್ಲೂ ಹಿಂದುಳಿದ ಭಾಗ ಉತ್ತರ ಕರ್ನಾಟಕದ ರೈತರ ಕೊಲೆಯಾಗುತ್ತದೆ ಎಂದು ಸ್ಪಷ್ಟವಾಗಿ ಅವರು ನುಡಿದಿರುತ್ತಾರೆ. ಜೊತೆಗೆ ಕೃಷ್ಣಾ ಬೇಸಿನ್‌ನ ಎಲ್ಲಾ ಪ್ರಾಜೆಕ್ಟ್‌ಗಳಿಗೆ, ಸಂಪೂರ್ಣ ನಿರ್ಮಾಣಕ್ಕೆ 4000 ಕೋಟಿ ಬೇಕಾಗುತ್ತದೆಂದು ಕಾವೇರಿ ಬೇಸಿನ್ ಯೋಜನೆ ಪೂರ್ಣತೆಗೆ 1000 ಕೋಟಿ ರೂ. ಬೇಕಾಗುತ್ತದೆಂದು ಇವುಗಳು ಪೂರ್ಣವಾಗಲು ಇನ್ನೂ 10 ವರ್ಷಗಳೇ ಹಿಡಿಯುತ್ತವೆ. ಹಾಗೆಂದು ನಾವು ರೆಸ್ಯೂಲ್ಯೂಷನ್ ಮಾಡಿದ್ದೇವೆ.[52] ಅಲ್ಲದೆ ಅದೇ ರೀತಿ ತುಂಗಭದ್ರಾ ಅಧೀನದ ಪ್ರಾಜೆಕ್ಟ್‌ಗಳು ಮುಗಿಯದೆ ನಮಗೆ ಅಲಾಟ್ ಆದಂತಹ ಕೋಟಾ ಏನಿದೆ ಇವತ್ತಿನ ದಿವಸ ನಾವು ಉಪಯೋಗ ಮಾಡಿಕೊಳ್ಳುವುದಕ್ಕೆ ಅಗಿಲ್ಲ ಎಂಬ ಮಾತನ್ನು ನಾನು ಬಹಳ ವಿಷಾದದಿಂದ ಹೇಳುತ್ತೇನೆಂದು ಜಿ.ಮಾದೇಗೌಡರು ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿರುತ್ತರೆ.

1987-88 ರಲ್ಲಿ ಜಿ.ಮಾದೇಗೌಡರು ತಮ್ಮ ಕ್ಷೇತ್ರದ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಆಡಳಿತದಿಂದ ರೈತರಿಗೆ ತೊಂದರೆಯಾಗುತ್ತಿರುವ ಬಗ್ಗೆ ಹಾಗೂ ಈ ಕಾರ್ಖಾನೆಯನ್ನು ರೈತರ ಹಿಡಿತಕ್ಕೆ ಅಥವಾ ರಾಷ್ಟ್ರೀಕರಣ ಮಾಡಬೇಕೆಂದು ಒತ್ತಾಯಿಸಿರುತ್ತಾರೆ.[53] ಅದೇ ರೀತಿ ಕನ್ನಡ, ಇಂಗ್ಲೀಷ್ ಮಾಧ್ಯಮಕ್ಕೆ ಸಂಬಂಧಿಸಿದಂತೆ ಶಿಕ್ಷಣದಲ್ಲಿ ಅಳವಡಿಕೆ ಬಗ್ಗೆ ಸ್ಪಷ್ಟಪಡಿಸುವಂತೆ, ಕೆ.ಆರ್.ಎಸ್. ಅಚ್ಚುಕಟ್ಟು ಪ್ರದೇಶಗಳಿಗೆ ಹಾರಂಗಿ ಮತ್ತು ಹೇಮಾವತಿ ಜಲಾಶಯಗಳ ನೀರು ಒದಗಿಸುವ ಬಗ್ಗೆ, ಅದರಲ್ಲೂ ರಾಜ್ಯದ ಸಹಕಾರಿ ಸಂಘದ ಸಾಲ ಬಾಕಿ ಇದ್ದಲ್ಲಿ ಜಮೀನು, ಆಸ್ತಿ ಹರಾಜು ಹಾಕುವ ಕಾನೂನನ್ನು ವಿರೋಧಿಸಿ ಮಾತನಾಡಿರುವುದನ್ನು ಹಾಗೂ 1985 ಆಗಸ್ಟ್ 22ನೇ ತಾರೀಖಿನಂದು ಸಹಕಾರಿ ಸಂಘಗಳ ಸಾಲವನ್ನು ಗೌರವ ರೀತಿಯಲ್ಲಿ ವಸೂಲಿಮಾಡುವುದಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದು.[54] ಜಿ.ಮಾದೇಗೌಡರು ಅರಣ್ಯ, ಗಣಿ, ಭೂವಿಜ್ಞಾನ ಸಚಿವರಾಗಿದ್ದಾಗ, ಸಾರ್ವಜನಿಕರಿಗೆ, ಕಾರ್ಖಾನೆಗಳಿಗೆ ಸೌದೆ ಡಿಪೋಗಳಗೆ ಮರಮುಟ್ಟುಗಳನ್ನು ಸರ್ಪಕವಾಗಿ ಒದಗಿಸಲು, ಬೆಲೆ ನಿಯಂತ್ರಿಸಲು ಸಾರ್ವಜನಿಕ ಗಿಡನೆಡುವ ಕಾರ್ಯಕ್ರಮ ರಿಸರ್ವ್ ಫಾರೆಸ್ಟ್ ಯೋಜನೆ, ಸಾಮಾಜಿಕ ಅರಣ್ಯ ಯೋಜನೆ, ಕೆರೆ ಅಂಚು ರಸ್ತೆ ಅಂಚಿನಲ್ಲಿ ಗಿಡ ನೆಡುವ ಕಾರ್ಯಕ್ರಮ ರೂಪಿಸಿ ಜಾರಿಗೆ ತಂದಿರುತ್ತಾರೆ. ಜೊತೆಗೆ ಬಗರ್‌ಹುಕುಂ ಪರಿಶೀಲನೆ, ಕಾಡು ಅತಿಕ್ರಮಣ ಕಾಡುನಾಶ ಬಗೆಗೆ ಪರಿಶೀಲಿಸಿ ಆಕ್ರಮಸಾಗುವಳಿ, ಕಾಡು ಒತ್ತುವರಿಯನ್ನು ತಡೆಗಟ್ಟಲು ಕಾರ್ಯಪ್ರವೃತ್ತರಾಗಿರುವುದನ್ನು ಕಾಣಬಹುದು.[55] ಸ್ಥಳೀಯ

ಗುಡಿ ಕೈಗಾರಿಕೆಗಳಿಗೆ ಅವಶ್ಯಕವಾಗಿ ಬೇಕಾಗಿರುವ ಮರಮುಟ್ಟುಗಳನ್ನು ಕರಕುಶಲ ವಸ್ತುಗಳಿಗೆ ಒದಗಿಸಲು ಸಮರ್ಪಕವಾಗಿ ಕ್ರಮಕೈಗೊಂಡಿರುವುದನ್ನು ಕಾಣಬಹುದು. ಜಿ.ಮಾದೇಗೌಡರು ಸಾರ್ವಜನಿಕ ಪಡಿತರ ವಿತರಣೆಗೆಂದು ನೀಡಿದ ಆಹಾರ ಧಾನ್ಯಗಳನ್ನು ಖಾಸಗಿಯವರು ದುರಪಯೋಗ ಮಾಡಿಕೊಳ್ಳದಂತೆ ಮೇಲ್ವಿಚಾರಣೆ ನ್ಯಾಯ ಬೆಲೆ ಅಂಗಡಿಗಳನ್ನು ನಡೆಸಲು ಮಂಜೂರಾತಿ ಮಾಡಿರುತ್ತಾರೆ. ಅಂತೆಯೇ ಡಕಾಯಿತಿ ಹಾಗೂ ಜಬರಿಕಳುವಿನ ಜಿಲ್ಲಾವಾರು ಪ್ರಕರಣದ ಮಾಹಿತಿ ಮತ್ತು ಮಾಲುಗಳ ಮೊತ್ತದ ಬಗೆಗೂ ಮಾಹಿತಿ ಪಡೆದಿರುತ್ತಾರೆ. ಹಾಗೆಯೇ ಗ್ರಾಮೀಣ ವಿದ್ಯುದೀಕರಣ ಉಚಿತ ನೀಡಿಕೆ ಬಗ್ಗೆ ಕ್ರಮ, ವಿದ್ಯುತ್‌ದರ ಪಾವತಿ ಮಾಡದೆ ಇದ್ದಾಗ ವಿದ್ಯುಚ್ಛಕ್ತಿ ನಿಲುಗಡೆ ಮಾಡಿದ ಬಗ್ಗೆ ಮಂಡಲ ಪಂಚಾಯಿತಿಗೆ ಅನ್ವಯಿಸುವುದಿಲ್ಲವೆಂಬ ನಿಲುವು ತಳೆದಿರುತ್ತಾರೆ. ಇವರು ತಮ್ಮ ವಿಧಾನಸಭಾ ಕ್ಷೇತ್ರವಾದ ಮಳವಳ್ಳಿ ತಾಲ್ಲೋಕ್ ವ್ಯವಸಾಯೋತ್ಪನ್ನ ಮಾರಾಟದ ಸಹಕಾರ ಸಂಘದ ಆಡಳಿತ ಮಂಡಳಿ ರದ್ದಾದ ಬಗ್ಗೆ ಕಾರಣ ಮತ್ತು ಸಹಕಾರ ಸಂಘಗಳು ನಷ್ಟದಲ್ಲಿರುವ ಬಗೆಗೆ ಗಮನಹರಿಸಿ ಇವುಗಳ ಪುನಶ್ಚೇತನಕ್ಕಾಗಿ ಕ್ರಮಕೈಗೊಂಡರು. ಅಲ್ಲದೆ ಮದ್ದೂರು ತಾಲ್ಲೋಕಿನ ಕೆಲಗ್ರಾಮಗಳಲ್ಲಿ ಕೃಷಿ ಬೆಳೆಗಳಿಗೆ ಕೀಟಬಾದೆ ಉಂಟಾಗಿ ಬೆಳೆ ನಷ್ಟವಾದ ಬಗ್ಗೆ ಸರ್ಕಾರದ ಗಮನ ಸೆಳೆದಿರುತ್ತಾರೆ. ಇವರು ರಾಜ್ಯದಲ್ಲಿ ಶಾಶ್ವತ ಅನುದಾನ ರಹಿತ ಕಾಲೇಜು ಸ್ಥಾಪನೆಗೆ ಮಂಜೂರಾದ ಬಗೆಗೆ ಮಾಹಿತಿಪಡೆದಿರುತ್ತಾರೆ. ಸಕ್ಕರೆ ಕಾರ್ಖಾನೆಗಳಿಂದುಂಟಾಗುತ್ತಿರುವ ವಾಯು, ಜಲಮಾಲಿನ್ಯದ ಪರಿಣಾಮಗಳನ್ನು ಸದನಕ್ಕೆ ತಂದು ಚರ್ಚಿಸಿರುತ್ತಾರೆ. ಅಂತೆಯೇ ತಮಿಳುನಾಡಿಗೆ ನೀರು ಬಿಡುಗಡೆ ಪ್ರಮಾಣ ಮತ್ತು ಇದರಿಂದ ಕಾವೇರಿ ಅಚ್ಚುಕಟ್ಟು ಪ್ರದೇಶದ ಬೆಳೆಗಳ ನಾಶದ ಬಗ್ಗೆ ಮಾಹಿತಿಯನ್ನು ಪ್ರಸ್ತಾಪಿಸಿರುತ್ತಾರೆ. ಸದನದ ಕಾರ್ಯ ಕಲಾಪಗಳಲ್ಲಿ ಶಾಸನ ಸಭೆಯ ಚರ್ಚೆಗಳಲ್ಲಿ ಕರ್ನಾಟಕ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಖಾಲಿ ಇರುವ ಉದ್ಯೋಗಗಳ ಬಗೆಗೆ ಮಾಹಿತಿ ಪಡೆದು ನಿರುದ್ಯೋಗ ಸಮಸ್ಯೆ ಬಗೆಹರಿಸಲು ಸರ್ಕಾರದ ಗಮನಸೆಳೆದಿರುತ್ತಾರೆ.[56]

ಜಿ.ಮಾದೇಗೌಡರು ವರುಣಾನಾಲಾ ವಿರೋಧಿ ಚಳುವಳಿಯಲ್ಲಿ ಸಂಪೂರ್ಣವಾಗಿ ತೊಡಗಿಸಿ ಕೊಂಡಿರುತ್ತಾರೆ. ಕರ್ನಾಟಕದಲ್ಲಿ ಭೂ ರಹಿತ ಸಾಮಾನ್ಯ ಜನರಿಗೆ ಸಂರ್ಪಕ ಭೂ ಹಂಚಿಕೆ ಕಾರ್ಯಕ್ರಮ ಮುಂತಾದ ಜನ ಸಾಮಾನ್ಯರ ಹಿತ ಕಾಯುವ ಮನೋಭಾವನೆಯನ್ನು ಹೊಂದಿದ್ದರು ಅಲ್ಲದೆ ಹೇಮಾವತಿ ಕಬಿನಿ ಜಲಾಶಯ ಯೋಜನೆಗಳು ಮುಗಿದಿದ್ದು ಈಗ ರೈತರಿಗೆ ಕಾಲುವೆಗಳ ಮೂಲಕ ನಿರಾವರಿ ಸೌಲಭ್ಯ ಒದಗಿಸಲು ಮುಂದಿನ ಕ್ರಮವನ್ನು ಚುರುಕುಗೊಳಿಸುವಂತೆ ಮನವಿ ಮಾಡಿರುತ್ತಾರೆ. ತಮ್ಮ ಜಿಲ್ಲೆಯಲ್ಲಿ ಡಿಸ್ಟ್ರಿಕ್ಟ್ ರಿಕ್ರುಪ್‌ಮೆಂಟ್ ಕಮಿಟಿಯಿಂದ ಸ್ಟೈಪಂಡರಿ ಸ್ಕೀಮ್ ಉಪಾಧ್ಯಾಯರ ನೇಮಕ ಮಾಡಿಕೊಂಡು ನಂತರ ಸ್ಟೇ ಮಾಡಿರುವುದನ್ನು ಪ್ರಸ್ತಾಪಿಸಿ ಮತ್ತೆ ಖಾಯಂ ಮಾಡಿಕೊಳ್ಳುವಂತೆ ಆದೇಶ ಪಾಸುಮಡುವಂತೆ

ಸಂಬಂಧಪಟ್ಟ ಸಚಿವರ ಗಮನಕ್ಕೆ ತಂದಿರುತ್ತಾರೆ. ಲೋಕೋಪಯೋಗಿ ಇಲಾಖೆಯು ತಮ್ಮ ಜಿಲ್ಲೆಯಲ್ಲಿ ಸ್ಥಳೀಯ ರಸ್ತೆಗಳನ್ನು ಅಭಿವೃದ್ಧಿಪಡಿಸಿ ಅಲ್ಲಿನ ಆರ್ಥಿಕ ಅಭಿವೃದ್ಧಿಗೆ ಅನುಕೂಲವಾಗುವಂತೆ ತಮ್ಮ ದೀರ್ಘ ಭಾಷಣದಲ್ಲಿ ತಿಳಿಸಿರುತ್ತಾರೆ. ತಮ್ಮ ಜಿಲ್ಲಾವ್ಯಾಪ್ತಿಯಲ್ಲಿ ತೆಂಗು ಸುಳಿ ಕೊಳೆತ ರೋಗ ನಿವಾರಣೆಗೆ ಸರಿಯಾದ ಔಷಧೋಪಚಾರ ನೀಡಿ ರೈತರಿಗೆ ನೆರವಾಗುವಂತೆ ಸದನದಲ್ಲಿ ರೈತರ ವಿಚಾರವಾಗಿ ಪ್ರಸ್ತಾಪಿಸಿರುತ್ತಾರೆ. ಖಾಸಗಿವಲಯ ಕೈಗಾರಿಕಾ ಅಭಿವೃದ್ಧಿಯನ್ನು ಸರ್ಕಾರವೇ ಕಾಯಬೇಕೆಂದು ಚರ್ಚಿಸಿರುತ್ತಾರೆ. ಆದರೆ ಸರ್ಕಾರ ವಹಿಸಕೊಳ್ಳುವಲ್ಲೂ 2 ರೀತಿ ಕಷ್ಟಗಳಿರುತ್ತವೆ. ಒಂದು ಕಾನೂನು ತೊಡಕು ಮತ್ತೊಂದು ಆರ್ಥಿಕ ಮುಗ್ಗಟ್ಟು ಇಂತಹ ತೊಡಕುಗಳನ್ನು ನಿವಾರಿಸಲು ಸಹ ಪ್ರಸ್ತಾಪಿಸಿರುತ್ತಾರೆ.[57] ಜಿ.ಮಾದೇಗೌಡರಿಂದ ಹಾವನೂರು ವರದಿಯಲ್ಲಿ ಒಕ್ಕಲಿಗರ ಜನಾಂಗ ಮತ್ತು ರೆಡ್ಡಿಗಳು ನಡುವಿನ ವ್ಯತ್ಯಾಸ, ಇವೆರಡೂ ಒಂದೇ ಜಾತಿಗಳೆಂದು ಪರಿಣಿಸಿರುವುದನ್ನು ಪ್ರಶ್ನಿಸಿರುತ್ತಾರೆ. ಅಲ್ಲದೆ ಗ್ರಾಮಗಳಲ್ಲಿ ದೇವಸ್ಥಾನದ ಪೂಜಾರಿಗಳಿಗೆ ನೀಡುವ ಜಮೀನನ್ನು ಊರಿನ ಜಮೀನ್ದಾರರು ಖಾತೆ ಮಾಡಿಕೊಂಡು ಸ್ವಂತ ಭೂಮಿಯನ್ನಾಗಿ ಮಾರ್ಪಡಿಸಿಕೊಂಡು ಸಾಗುವಳಿಗೆ ಬಳಸುತ್ತಿರುವುದನ್ನು ವಿರೋಧಿಸಿ ಪ್ರಸ್ತಾಪಿಸಿರುತ್ತಾರೆ. ಅಂತೆಯೇ ಕಬ್ಬಿನದರ ನಿಗದಿ ಬಗೆಗೆ ಮತ್ತು ಕಬ್ಬಿನ ಬಾಕಿ ಹಣ ಶೀಘ್ರ ಸಂದಾಯ ಮಾಡದಿರುವ ಬಗ್ಗೆ ಪದೆ ಪದೆ ಧ್ವನಿ ಎತ್ತಿರುತ್ತಾರೆ.

ಹೀಗೆ ಜಿ.ಮಾದೇಗೌಡರು ಪ್ರಜಾಪ್ರಭುತ್ವ ಸರ್ಕಾರ ನೆಲೆಗೊಂಡ ದಿನಮಾನಗಳಲ್ಲಿ ಕರ್ನಾಟಕ ರಾಜ್ಯದ ಜನಪ್ರತಿನಿಧಿಗಳ ಸಭೆಯಾದ ಶಾಸಕಾಂಗ ಸಭೆಯ ಸದಸ್ಯರಾಗಿ ಸುಮಾರು 6 ಬಾರಿ ಆಯ್ಕೆ ಯಾಗಿರುವುದು ನಂತರ 2 ಬಾರಿ ಸಂಸದರಾಗಿಯೂ ಚುನಾಯಿರಾಗಿರುವರುದು ಸೋಜಿಗವೇ ಸರಿ. ಇವರು ಪ್ರಭುತ್ವದ ಮುಖ್ಯ ಭೂಮಿಕೆಯಲ್ಲಿದ್ದರೂ ತನ್ನ ಸಮುದಾಯ ಹಾಗೂ ಭೌಗೋಳಿಕ ಹಿತಕ್ಕಾಗಿ ಶ್ರಮಿಸಿರುತ್ತಾರೆ. ಇವರು ಆರಂಭದಿಂದಲೂ ತಮ್ಮ ಮುತ್ಸದಿ ಮಾರ್ಗದರ್ಶಕರ ನೇತೃತ್ವದ ನಂತರ ಪಾಲ್ಗೊಂಡು ಜನನಾಯಕರಾಗಿ ಬೆಳೆಯುವಲ್ಲಿ ತಮ್ಮ ಸ್ಥಳೀಯ ಜನ ಸಮುದಾಯದ ಪಾತ್ರ ಮಹತ್ವದ್ದು. ಆದರೆ ಒಮ್ಮೆ ಅವರ ನಿರ್ಣಯಗಳು, ಜನಾನುರಾಗಿ ಕಾರ್ಯಕ್ರಮಗಳು ಅವರ ಪ್ರಭುತ್ವವನ್ನು ಗಟ್ಟಿಗೊಳಿಸುತ್ತವೆ. ಅವರನ್ನು ಬೆಳೆಸಿ ಉಳಿಸುತ್ತವೆ. ಜನ ಸಮುದಾಯಗಳ ಅಸ್ತಿತ್ವವನ್ನು ಪ್ರತಿನಿಧಿಸಿ ಅವರ ಸಮಸ್ಯೆಗಳನ್ನು ಬಗೆಹರಿಸಿ ಅವರ ನೆಮ್ಮದಿ ಬದುಕಿಗೆ ಅಗತ್ಯವಿರುವ ಮಾರ್ಗೋಪಾಯಗಳನ್ನು ಚರ್ಚಿಸಿ ಜನಪರ ಅಭಿವೃದ್ಧಿಗೆ ಜಿ.ಮಾದೇಗೌಡರು ಶ್ರಮಿಸಿರುವುದು ಗಾಂಧೀಜಿಯವರ ಆದರ್ಶದಂತೆ ಎಂಬುದನ್ನು ಮನಗಂಡು ಪ್ರಸ್ತುತದ ಮತ್ತು ಮುಂದಿನ ಪೀಳಿಗೆಗೆ ತಿಳಿಸುವುದು ನಮ್ಮ ಆದ್ಯಕರ್ತವ್ಯವಾಗಿರುತ್ತದೆ.

**ಕೊನೆಟಿಪ್ಪಣಿ**

1. ಸಂದರ್ಶನ, ಜಿ.ಮಾದೇಗೌಡರೊಂದಿಗೆ ದಿನಾಂಕ (06.04.2017) ಸಂಶೋಧಕನಿಂದ
2. ಸಂದರ್ಶನ, ಜಿ.ಮಾದೇಗೌಡರೊಂದಿಗೆ ದಿನಾಂಕ (06.04.2017) ಸಂಶೋಧಕನಿಂದ
3. ರಾಮಕೃಷ್ಣ.ಮಾ (2005), ರೈತಮಿತ್ರ, ಜಿ.ಮಾದೇಗೌಡ, ಕಿರಗಂದೂರು, ಮಂಡ್ಯ, ಪು.ಸಂ. 6
4. ಕೊಳಲು ವಾರ ಪತ್ರಿಕೆ, (ಮಾರ್ಚ್, 12, 2005), ಪು.ಸಂ. 6
5. ರಾಮಕೃಷ್ಣ.ಮಾ. ಪೂರ್ವೋಕ್ತ, ಪು.ಸಂ. 5
6. ಸಂದರ್ಶನ, ಜಿ.ಮಾದೇಗೌಡರೊಂದಿಗೆ ದಿನಾಂಕ (06.04.2017) ಸಂಶೋಧಕನಿಂದ
7. ರಾಮಕೃಷ್ಣ.ಮಾ, ಪೂರ್ವೋಕ್ತ, ಪು.ಸಂ. 21
8. ರಾಮೇಗೌಡ.ಎನ್.ಎಸ್ ಹಾಗೂ ಬಿಳೀಗೌಡ.ಹೆಚ್., (1987), 'ಭಾರತೀ' ಪು.ಸಂ. 20



9. ಅದೇ, ಪು.ಸಂ. 21
10. ಮುದ್ದೇಗೌಡ.ಎಚ್.ಎಸ್, (1997), 'ಜೀವನಾಡಿ' ಪು.ಸಂ. 21
11. ಪ್ರಜಾವಾಣಿ ದಿನ ಪತ್ರಿಕೆ, ಶುಕ್ರವಾರ (03.06.1977)
12. ಪೂರ್ವೋಕ್ತ, ಶುಕ್ರವಾರ (03.06.1977)
13. ಜವರೇಗೌಡ.ದೇ. (1977), ಸುವರ್ಣ, ಪು.ಸಂ. 246
14. ಸಂದರ್ಶನ, ಜಿ.ಮಾದೇಗೌಡರೊಂದಿಗೆ ದಿನಾಂಕ (06.04.2017) ಸಂಶೋಧಕನಿಂದ
15. ಕೊಳಲು ವಾರ ಪತ್ರಿಕೆ, (1998)
16. ಆಂದೋಲನ ದಿನಪತ್ರಿಕೆ, (28.06.1998)
17. ಸಂದರ್ಶನ, ಜಿ.ಮಾದೇಗೌಡರೊಂದಿಗೆ ದಿನಾಂಕ (06.04.2017) ಸಂಶೋಧಕನಿಂದ
18. ವೆಂಕಟಪ್ಪಗೌಡ, ಕೋಣಂದೂರು, ನವ ಮೈಸೂರು ಶಿಲ್ಪ ಕೆಂಗಲ್ ಹನುಮಂತಯ್ಯ, ಪು.ಸಂ. 104–105
19. ಪಾಟೀಲ ಪುಟ್ಟಪ್ಪ, (1991), ಕರ್ನಾಟಕ ಕಥೆ, ಪು.ಸಂ. 29.31
20. ಸಾಧ್ವಿ, ಬುಧವಾರ (12.10.1955), ಸಂಚಿಕೆ 60

21. ಸ್ಪೇಷಲ್ ಬ್ರಾಂಚ್ ಅಬಸ್ಟ್ರಾಕ್ ನಂ. 22/55, 21 ಮೇ 1955, ಪು.ಸಂ. 109–110

22. ಜವರಪ್ಪಗೌಡ.ಪಿ.ಎನ್, ನನ್ನ ಜೀವನಯಾತ್ರೆ, ಪು.ಸಂ. 225

23. ಎಚ್.ಕೆ. ವೀರಣ್ಣಗೌಡ, (1974), ಬದುಕು–ಮೆಲಕು, ಪು.ಸಂ. 258

24. PMLA - Extracts debates on state reorganisation report 16 to 20, 29 to 30, Nov. 1955, part II (Bangalore, 1995) P. 46.48

25. ಸಾಧ್ವಿ, ಗುರುವಾರ, (03.11.1955), ಸಂಚಿಕೆ 80

26. ಸಾಧ್ವಿ, ಮಂಗಳವಾರ, (6.12.1955), ಸಂಚಿಕೆ 112

27. ಸಾಧ್ವಿ, ಬುಧವಾರ (07.02.1955), ಸಂಚಿಕೆ 113

28. ದಿವಾಕರ ರಂ.ರಾ. (ಸಂ.), (1992), ಕರ್ನಾಟಕ ಪರಂಪರೆ, ಪು.ಸಂ. 537

29. ಸಾಧ್ವಿ ಸೋಮವಾರ (23.01.1956), ಸಂಚಿಕೆ 154

30. ನಾಗಭೂಷಣ ತಿಲಾರಿ (ಸಂ.), (1973), ಕರ್ನಾಟಕ ವೈಭವ ಪು.ಸಂ. 39

31. ವೆಂಕಟಪ್ಪಗೌಡ ಕೋಣಂದೂರು (ಸಂ.), (1981), ಜೀವಂತಜ್ವಾಲೆ, ಪು.ಸಂ. 163–164

32. ದೇಜಗೌ (ಸಂ.), (1994), ಸುವರ್ಣ ಮಂಡ್ಯ, 242–243

33. ದೇಜಗೌ (ಸಂ.), (1994), ಪೂರ್ವೋಕ್ತ, ಪು.ಸಂ. 247–248

34. ಗೋವಿಂದರಾಜು.ಸಿ.ಆರ್, (1979), ಕನ್ನಡ ಚಳುವಳಿಗಳು, ಪು.ಸಂ. 62–63

35. ಶಂಕರಗೌಡ.ಕೆ.ಬಿ. (ಪ್ರ.ಸಂ.), ಸಾಹಸಿಯಾತ್ರೆ, ಪು. 278

36. ಪೌರವಾಣಿ, (25.04.1982)

37. ಸುವರ್ಣ ಭಾರತೀ, (2012), ಪು.ಸಂ. 74

38. ರಾಗೌ (ಸಂ.), (2010), ಪು.ಸಂ. 82

39. ರಾಮಕೃಷ್ಣ.ಮಾ., (2005), ಪೂರ್ವೋಕ್ತ ಪು.ಸಂ. 57

40. ನಾಗರಾಜು.ಸಿ.ಪಿ, ಹಳ್ಳಿಗಾಡಿನ ರುವಾರಿ, ಪು.ಸಂ. 59

41. ಅದೇ, ಪು.ಸಂ. 55

42. ಸಂದರ್ಶನ ಜಿ.ಮಾದೇಗೌಡರೊಂದಿಗೆ (06.04.2017), ಸಂಶೋಧಕನಿಂದ

43. ಸಂದರ್ಶನ ಜಿ.ಮಾದೇಗೌಡರೊಂದಿಗೆ (06.04.2017), ಸಂಶೋಧಕನಿಂದ

44. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (14 ಜುಲೈ 1978), ಪು.ಸಂ. 445–446

45. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (14 ಜುಲೈ 1979), ಪು.ಸಂ. 450–451

46. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (23 ಮಾರ್ಚ್ 1985), ಪು.ಸಂ. 480
47. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (10 ಫೆಬ್ರವರಿ 1982), ಪು.ಸಂ. 150–154
48. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ Vol. xxxxv-L.A. 48 (12 ಫೆಬ್ರವರಿ 1982), ಪು.ಸಂ. 374–377
49. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ 9 ಜೂನ್ 1982, Vol. xxxxviii-L.A. 48 (6 ಫೆಬ್ರವರಿ), ಪು.ಸಂ. 41–43
50. ಅದೇ ಪು.ಸಂ. 16
51. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (17 ಜೂನ್ 1982), ಪು.ಸಂ. 242–243
52. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (17 ಜೂನ್ 1982), ಪು.ಸಂ. 244–245
53. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಜೂನ್ 1982), Vol. LII-L.A. 61, (7 ಜುಲೈ, 1982) ಪು.ಸಂ. 481–483
54. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (7 ಜುಲೈ 1982), ಪು.ಸಂ. 484–486
55. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (1 ಆಗಸ್ಟ್ 1985), ಪು.ಸಂ. 393–405
56. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಅಸೆಂಬ್ಲಿ ಡಿಬೇಟ್, ಪ್ರೊಸಿಡಿಂಗ್ಸ್, (10 ಫೆಬ್ರವರಿ 1987), ಪು.ಸಂ. 233–236
57. ಕರ್ನಾಟಕ ರಾಜ್ಯ ಲೆಜಿಸ್ಟೇಟಿವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (30 ಮಾರ್ಚ್ 1988), ಪು.ಸಂ. 337–342

# ಅಧ್ಯಾಯ–ಮೂರು

# ಜಿ.ಮಾದೇಗೌಡರ ರಾಜಕೀಯ ಜೀವನ ಹಾಗೂ ಸದನದ ಚರ್ಚೆಗಳು

3.1 ಜಿ.ಮಾದೇಗೌಡರ ರಾಜಕೀಯ ಪ್ರವೇಶದ ಹಿನ್ನೆಲೆ

3.2 ತಾಲ್ಲೂಕು ಬೋರ್ಡ್ ಸದಸ್ಯರಾಗಿ ಜಿ.ಮಾದೇಗೌಡರು (1959–1962)

3.3 ವಿಧಾನಸಭಾ ಸದಸ್ಯರಾಗಿ ಜಿ.ಮಾದೇಗೌಡರು (1962–1989)

3.4 ಮೈಸೂರು ಸಕ್ಕರೆ ಕಾರ್ಖಾನೆಯ ಅಧ್ಯಕ್ಷರಾಗಿ ಜಿ.ಮಾದೇಗೌಡರು (1969–1971)

3.5 ಅರಣ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರಾಗಿ ಜಿ.ಮಾದೇಗೌಡರು

3.6 ಲೋಕಸಭಾ ಸದಸ್ಯರಾಗಿ ಜಿ.ಮಾದೇಗೌಡರು (1989–1995)

3.7 ಸದನದಲ್ಲಿ ಜಿ.ಮಾದೇಗೌಡರ ಚಿಂತನೆ ಹಾಗೂ ವಿಚಾರಾಧಾರೆಗಳು

# ಅಧ್ಯಾಯ–ಮೂರು

# ಜಿ.ಮಾದೇಗೌಡರ ರಾಜಕೀಯ ಜೀವನ ಹಾಗೂ ಸದನದ ಚರ್ಚೆಗಳು

ರಾಜ್ಯಶಾಸ್ತ್ರದ ಪಿತಾಮಹನಾದ ಅರಿಸ್ಟಾಟಲ್ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವಂತೆ ಮಾನವ ಸಮಾಜಜೀವಿ, ಸಂಘಜೀವಿ ಅಂತೆಯೇ ರಾಜಕೀಯ ಜೀವಿಯೂ ಹೌದು. ಈ ಕಾರಣದಿಂದಾಗಿ ಸಮುದಾಯದ ಸಾಂಗತ್ಯವನ್ನು ಬಯಸುವ ಯಾವುದೇ ವ್ಯಕ್ತಿ ರಾಷ್ಟ್ರದ ರಾಜಕೀಯದಲ್ಲಿ ಆಸಕ್ತಿ ಹೊಂದಿರುತ್ತಾನೆ. ಮಾನವನ ಈ ಸಹಜ ಆಸಕ್ತಿಯು ರಾಷ್ಟ್ರದಲ್ಲಿ ಅಸ್ತಿತ್ವದಲ್ಲಿರುವ ಯಾವುದಾದರೊಂದು ರಾಜಕೀಯ ಪಕ್ಷವೊಂದರಲ್ಲಿ ಗುರುತಿಸಿಕೊಂಡು ಅದರ ಕ್ರಿಯಾಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡರೆ ಅಂತಹ ವ್ಯಕ್ತಿಯನ್ನು ರಾಜಕಾರಣಿ ಎಂದು ಸಾಮಾನ್ಯವಾಗಿ ಕರೆಯಲಾಗುತ್ತದೆ. ರಾಜಕೀಯವೆಂದರೆ ಹೆಚ್ಚಿನ ಜವಾಬ್ದಾರಿಯುತ ಅಧಿಕಾರ ಎಂದಿದ್ದಾರೆ. ಈ ಚಿಂತಕರ ಅಭಿಪ್ರಾಯಕ್ಕೆ ಪೂರಕವಾಗಿ ಜಿ.ಮಾದೇಗೌಡರು ಸಮುದಾಯದ ಅಭಿವೃದ್ಧಿಗಾಗಿ ರಾಜಕೀಯ ಕ್ಷೇತ್ರವನ್ನು ಆಯ್ಕೆಮಾಡಿಕೊಂಡು ತಾಲ್ಲೂಕು ಬೋರ್ಡ್ ಸದಸ್ಯರಾಗುವ ಮೂಲಕ ರಾಜಕೀಯ ಜೀವನವನ್ನು ಆರಂಭಿಸುತ್ತಾರೆ. ಕ್ರಮೇಣ ವಿಧಾನಸಭಾ ಸದಸ್ಯರಾಗಿ, ಅರಣ್ಯ ಮತ್ತು ಗಣಿ ಮತ್ತು ಭೂ ವಿಜ್ಞಾನ ಸಚಿವರಾಗಿ, ಲೋಕಸಭಾ ಸದಸ್ಯರಾಗಿ ಸತತವಾಗಿ ಜನಸೇವೆಯಲ್ಲಿ ತಮ್ಮ ಜೀವನವನ್ನು ಮುಡುಪಾಗಿಟ್ಟರು. ವಿಧಾನಸಭೆಯ ಸದನದಲ್ಲಿ ಗಾಂಧೀಜಿಯ ತತ್ವಗಳ ಅನುಷ್ಠಾನ, ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗಾಗಿ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ, ರೈತರ ಜೀವನ ಸ್ವಾವಲಂಬನೆಯಿಂದ ಕೂಡಿರುವಂತೆ, ಮಹಿಳೆಯರ ಸಬಲೀಕರಣಕ್ಕಾಗಿ, ಯುವಜನಾಂಗದ ಸನ್ಮಾರ್ಗದಲ್ಲಿ ನಡೆಯುವಂತೆ ಉದ್ಯೋಗ ಸೃಷ್ಟಿಸುವುದಕ್ಕಾಗಿ ತಮ್ಮ ಚಿಂತನೆಗಳ ಮೂಲಕ ಸದನದ ಸಭಾಧ್ಯಕ್ಷರು, ಸಚಿವರು, ಮುಖ್ಯಮಂತ್ರಿಗಳನ್ನು ಪ್ರಶ್ನಿಸುತ್ತಾ ಪರಿಹಾರವನ್ನು ಕಂಡುಹಿಡಿದಿರುವುದನ್ನು ಸಂಶೋಧನೆಯ ಮೂಲಕ ದೃಢೀಕರಿಸಲಾಗಿದೆ.

ಜಿ.ಮಾದೇಗೌಡರು ರಾಜಕಾರಣದಲ್ಲಿ ಮಹಾತ್ಮ ಗಾಂಧೀಜಿಯವರ ಮೌಲ್ಯ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡು ಅವರ ತತ್ವಸಿದ್ಧಾಂತಗಳನ್ನು ಅನುಷ್ಠಾನ ಮಾಡಲು ಪ್ರಯತ್ನಿಸಿದ ರಾಜಕಾರಣಿಯಾಗಿದ್ದಾರೆ. ಅಲ್ಲದೆ ಅಮೇರಿಕಾದ ಮಾಜಿ ಅಧ್ಯಕ್ಷರು ಹಾಗೂ ರಾಜಕೀಯ ತಜ್ಞರೂ ಆಗಿದ್ದ ಜಾನ್.ಎಫ್.ಕೆನಡಿ ಅವರ ವಾಣಿಯಂತೆ ರಾಷ್ಟ್ರ ನನಗಾಗಿ ಏನು ಮಾಡಿದೆ ಎಂಬುದು ಮುಖ್ಯವಲ್ಲ. ರಾಷ್ಟ್ರಕ್ಕಾಗಿ ನಾನು ಏನು ಮಾಡಿದ್ದೇನೆ ಎಂಬುದು ಮುಖ್ಯ ಎಂಬ ವ್ಯಾಖ್ಯೆಗೆ ಪೂರಕವಾಗಿ ಗೌಡರು ಮಂಡ್ಯ ಜಿಲ್ಲೆಯ ಸಮುದಾಯದ ಅಭಿವೃದ್ಧಿಯಲ್ಲಿ ಅಪ್ರತಿಮ ಸಾಧನೆಗೈದು ಇನ್ನೂ ಆ ನಿಟ್ಟಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಪ್ರಮುಖ ನಾಯಕರಾಗಿದ್ದಾರೆ.

ಪ್ರಚಲಿತ ರಾಜಕೀಯ ವಿದ್ಯಾಮಾನವನ್ನು ಕೂಲಂಕಷವಾಗಿ ಗಮನಿಸುವುದಾದರೆ ರಾಜಕಾರಣಿಗಳಲ್ಲಿ ಎರಡು ವರ್ಗಗಳನ್ನು ಕಾಣಬಹುದಾಗಿದೆ. ಅದರಲ್ಲಿ ಮೊದಲನೆಯ ವರ್ಗ ಮುತ್ಸದ್ಧಿಗಳಿಂದ ಕೂಡಿರುವುದಾದರೆ, ಎರಡನೆಯ ವರ್ಗ ರಾಜಕಾರಣಿಗಳಿಂದ ಕೂಡಿದೆ. ಮುತ್ಸದ್ಧಿಯಾದವನು ಮುಂದಿನ ಜನಾಂಗದ ಸರ್ವತೋಮುಖ ಅಭಿವೃದ್ಧಿಯ ಬಗ್ಗೆ ಚಿಂತಿಸಿದರೆ. ರಾಜಕಾರಣಿ ಮುಂದಿನ ಚುನಾವಣೆಯ ಬಗ್ಗೆ ಯೋಚಿಸುತ್ತಾನೆ. ಮುತ್ಸದ್ಧಿಯು ರಾಜಕಾರಣಿಕ್ಕಿಂತ ಮೇಲ್ಪಟ್ಟ ವ್ಯಕ್ತಿಯಾಗುತ್ತಾನೆ. ಈ ಮೇಲಿನ ಎರಡು ವರ್ಗಗಳಿಗೆ ಜಿ.ಮಾದೇಗೌಡರನ್ನು ತುಲನೆ ಮಾಡಿ ನೋಡುವುದಾದರೆ ಇವರು ಮುತ್ಸದ್ಧಿ ವರ್ಗಕ್ಕೆ ಸೇರ್ಪಡೆಯಾಗುತ್ತಾರೆ. ತಮ್ಮ ರಾಜಕೀಯ ಪ್ರವೇಶದ ದಿನದಿಂದ ಪ್ರಸ್ತುತ ರಾಜಕೀಯ ಸನ್ನಿವೇಶದವರೆಗೂ, ಕರ್ನಾಟಕ ರಾಜ್ಯದ, ಮಂಡ್ಯ ಜಿಲ್ಲೆಯ ಜನರ ಸರ್ವಾಂಗೀಣ ಅಭಿವೃದ್ಧಿ ಹಾಗೂ ಅವರ ಅಭ್ಯುದಯಕ್ಕಾಗಿ ಅನುಗಾಲವು ಚಿಂತಿಸಿ. ಅದೇ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿ ತಾವು ಮೇಳೈಯಿಸಿಕೊಂಡ ಆದರ್ಶಗಳನ್ನು ಸಾಫಲ್ಯಗೊಳಿಸಲು ಕೈಗೊಂಡ ಸಾಧನಾ ಕಾರ್ಯಗಳ ಮೇಲೆ ಸ್ಪಷ್ಟ ಬೆಳಕನ್ನು ಚೆಲ್ಲುತ್ತವೆ.

## 3.1 ಜಿ.ಮಾದೇಗೌಡರ ರಾಜಕೀಯ ಪ್ರವೇಶದ ಹಿನ್ನೆಲೆ

ಮಧ್ಯಮವರ್ಗದ ಸಾಮಾನ್ಯ ಕುಟುಂಬದಲ್ಲಿ ಜನಿಸಿದ ಜಿ.ಮಾದೇಗೌಡರು, ವಿದ್ಯಾರ್ಥಿ ಜೀವನದಿಂದಲೇ ಅಧ್ಯಯನದ ಜೊತೆ ಜೊತೆಗೆ, ರಾಜಕೀಯ ಪ್ರಜ್ಞೆ ಹಾಗೂ ದಕ್ಷ ಹೋರಾಟದ ನಾಯಕತ್ವವನ್ನು ಮೈಗೂಡಿಸಿ ಕೊಂಡಿದ್ದರು. ಶಿವಪುರ ಸತ್ಯಾಗ್ರಹ ಸಭೆಯಲ್ಲಿ ದಣಿದ ಸಭಿಕರೆಲ್ಲರಿಗೂ ನೀರು ವಿತರಿಸುವ ಕಾಯಕದಿಂದ[1] ಹೋರಾಟ ಆರಂಭಿಸಿ. ನಾನೊಬ್ಬ ದೇಶದ ಹಾಗೂ ನಾಡಿನ ಹಿತಕ್ಕಾಗಿ ಟೊಂಕ ಕಟ್ಟಿ ನಿಲ್ಲುವ ನಾಯಕನಾಗ ಬಲ್ಲವನೆಂಬ ತತ್ವಗಳನ್ನು ಅಂದೇ ರೂಢಿಸಿಕೊಂಡಿದ್ದರು. ಇವರ ದೇಶ ಸೇವಾ ಮನೋಭಾವ ವಿದ್ಯುಕ್ತವಾಗಿ ಇಲ್ಲಿಂದ ಪ್ರಾರಂಭವಾಯಿತು. 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಕರಪತ್ರ ವಿತರಣೆ[2] ಮಾಡುವ ಮೂಲಕ ಮಂಡ್ಯ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ಹಾಗೂ ರಾಜಕೀಯ ದಿಗ್ಗಜರಾದ ಕೆ.ವಿ.ಶಂಕರಗೌಡ ಮತ್ತು ಹೆಚ್.ಕೆ.ವೀರಣ್ಣಗೌಡರ ಗಮನ ಸೆಳೆದಿದ್ದರು. ನಂತರದ ದಿನಗಳಲ್ಲಿ ಅವರುಗಳ ಶಿಷ್ಯರಾಗಿ ಅವರ ಎಲ್ಲಾ ಸಾಮಾಜಿಕ ಕಾರ್ಯಗಳ ಸಂಘಟನೆಯಲ್ಲಿ ಸಕ್ರಿಯರಾದರು. 1958ರಲ್ಲಿ ಕಾನೂನು ಪದವಿ ಮುಗಿದ ನಂತರ ಮಂಡ್ಯದಲ್ಲಿ ವಕೀಲರಾಗಿ ವೃತ್ತಿಯನ್ನು ಪ್ರಾರಂಭಿಸಿದರು. ಇದೇ ಸಂದರ್ಭ ಮಂಡ್ಯ ಜಿಲ್ಲೆಯ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳು ಸೊರಗಿದ್ದು, ಇವುಗಳಿಗೆ ತಕ್ಕ ಕಾಯಕಲ್ಪವನ್ನು ನೀಡಬಲ್ಲ ಪ್ರಗತಿಪರ, ಚಿಂತನಾಶೀಲ ಹಾಗೂ ಸಂವೇದನಾತ್ಮಕ ವ್ಯಕ್ತಿತ್ವದ ರಾಜಕೀಯ ಮುತ್ಸದ್ಧಿಯನ್ನು ನಿರೀಕ್ಷೆಯಿಂದ ತವಕಿಸುತ್ತಿದ್ದವು. ಈ ಸಂದರ್ಭ ಈಗಾಗಲೇ ಉಲ್ಲೇಖಿಸಿದ

ಗುಣಗಳ ಮೂರ್ತಿರೂಪವಾಗಿ ರಾಜಕೀಯ ಕ್ಷೇತ್ರಕ್ಕೆ ಜಿ.ಮಾದೇಗೌಡರ ಪ್ರವೇಶವಾಯಿತು. ಇದೇ ಸಮಯಕ್ಕೆ 1959ರಲ್ಲಿ ಮದ್ದೂರು ತಾಲ್ಲೂಕು ಬೋರ್ಡ್ ಚುನಾವಣೆ ಘೋಷಣೆಯಾದ ಹಿನ್ನೆಲೆಯಲ್ಲಿ ಕೆ.ವಿ.ಶಂಕರಗೌಡ ಮತ್ತು ಹೆಚ್.ಕೆ.ವೀರಣ್ಣಗೌಡರ ದೂರದೃಷ್ಟಿಯಿಂದ ಭವಿಷ್ಯದ ನಾಯಕತ್ವನ್ನು ಜಿ.ಮಾದೇಗೌಡರಲ್ಲಿ ನಿರೀಕ್ಷಿಸಿ ತಾಲ್ಲೂಕು ಬೋರ್ಡ್ ಚುನಾವಣೆಗೆ ಅಭ್ಯರ್ಥಿಯಾಗಿ ಆಯ್ಕೆ ಮಾಡಿ ಅವಕಾಶವನ್ನು ಕಲ್ಪಿಸಿದರು. ಅನೇಕ ರಾಜಕೀಯ ಧುರೀಣರ ಸಹಕಾರದೊಂದಿಗೆ ಜಿ.ಮಾದೇಗೌಡರು ತಾಲ್ಲೂಕು ಬೋರ್ಡ್ ಚುನಾವಣೆಯಲ್ಲಿ ಜಯಗಳಿಸಿದರು. ಇದರಿಂದಾಗಿ ತಮ್ಮ ಮದ್ದೂರು ಕ್ಷೇತ್ರದಲ್ಲಿನ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸಮಸ್ಯೆಗಳಿಗೆ ರಾಜಕೀಯ ಹೋರಾಟದ ಮೂಲಕ ಪರಿಹಾರ ಕಂಡುಕೊಳ್ಳಲು ಸಹಕಾರಿಯಾಯಿತು. ನಂತರದ ದಿನಗಳಲ್ಲಿ ತಮ್ಮ ರಾಜಕೀಯ ಗುರುಗಳ ಮಾರ್ಗದರ್ಶನ ಮತ್ತು ಗಾಂಧೀಜಿಯವರ ತತ್ವ ಸಿದ್ಧಾಂತಗಳಿಂದ ಪ್ರಭಾವಿತರಾಗಿ ಉತ್ತಮ ರಾಜಕೀಯ ನಾಯಕರಾಗಿ ರೂಪುಗೊಂಡರು. 1962 ರಿಂದ 1989 ರವರೆಗೆ ಕಿರುಗಾವಲು ಕ್ಷೇತ್ರದಿಂದ ವಿಧಾನಸಭೆಗೆ ಆರು ಬಾರಿ ಸತತವಾಗಿ ಆಯ್ಕೆಯಾಗಿ ನಂತರ 1989 ರಿಂದ 1995 ರವರೆಗೆ ಎರಡು ಭಾರಿ ಮಂಡ್ಯ ಜಿಲ್ಲೆಯ ಲೋಸಕಭಾ ಸದಸ್ಯರಾಗಿ ಆಯ್ಕೆಯಾಗಿ ಮಂಡ್ಯ ಜಿಲ್ಲೆಯ ಅಭಿವೃದ್ಧಿಯಲ್ಲಿ ಅಪಾರವಾದ ಕೊಡುಗೆ ನೀಡಲು ಪ್ರಯತ್ನಿಸಿದರು. ಮುತ್ಸದ್ಧಿಯಾದ ಜಿ.ಮಾದೇಗೌಡರು ಆಧುನಿಕ ಪ್ರಜಾಪ್ರಭುತ್ವದ ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಅನೇಕ ಅಧಿಕಾರ ಸ್ಥಾನಮಾನಗಳನ್ನು ನಿರ್ವಹಿಸಿ ರೈತರ ಹಿತ ಕಾಯುವ ಕಾರ್ಯಗಳಿಗೆ, ಗ್ರಾಮಗಳ ಅಭಿವೃದ್ಧಿಗಾಗಿ, ಬಡಮಕ್ಕಳ ಶಿಕ್ಷಣಕ್ಕಾಗಿ, ಮಹಿಳೆಯ ಸಬಲೀಕರಣಕ್ಕಾಗಿ ಶ್ರಮವನ್ನ ಧಾರೆ ಎರೆದಿದ್ದಾರೆ ಹಾಗೂ ತಮ್ಮ ಜೀವನದ ಬಹುಭಾಗವನ್ನು ಜನರ ಜೀವನದ ಏಳ್ಗೆಗಾಗಿ ಮುಡುಪಾಗಿಟ್ಟಿರುವು ದನ್ನು ನೋಡಬಹುದಾಗಿದೆ.

## 3.2 ತಾಲ್ಲೂಕು ಬೋರ್ಡ್ ಸದಸ್ಯರಾಗಿ ಜಿ.ಮಾದೇಗೌಡರು (1959–1962)

ಪಂಚಾಯತ್ ರಾಜ್ ವ್ಯವಸ್ಥೆಯಡಿಯಲ್ಲಿ ಅಧಿಕಾರ ವಿಕೇಂದ್ರೀಕರಣದ ಎರಡನೆಯ ಹಂತವಾದ ತಾಲ್ಲೂಕು ಬೋರ್ಡ್‌ನ ಸದಸ್ಯರಾಗಿ 1959ರಲ್ಲಿ ಮದ್ದೂರು ಕ್ಷೇತ್ರದಿಂದ ಇವರು ಆಯ್ಕೆಯಾದರು. ನಂತರ ಸದರಿ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ಮತ್ತು ಪಟ್ಟಣದ ಸರ್ವತೋಮುಖ ಅಭಿವೃದ್ಧಿಗೆ ಒತ್ತುಕೊಟ್ಟು ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ರಸ್ತೆ ಚರಂಡಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬೀದಿ ದೀಪಗಳ ವ್ಯವಸ್ಥೆ, ಗುಡಿ ಕೈಗಾರಿಕೆಗಳಿಗೆ ಹಾಗೂ ಜಾನುವಾರುಗಳಿಗೆ ಕುಡಿಯುವ ನೀರಿಗಾಗಿ ಕೆರೆ–ಕಟ್ಟೆಗಳ ನಿರ್ಮಾಣ ಕಾರ್ಯಕ್ಕೆ ಮೊದಲ ಆದ್ಯತೆಯನ್ನು ನೀಡಿದರು.

ಇವರು ತಾಲ್ಲೂಕು ಬೋರ್ಡ್ ಸದಸ್ಯರಾದ ಸಂದರ್ಭದಲ್ಲಿ ಕ್ಷೇತ್ರದ ಜನತೆ ಅನಕ್ಷರತೆ, ಬಡತನದ, ಅನೈರ್ಮಲ್ಯತೆಯ ಕಾರಣಗಳಿಂದಾಗಿ ಮಾರಣಾಂತಿಕ ಕಾಯಿಲೆಗಳಿಗೆ ತುತ್ತಾಗಿದ್ದರು. ಈ ಅಂಶಗಳನ್ನು ಮನಗಂಡ ಜಿ.ಮಾದೇಗೌಡರು ಇವುಗಳ ಪರಿಹಾರಕ್ಕೆ ಹಂತ ಹಂತವಾಗಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು.[3]

ಅಂತೆಯೇ ಗ್ರಾಮೀಣ ಕೃಷಿಕರ, ನಿರ್ಗತಿಕರ, ಅನಕ್ಷರಸ್ಥರ, ಶೋಷಿತರ ಧ್ವನಿಯಾಗಬೇಕೆಂಬ ಹಂಬಲ ನೂರಡ್ಮಿಯಾಯಿತು. ಆದರೆ ತಮ್ಮ ಹಂಬಲವನ್ನು ಅನುಷ್ಠಾನಗೊಳಿಸಲು ತಮಗಿದ್ದ ಅಧಿಕಾರ ವ್ಯಾಪ್ತಿ ಮತ್ತು ಕಾರ್ಯಕ್ಷೇತ್ರ ಕಿರಿದಾಯಿತು ಎಂಬ ಭಾವನೆ ಅವರಲ್ಲಿ ಮೊಳೆಯಲಾರಂಭಿಸಿತು. ಅದೇ ಸಮಯಕ್ಕೆ 1962ರಲ್ಲಿ ವಿಧಾನಸಭಾ ಚುನಾವಣೆ ಮಳವಳ್ಳಿ ಮತ್ತು ಕಿರುಗಾವಲು ಜಂಟಿ ಕ್ಷೇತ್ರದಲ್ಲಿ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನಿಂದ ಅಭ್ಯರ್ಥಿಯಾಗುವುದರ ಮೂಲಕ ಚುನಾವಣೆಯಲ್ಲಿ ಸ್ಪರ್ಧಿಸಿದರು. ಅಲ್ಲದೆ ಜಯಗಳಿಸಿದರು. ಮುಂದೆ ಸತತವಾಗಿ ಆರು ಭಾರಿ ವಿಧಾನಸಭೆಯಲ್ಲಿ ಶಾಸಕರಾಗಿ ಆಯ್ಕೆಗೊಂಡರು. ಅರಣ್ಯ ಮತ್ತು ಗಣಿ ಮತ್ತು ಭೂ ವಿಜ್ಞಾನ ಸಚಿವರಾದರು. ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡರು. ಅವರು ವಿಧಾನಸಭೆ ಚುನಾವಣೆಯ ಅಭ್ಯರ್ಥಿಯಾಗಿ ಎದುರಿಸಿದ ಸವಾಲುಗಳು, ಅಂದಿನ ರಾಜಕಿಯ ಪರಿಸ್ಥಿತಿಗಳು, ಪಕ್ಷದ ಸ್ಥಿತಿಗತಿಗಳು, ಜನರ ಅಭಿಪ್ರಾಯಗಳು, ರಾಜಕೀಯ ನಾಯಕರ ಅಭಿಪ್ರಾಯಗಳು, ರಾಜಕೀಯ ಏರಿಳಿತಗಳನ್ನು ಸಂಶೋಧನೆಯಿಂದ ಅವಲೋಕಿಸಲಾಗಿದೆ.

## 3.3 ವಿಧಾನಸಭಾ ಸದಸ್ಯರಾಗಿ ಜಿ.ಮಾದೇಗೌಡರು (1962–1989)

### ಪ್ರಥಮ ಬಾರಿಗೆ ವಿಧಾನಸಭಾ ಸದಸ್ಯರಾಗಿ ಆಯ್ಕೆ (1962–1967)

ಕರ್ನಾಟಕ ರಾಜ್ಯದ ಮಂಡ್ಯ ಜಿಲ್ಲೆಯ ಕಿರುಗಾವಲು ವಿಧಾನಸಭಾ ಕ್ಷೇತ್ರವನ್ನು ಪ್ರತಿನಿಧಿಸುತ್ತಿದ್ದರು ಪ್ರಸ್ತುತ ಈ ಕ್ಷೇತ್ರವು ರದ್ದಾಗಿದೆ. ಈ ಕ್ಷೇತ್ರದಲ್ಲಿ ಗುರುದೇವರಹಳ್ಳಿ ಮಾದೇಗೌಡರು 1962 ರಿಂದ 1989 ರವರೆಗೆ ವಿಧಾನಸಭೆಗೆ ಸತತವಾಗಿ ಆರು ಬಾರಿ ಶಾಸಕರಾಗಿ ಆಯ್ಕೆಯಾಗಿ ಸೋಲಿಲ್ಲದ ಸರದಾರ ಎಂದು ಪ್ರಖ್ಯಾತಗೊಂಡರು. ಪ್ರತಿ ಚುನಾವಣೆಯಲ್ಲಿಯೂ ತಮ್ಮ ವಿಧಾನಸಭಾ ಕ್ಷೇತ್ರವಾದ ಕಿರುಗಾವಲಿನಲ್ಲಿ ಅತೀ ಹೆಚ್ಚು ಮತಗಳಿಂದ ಜಯಗಳಿಸಿದ್ದು, ಈ ಗೆಲುವಿಗೆ ಅವರ ನಿಷ್ಪಕ್ಷಪಾತವಾದ ಹಾಗೂ ಯಾವುದೇ ತಾರತಮ್ಯ ಭಾವನೆಗಳಿಗೆ ಅವಕಾಶ ನೀಡಿದೆ ಈ ಕ್ಷೇತ್ರದ ಜನರು ಅವರನ್ನು ಬೆಂಬಲಿಸುತ್ತಿದ್ದರು ಎಂಬುದನ್ನು ಕಾಣಬಹುದಾಗಿದೆ. ಒಬ್ಬ ಶಾಸಕ ತನ್ನ ಕ್ಷೇತ್ರದ ಸಮುದಾಯದ ಅಭಿವೃದ್ಧಿಗೆ ಏನೆಲ್ಲಾ ಮಾಡಬಹುದು ಎಂಬುದನ್ನು ಗೌಡರ ರಾಜಕೀಯ

ಜೀವನದಿಂದ ತಿಳಿಯಬಹುದು. ಈ ಹಿನ್ನೆಲೆಯಲ್ಲಿ ಜಿ.ಮಾದೇಗೌಡರ ರಾಜಕೀಯ ಸಾಧನೆಗಳನ್ನು ವಿಶ್ಲೇಷಿಸಲಾಗಿದೆ.

1962ರಲ್ಲಿ ಮಳವಳ್ಳಿ, ಕಿರುಗಾವಲು ಜಂಟಿ ವಿಧಾನಸಭಾ ಕ್ಷೇತ್ರದ ಚುನಾವಣೆಯಲ್ಲಿ ಜಿ.ಮಾದೇಗೌಡರು ಭಾರತೀಯ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ, ಪ್ರಜಾ ಸಮಾಜವಾದಿ ಪಕ್ಷದ ಅಭ್ಯರ್ಥಿಯಾದ ಎಂ.ಸಿ.ದೊಡ್ಡಯ್ಯನವರ ವಿರುದ್ಧ 10,020 ಮತಗಳ ಅಂತರದಲ್ಲಿ ಜಯಗಳಿಸಿದರು[4]. ತಮ್ಮ 34ನೆಯ ವಯಸ್ಸಿಗೆ ಶಾಸಕರಾಗಿ ಆಯ್ಕೆಯಾದ ವಿಧಾನಸಭೆಯ ಕಿರಿಯ ಶಾಸಕ ಎಂಬ ಹೆಗ್ಗಳಿಕೆಗೆ ಪಾತ್ರರಾದರು. 1962ರಲ್ಲಿ ಕಿರುಗಾವಲು ಕ್ಷೇತ್ರದ ಶಾಸಕರಾಗಿ ಆಯ್ಕೆಯಾದ ಪ್ರಾರಂಭದಲ್ಲಿಯೇ ಬಡತನ, ಶಿಕ್ಷಣ, ನಿರುದ್ಯೋಗ, ಆಹಾರ ಮತ್ತು ಆರೋಗ್ಯ ಸಮಸ್ಯೆ, ನೀರಿನ ಸಮಸ್ಯೆ, ಒಟ್ಟಾರೆಯಾಗಿ ಕೃಷಿ ಸಮಸ್ಯೆಗಳನ್ನು ಸ್ವತಃ ಅನುಭವಿಸಿದ ಗೌಡರು ಈ ಎಲ್ಲಾ ಸಮಸ್ಯೆಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಿದರು.

1962 ರಲ್ಲಿ ಪ್ರಪ್ರಥಮವಾಗಿ ಶಾಸಕರಾಗಿ ಆಯ್ಕೆಯಾದ ಜಿ.ಮಾದೇಗೌಡರಿಗೆ ಈ ಶಾಸಕ ಪದವಿಯೆಂಬುದು ರೈತ ಸಮುದಾಯದವರ, ಕಾರ್ಮಿಕರ, ಶೋಷಿತರ ಹಾಗೂ ಕ್ಷೇತ್ರದ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ದುಡಿಯಲು ಒಂದು ಸಾಧನವಾಯಿತು. ಕ್ಷೇತ್ರದ ಜನತೆಗೆ ಅಕ್ಷರ ಜ್ಞಾನಕ್ಕಾಗಿ ಉನ್ನತ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿದ ನಂತರ ಗೌಡರ ದೃಷ್ಟಿ ಜನತೆಯ ಆರ್ಥಿಕ ಸಬಲೀಕರಣದತ್ತ ಹರಿಯಿತು. ರೈತರು ಬೆಳೆಯುತ್ತಿದ್ದ ಕಬ್ಬನ್ನು ಮಂಡ್ಯ ನಗರದಲ್ಲಿರುವ ಮೈಸೂರು ಸಕ್ಕರೆ ಕಾರ್ಖಾನೆಗೆ ಸಾಗಿಸಲು ಅನುಭವಿಸುತ್ತಿದ್ದ ರೈತರ ಕಷ್ಟಗಳನ್ನು ಹತ್ತಿರದಿಂದ ಗಮನಿಸಿದ ಗೌಡರಿಗೆ ಈ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿಯುವ ನಿಟ್ಟಿನಲ್ಲಿ ಆಹೋರಾತ್ರಿ ಯೋಜನೆಯನ್ನು ರೂಪಿಸಿದರು. ಅದರಲ್ಲಿ ಪ್ರಮುಖವಾಗಿ ಕಾಳಮುದ್ದನದೊಡ್ಡಿಯಲ್ಲಿ ಸಹಕಾರಿ ಸಂಘದಡಿಯಲ್ಲಿ ಭಾರತೀ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ನಿರ್ಧರಿಸಿದರು[5]. ಸಕ್ಕರೆ ಕಾರ್ಖಾನೆಯನ್ನು ಜರೂರಾಗಿ ಸ್ಥಾಪಿಸುವ ನಿಟಿನಲ್ಲಿ ಅಗತ್ಯ ಯೋಜನಾ ವರದಿಯನ್ನು ಸಿದ್ಧಪಡಿಸಿಕೊಂಡು ಲೈಸೆನ್ಸ್ ಕೋರಿ ಒಂದನೇ ಮೇ 1964ರಂದು ಮೈಸೂರು ರಾಜ್ಯ ಸರ್ಕಾರದ ಮೂಲಕ ಕೇಂದ್ರ ಸರ್ಕಾರಕ್ಕೆ ಅಗತ್ಯ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿದರು. ಅಂದು ಕೇಂದ್ರ ಸರ್ಕಾರದಿಂದ ಸಕ್ಕರೆ ಕೈಗಾರಿಕೆ ಲೈಸೆನ್ಸ್ ಪಡೆಯುವುದು ತುಂಬಾ ಕಷ್ಟದ ಕೆಲಸವಾಗಿತ್ತು. ಆದರೆ ಗೌಡರು ಛಲ ಬಿಡದೆ ರಾಜ್ಯ ಮತ್ತು ಕೇಂದ್ರದ ಸಂಬಂಧಪಟ್ಟ ಸಚಿವರ ಜೊತೆ ಮಾತುಕತೆ ನಡೆಸಿ, ಆಡಳಿತಾತ್ಮಕವಾಗಿ ಪತ್ರ ವ್ಯವಹಾರ ನಡೆಸಿ, ಲೈಸೆನ್ಸ್ ಪಡೆಯುವಲ್ಲಿ ಸಫಲರಾದರು. ಆದರೆ ರೈತರ ಸಹಕಾರಿ ಸಂಸ್ಥೆಯಡಿ ಆರ್ಥಿಕ ಮುಗ್ಗಟ್ಟಿನಿಂದ ಕಾರ್ಖಾನೆಯನ್ನು ಸ್ಥಾಪಿಸಲಾಗಲಿಲ್ಲ. ಬದಲಿಗೆ ತಮಿಳುನಾಡು ರಾಜ್ಯದ ಕೈಗಾರಿಕೋದ್ಯಮಿಯಿಂದ

ಕಾರ್ಖಾನೆ ಪ್ರಾರಂಭಿಸಲಾಯಿತು. ಕಾರ್ಖಾನೆ ಸ್ಥಾಪಿಸಲು ಜಿ.ಮಾದೇಗೌಡರು ನಡೆಸಿದ ಹೋರಾಟ ಮತ್ತು ರಾಜಕೀಯ ಅಧಿಕಾರವನ್ನು ಬಳಸಿಕೊಂಡ ರೀತಿ ಪರಿಣಾಮಕಾರಿಯಾದುದು ಎಂದು ಕ್ಷೇತ್ರಕಾರ್ಯದಲ್ಲಿ ಕಂಡುಬರುತ್ತದೆ.

**ಎರಡನೇ ಬಾರಿಗೆ ವಿಧಾನಸಭಾ ಸದಸ್ಯರಾಗಿ ಆಯ್ಕೆ (1967–1972)**

1967ರಲ್ಲಿ ನಡೆದ ವಿಧಾನಸಭಾ ಚುನಾವಣೆಗೆ ಜಿ.ಮಾದೇಗೌಡರು ಎರಡನೇ ಅವಧಿಗೆ ಪುನರಾಯ್ಕೆ ಬಯಸಿ ಭಾರತೀಯ ಕಾಂಗ್ರೆಸ್ ಪಕ್ಷದಿಂದ ಅಭ್ಯರ್ಥಿಯಾಗಿ ಕಣಕ್ಕಿಳಿದರು. ಈ ಚುನಾವಣೆಯಲ್ಲಿ ಜಿ.ಮಾದೇಗೌಡರಿಗೆ ಕಠಿಣ ಸವಾಲು ಎದುರಾಯಿತು. ಅಂತಿಮ ಘಳಿಗೆಯಲ್ಲಿ ಇವರ ವಿರುದ್ಧ ಪಕ್ಷೇತರ ಅಭ್ಯರ್ಥಿಯಾಗಿ ನಿಂತವರು ಇವರ ರಾಜಕೀಯ ಗುರು ಹೆಚ್.ಕೆ.ವೀರಣ್ಣಗೌಡರು.[6] ಈ ಚುನಾವಣೆಯಲ್ಲಿ ಜಿ.ಮಾದೇಗೌಡರಿಗೆ ಕ್ಷೇತ್ರದ ಜನತೆ ಚುನಾವಣಾ ಖರ್ಚಿಗೆ ಬೇಕಾದ ಹಣವನ್ನು ಮತ್ತು ಚುನಾವಣೆಯಲ್ಲಿ ಜಯಗಳಿಸಲು ಬೇಕಾದ ಅತ್ಯಮೂಲ್ಯವಾದ ಮತಗಳನ್ನು ಕೊಟ್ಟು ಹೆಚ್.ಕೆ. ವೀರಣ್ಣಗೌಡರನ್ನು 15,338 ಮತಗಳ ಅಂತರದಲ್ಲಿ ಸೋಲಿಸಿ ಜಿ.ಮಾದೇಗೌಡರನ್ನು ಎರಡನೇ ಅವಧಿಗೆ ಪುನರಾಯ್ಕೆ ಮಾಡಿದರು. ಇವರ ಸಾರ್ವಜನಿಕ ಕ್ಷೇತ್ರ ಮತ್ತಷ್ಟು ವಿಸ್ತರಿಸಿತು. ಈ ಚುನಾವಣೆಯ ವಿಶೇಷವೆಂದರೆ ತಮ್ಮ ರಾಜಕೀಯ ಗುರುಗಳನ್ನು ಚುನಾವಣೆಯಲ್ಲಿ ಎದುರಿಸಬೇಕಾಯಿತು. ಈ ಸಂದರ್ಭದಲ್ಲಿ ತಮ್ಮ ಚಾಣಾಕ್ಷ ನಡೆಯ ಮೂಲಕ ಗುರುವನ್ನು ಸೋಲಿಸಿದರು. ಇದಕ್ಕೆ ಕಾರಣ ಮೊದಲನೇ ಅವಧಿಯಲ್ಲಿ ಇವರ ನಿರ್ವಹಿಸಿದ ಕಾರ್ಯಗಳು ಜನಮೆಚ್ಚುಗೆ ಗಳಿಸಿದ್ದು, ಇವರನ್ನು ಜನರು ಪುನರಾಯ್ಕೆ ಮಾಡಿದರು. ಪುನರಾಯ್ಕೆಯಾದ ಜಿ.ಮಾದೇಗೌಡರು ಮೊದಲನೇ ಅವಧಿಯಲ್ಲಿ ಅಪೂರ್ಣಗೊಂಡ ಕಾರ್ಯಗಳನ್ನು ಪೂರ್ಣಗೊಳಿಸುವಲ್ಲಿ ಶ್ರಮವಹಿಸಿದರು. ಅದರಲ್ಲಿ ಮೊದಲನೇಯದಾಗಿ ಕಾಳಮುದ್ದನದೊಡ್ಡಿಯಲ್ಲಿ 'ಭಾರತೀ ಸಕ್ಕರೆ ಕಾರ್ಖಾನೆ' ಸ್ಥಾಪನೆ ಮಾಡುವ ಸಂಬಂಧ ರಾಜ್ಯ ಮತ್ತು ಕೇಂದ್ರ ಸರ್ಕಾರದ ಜೊತೆ ಪತ್ರ ವ್ಯವಹಾರಗಳನ್ನು ಮುಂದುವರೆಸಿದರು[7]. ಈ ಅವಧಿಯು ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಲೈಸೆನ್ಸ್ ಪಡೆಯಲು ನಿರ್ಣಾಯಕ ಅವಧಿಯಾಗಿತ್ತು. ಕೇಂದ್ರದಲ್ಲಿ ಇಂದಿರಾಗಾಂಧಿ ಸರ್ಕಾರದಲ್ಲಿ ಜಗಜೀವನರಾಂ ಅವರು ಆಹಾರ ಮತ್ತುಕೃಷಿ ಸಚಿವರಾಗಿದ್ದರು. ಇವರನ್ನು ಪತ್ರದ ಮೂಲಕ ಕಾರ್ಖಾನೆ ಸ್ಥಾಪಿಸಲು ಅಗತ್ಯವಾಗಿ ಲೈಸೆನ್ಸ್ ನೀಡುವಂತೆ ಹಾಗೂ ಭಾರತ ಸರ್ಕಾರದ ಯೋಜನಾ ಆಯೋಗದ ಉಪಾಧ್ಯಕ್ಷರಿಗೂ ಪತ್ರವನ್ನು ಬರೆದು ಸಹಾಯ ಕೋರಿದರು. ಇಷ್ಟೆಲ್ಲಾ ಪ್ರಯತ್ನಗಳಿಗೂ ಅವರ ರಾಜಕೀಯ ನಾಯಕತ್ವದ ಚಿಂತನೆ ಶಕ್ತಿಯಾಯಿತು ಎಂಬುದು ಕಂಡುಬರುತ್ತದೆ.

ಜಿ.ಮಾದೇಗೌಡರು ಪ್ರತಿನಿಧಿಸುತ್ತಿದ್ದ ಕ್ಷೇತ್ರದ ಜನರು ತಮ್ಮ ಕೃಷಿ ಚಟುವಟಿಕೆಗೆ ಅಗತ್ಯವಿದ್ದ ನೀರಿನ ಸಮಸ್ಯೆಯಿಂದ ಬಳಲುತ್ತಿರುವುದನ್ನು ಕಣ್ಣಾರೆ ಕಂಡರು. ಅದಕ್ಕೆ

ಪರಿಹಾರವಾಗಿ ಕೃಷ್ಣರಾಜ ಸಾಗರದ ವಿಶ್ವೇಶ್ವರಯ್ಯ ನಾಲಾ ನೀರನ್ನು ಕಿರುಗಾವಲು ಭೂ ಪ್ರದೇಶದ ಕಟ್ಟಕಡೆಯವರೆಗೂ ಹರಿಸಬೇಕೆಂಬ ಸಂಕಲ್ಪವನ್ನ ಗೈದರು. ಅದಕ್ಕೆ ಪೂರಕವಾಗಿ ಕಾಲುವೆಗಳನ್ನು ಲೈನಿಂಗ್ ಮಾಡಿಸಿ, ವಿಸ್ತರಿಸಿ, ಕಡೆಯ ಭಾಗಕ್ಕೂ ನೀರು, ಕೃಷಿ ಚಟುವಟಿಕೆಗಳಿಗೆ ತಲುಪುಂತೆ ಮಾಡಿದರು[8]. ಜೊತೆಗೆ ರೈತರಿಗೆ ಕಡಿಮೆ ದರದಲ್ಲಿ ವ್ಯವಸಾಯಕ್ಕೆ ಬೇಕಾದ ಸಾಲ ಸೌಲಭ್ಯ ದೊರೆಯುವಂತೆ ಮಾಡಲು ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸಲು ಕಾರಣರಾದರು. ಅಲ್ಲದೆ ತಾವೇ ಖುದ್ದಾಗಿ ನಿಂತು ರೈತರ ಸಮಸ್ಯೆಗಳನ್ನು ಬಗೆಹರಿಸಿದರು.

## 3.4 ಮೈಸೂರು ಸಕ್ಕರೆ ಕಾರ್ಖಾನೆಯ ಅಧ್ಯಕ್ಷರಾಗಿ ಜಿ.ಮಾದೇಗೌಡರು (1969–1971)

ಮಂಡ್ಯ ಜಿಲ್ಲೆಯ ಕಿರುಗಾವಲು ವಿಧಾನಸಭಾ ಕ್ಷೇತ್ರದಿಂದ ಎರಡನೇ ಬಾರಿಗೆ ಆಯ್ಕೆಯಾಗಿ ಶೈಕ್ಷಣಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಆಮೂಲಾಗ್ರ ಬದಲಾವಣೆಗೆ ಮುನ್ನುಡಿ ಬರೆದಿದ್ದ ಜಿ.ಮಾದೇಗೌಡರನ್ನು ಅಂದಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರ ಸರ್ಕಾರ ಮೈಸೂರು ಸಕ್ಕರೆ ಕಾರ್ಖಾನೆಯ ಅಧ್ಯಕ್ಷರ ಹುದ್ದೆಗೆ ಇವರನ್ನು ಗುರುತಿಸಿದರು. ಜಿಲ್ಲೆಯ ರೈತರ ಆಶಾಕಿರಣವಾಗಿದ್ದ ಸಕ್ಕರೆ ಕೈಗಾರಿಕೆಯ ಹಾಗೂ ಈಗಾಗಲೇ ಕಾರ್ಯನಿರ್ವಹಿಸಿದ ಅಧ್ಯಕ್ಷರು ಮತ್ತು ಆಡಳಿತಾಧಿಕಾರಿಗಳ ದುರಾಡಳಿತದ ಫಲವಾಗಿ ನಷ್ಟದಲ್ಲಿ ನಡೆಯುತ್ತಿದ್ದ ಹಾಗೂ ಕಬ್ಬು ಸರಬರಾಜು ಮಾಡಿದ ರೈತರಿಗೆ ಹಣ ಬಟವಾಡೆ ಮಾಡಲು ಸಾಧ್ಯವಾಗದ ಪರಿಸ್ಥಿತಿ ಮತ್ತು ನೌಕರರಿಗೂ ಸಂಬಳ ನೀಡಲು ಸಾಧ್ಯವಾಗದ ದುಸ್ಥಿತಿಯಲ್ಲಿದುದ್ದು ಇದಕ್ಕಾಗಿ ಗೌಡರನ್ನು ಅಧ್ಯಕ್ಷರನ್ನಾಗಿ ಆಯ್ಕೆಮಾಡಿ ಈ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಸರ್ಕಾರ ತೀರ್ಮಾನಿಸಿತು.

ಜಿ.ಮಾದೇಗೌಡರು ಸಕ್ಕರೆ ಕಾರ್ಖಾನೆಯ ಅಧ್ಯಕ್ಷರಾಗಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲರಿಂದ ನೇಮಕಗೊಂಡ ನಂತರ ಕಾರ್ಖಾನೆಯ ಆರ್ಥಿಕ ಸ್ಥಿತಿಯನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು. ರೈತರ, ಕಾರ್ಮಿಕರ ಹಾಗೂ ಕಾರ್ಖಾನೆಯ ಸ್ಥಿತಿ–ಗತಿಗಳನ್ನು ಅರಿತಿದ್ದ ಜಿ.ಮಾದೇಗೌಡರು ಈ ಎಲ್ಲಾ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕಾರ್ಯಕ್ರಮ ರೂಪಿಸಿದರು. ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಿದ ಮೊದಲ ದಿನವೇ ಕಾರ್ಖಾನೆಗೆ ಸೇರಿದ ಬಿಳಿದೇಗಲು, ಹೊಸೂರು ಬಳಿ ಇದ್ದ ಎಪ್ಪತ್ತೈದು ಎಕರೆ ತೋಟ ಮತ್ತು ಎಪ್ಪತ್ತಕ್ಕಿಂತ ಹೆಚ್ಚು ಮನೆಗಳಿಂದ್ದ ಜಾಗವನ್ನು ಹರಾಜು ಮಾಡಲು ಅಂದು ಟೆಂಡರ್ ಕರೆಯಲಾಗಿತ್ತು. ಈ ಸ್ಥಳಕ್ಕೆ ಅವರು ಕಂಪನಿಯ ಕಾರ್ಯದರ್ಶಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವ ಹೊತ್ತಿಗಾಗಲೇ ಆ

ಸ್ಥಳದಲ್ಲಿ ನೂರಾರು ಬಿಡ್‌ದಾರರು ಜಮಾಯಿಸಿದ್ದರು. ಸವಿಸ್ತಾರವಾದ ಆ ಸ್ಥಳವನ್ನು ವೀಕ್ಷಿಸಿದ ಜಿ.ಮಾದೇಗೌಡರು ಈ ಜಾಗವನ್ನು ಸಾರ್ವಜನಿಕ ಉದ್ದೇಶಕ್ಕೆ ಬಳಸಿಕೊಂಡರೆ ಸೂಕ್ತ ಎಂಬ ದೂರದೃಷ್ಟಿಯಿಂದ, ತಕ್ಷಣ ಹರಾಜು ಪ್ರಕ್ರಿಯೆಯನ್ನು ತಮ್ಮ ಕಾರ್ಯದರ್ಶಿಗೆ ಮೂಲಕ ಆದೇಶಿಸಿ ನಿಲ್ಲಿಸಿದರು. ತರುವಾಯ ತಮ್ಮ ರಾಜಕೀಯ ಗುರುಗಳಾಗಿದ್ದ ಕೆ.ವಿ.ಶಂಕರಗೌಡರನ್ನು ಭೇಟಿಮಾಡಿ ಬಿಳಿದೇಗಲು ಹೊಸೂರು ಜಾಗವನ್ನು ಸಾರ್ವಜನಿಕ ಉದ್ದೇಶಕ್ಕೆ ಉಪಯೋಗಿಸಿಕೊಳ್ಳುವ ಬಗೆಗೆ ವಿಸ್ತೃವಾಗಿ ಚರ್ಚಿಸಿ, ರೋಗಿಗಳಿಗೆ ಕ್ಷಯರೋಗ ಆಸ್ಪತ್ರೆ ತೆರೆದರೆ ಉಪಯೋಗವಾಗುತ್ತದೆ ಎಂಬ ಅಂಶವನ್ನು ಕೆ.ವಿ.ಶಂಕರಗೌಡರಿಗೆ ಮನದಟ್ಟು ಮಾಡುವ ಮೂಲಕ ಒಪ್ಪಿಗೆಯನ್ನು ಪಡೆದರು. ನಂತರ ಅಂದಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರನ್ನು ಸಂಪರ್ಕಿಸಿ ಕ್ಷಯರೋಗ ಆಸ್ಪತ್ರೆ ಸ್ಥಾಪನೆ ಪ್ರಸ್ತಾವನೆಯನ್ನು ತಿಳಿಸಿ ಅವರ ಅನುಮತಿಯನ್ನು ಪಡೆಯಲು ಯಶಸ್ವಿಯಾದರು. ಮುಖ್ಯಮಂತ್ರಿಗಳ ನಿರ್ದೇಶನದ ಮೇರೆಗೆ ಆಗಿನ ಆರೋಗ್ಯ ಮಂತ್ರಿಗಳಾದ ವೈ.ರಾಮಕೃಷ್ಣ ಅವರು ವಾರದೊಳಗೆ ಬಂದು ಸ್ಥಳ ಪರಿಶೀಲನೆ ಮಾಡಿ ಈ ಸ್ಥಳದಲ್ಲಿ ಆಸ್ಪತ್ರೆ ಸ್ಥಾಪಿಸಲು ಸೂಕ್ತ ಜಾಗ ಎಂದು ಸರ್ಕಾರಕ್ಕೆ ಸಕಾರಾತ್ಮಕವಾಗಿ ವರದಿಯನ್ನು ನೀಡಿದರು. ಸದರಿ ವರದಿಯನ್ನು ನೀಡಿದ ಹದಿನೈದು ದಿವಸಗಳಲ್ಲಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲರಿಂದ ಬಿಳಿದೇಗಲು ಹೊಸೂರಿನಲ್ಲಿ ಮಹಾತ್ಮಗಾಂಧಿ ಸ್ಮಾರಕ ಕ್ಷಯ ಮತ್ತು ಎದೆರೋಗಗಳ ಆಸ್ಪತ್ರೆಯನ್ನು ಉದ್ಘಾಟಿಸಲಾಯಿತು[9]. ಈ ಸಾಮಾಜಿಕ ಕಾರ್ಯವನ್ನು ಸಾಧಿಸಿದ ಜಿ.ಮಾದೇಗೌಡರು ಸುತ್ತ–ಮುತ್ತಲ ಹಳ್ಳಿಯ ಜನರಿಗಳಿಗೆ ಆರೋಗ್ಯಕ್ಕಾಗಿ ಪರಿಹಾರ ರೂಪಿಸಿದಂತಾಯಿತು. ಮುಂದಿನ ಸಾಧನೆಗಳಿಗೆ ಸ್ಫೂರ್ತಿಸಿಕ್ಕಂತಾಯಿತು. ಸಕ್ಕರೆ ಕಾರ್ಖಾನೆಗೆ ಸರ್ಕಾರದಿಂದ ಅನುದಾನ ತರುವ ನಿಟ್ಟಿನಲ್ಲಿ ಕಾರ್ಯಪ್ರವೃತರಾಗಿ ಮುಖ್ಯಮಂತ್ರಿಗಳನ್ನು ಸಂಪರ್ಕಿಸಿ, ಅನುದಾನ ಬಿಡುಗಡೆ ಮಾಡಿಸಿಕೊಂಡು ಕಬ್ಬು ಸರಬರಾಜು ಮಾಡಿದ ರೈತರಿಗೆ ಹದಿನೈದು ದಿನಗಳೊಳಗಾಗಿ ಹಣ ಸಂದಾಯವಾಗುವಂತೆ ಮತ್ತು ಕಾರ್ಖಾನೆಯ ನೌಕರರಿಗೆ ಪ್ರತಿ ತಿಂಗಳು ವೇತನ ಪಾವತಿಯಾಗುವಂತೆ ಕ್ರಮಕೈಗೊಂಡರು.

**ಮೂರನೇ ಬಾರಿಗೆ ವಿಧಾನಸಭಾ ಸದಸ್ಯರಾಗಿ ಆಯ್ಕೆ (1972–1978)**

1972ರ ವಿಧಾನಸಭಾ ಚುನಾವಣೆಯ ವೇಳೆಗೆ ಆಂತರಿಕ ಕಚ್ಚಾಟಗಳಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ನಾಯಕಿ ಇಂದಿರಾಗಾಂಧಿ ಹಾಗೂ ಕರ್ನಾಟಕದ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಎಸ್.ನಿಜಲಿಂಗಪ್ಪ ಅವರ ನಡುವೆ ವೈಮನಸ್ಸಿನಿಂದಾಗಿ ಪಕ್ಷವು ವಿಭಜನೆಗೊಂಡಿತು[10]. ಕೆ.ವಿ.ಶಂಕರಗೌಡರ ನಾಯಕತ್ವದಲ್ಲಿ ಸಂಸ್ಥಾ ಕಾಂಗ್ರೆಸ್ (ಓ)ನಲ್ಲಿ ಗುರುತಿಸಿಕೊಂಡಿದ್ದ ಜಿ.ಮಾದೇಗೌಡರು ಅದೇ ಪಕ್ಷದಿಂದ 1972ರ ವಿಧಾನಸಭಾ ಚುನಾವಣೆಯಲ್ಲಿ ಅಭ್ಯರ್ಥಿಯಾದರು. ಇಂದಿರಾ ಕಾಂಗ್ರೆಸ್‌ನಲ್ಲಿ

ಗುರುತಿಸಿಕೊಂಡಿದ್ದ ಯುವ ತರುಣ ಸಂಘಟನಾ ಚತುರ ಕೆ.ಎನ್.ನಾಗೇಗೌಡರು ಕಾಂಗ್ರೆಸ್ (ಆರ್) ಪಕ್ಷದ ಅಭ್ಯರ್ಥಿಯಾಗಿ ಕಣಕ್ಕಿಳಿದರು. ಈ ಚುನಾವಣೆ ಸ್ಪರ್ಧೆಯ ನಿರ್ಣಾಯಕ ಹಂತದಲ್ಲಿ ಕೆ.ಎನ್.ನಾಗೇಗೌಡರನ್ನು 2010 ಮತಗಳ ಅಂತರದಲ್ಲಿ ಮಣಿಸಿ ಜಿ.ಮಾದೇಗೌಡರು ಜಯಗಳಿಸಿದರು[11].

ಈ ಚುನಾವಣೆಯಲ್ಲಿ ಮೂರನೇ ಬಾರಿಗೆ ಆಯ್ಕೆಯಾಗಿ ಹ್ಯಾಟ್ರಿಕ್ ವಿಜಯ ಸಾಧಿಸಿದ ಜಿ.ಮಾದೇಗೌಡರಿಗೆ ಕ್ಷೇತ್ರದ ಜನತೆಯ ಬಗ್ಗೆ ನಂಬಿಕೆ ಹಾಗೂ ಆತ್ಮವಿಶ್ವಾಸ ನೂರ್ಮಡಿಯಾಯಿತು. ಇಡೀ ದೇಶದಲ್ಲಿಯೇ ಇಂದಿರಾಗಾಂಧಿಯವರ ಅಲೆ ಬಿರುಗಾಳಿಯಂತೆ ಎದ್ದಿತು. ಆದರೂ ಸಹ ಜಿ.ಮಾದೇಗೌಡರು ಜಯಶಾಲಿಯಾದರು. ಕ್ಷೇತ್ರದ ಜನತೆ ತಮಗೇ ಮತಕೊಟ್ಟು ಆಯ್ಕೆ ಮಾಡಿದ್ದಾರೆ ಎಂಬ ಮನೋಭಾವದಿಂದ ಕ್ಷೇತ್ರದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರದ ಸರ್ವಾಂಗೀಣ ಅಭಿವೃದ್ಧಿಗೆ ಕಾರ್ಯೋನ್ಮುಖರಾದರು. ಮೂಲಭೂತ ಸೌಕರ್ಯಗಳಾದ ಸಾರಿಗೆ, ರಸ್ತೆ, ಚರಂಡಿ, ನೀರು, ಆರೋಗ್ಯ, ಶಿಕ್ಷಣ, ಕೃಷಿ ಕ್ಷೇತ್ರಕ್ಕೆ ಹೆಚ್ಚು ಒತ್ತು ಕೊಟ್ಟರು.

ಇವರ ಇನ್ನೊಂದು ಪ್ರಕರಣವನ್ನು ಗಮನಿಸುವುದಾದರೆ 1977–1978ನೇ ಇಸವಿಯಲ್ಲಿ ಕಾಂಗ್ರೆಸ್ (ಓ)ದ ಪಕ್ಷವನ್ನು ಬಿಟ್ಟು ಜನತಾ ಪಕ್ಷವನ್ನು ಸೇರಿದಾಗ ಜಿಲ್ಲೆಯ ಮತ್ತು ಕ್ಷೇತ್ರದ ಹಾಗೂ ಕಾರ್ಯಕರ್ತರು ಕಾಂಗ್ರೆಸ್ (ಓ) ಪಕ್ಷವನ್ನು ಬಿಡಬೇಡಿ ಎಂದು ಮುಷ್ಕರ ಹೂಡಿ ದೊಡ್ಡ ಹೋರಾಟವನ್ನು ರೂಪಿಸಿ ಸಾರ್ವಜನಿಕ ಸಭೆಯನ್ನು ಏರ್ಪಡಿಸಿದಾಗ ಗುರುದೇವರಹಳ್ಳಿ ಮಾದೇಗೌಡರು ಸಭೆಯನ್ನುದ್ದೇಶಿಸಿ ಮಾತನಾಡುತ್ತಾ, 'ರೀ, ನಾನು ಯಾವ ಪಕ್ಷದಲ್ಲಿ ಇದ್ದರೂ ನಿಮಗೆ ಬೇಕಿರುವುದು ಜನಪರ ಸೇವೆಯನ್ನ ಮಾಡುವುದು. ಅದನ್ನು ಎಲ್ಲಾ ಸಂದರ್ಭದಲ್ಲೂ ನಾನೇ ಖುದ್ದು ನಿಂತು ನೇರವಾಗಿ ನಿರ್ವಹಿಸಿಕೊಡುತ್ತೇನೆ. ಯಾವ ಮುಖ್ಯಮಂತ್ರಿಗೂ ಸೊಪ್ಪು ಹಾಕುವುದಿಲ್ಲ ಜನಹಿತದ ಕೆಲಸ ಅಂಥ ಗೊತ್ತಾದರೆ ಕತ್ತಿನ ಪಟ್ಟಿ ಹಿಡಿದು ಕೆಲಸ ಮಾಡಿಸುವ ಕಲೆ ನನಗೆ ಗೊತ್ತಿದೆ ಯೋಚನೆ ಮಾಡಬೇಡಿ ಎಂದು ಕ್ಷೇತ್ರದ ಜನ ಮಾನಸದಲ್ಲಿ ಧೈರ್ಯವನ್ನು ತುಂಬಿ ಹುರಿದುಂಬಿಸಿದರು. ರಾಜ್ಯದಲ್ಲಿ ಯಾವುದೇ ಪಕ್ಷದ ಸರ್ಕಾರ ಅಸ್ತಿತ್ವದಲ್ಲಿದ್ದರೂ ಸಹ ಜಿಲ್ಲೆಯ ಮತ್ತು ಕ್ಷೇತ್ರದ ಜನ ಸಮುದಾಯದ ಅಭಿವೃದಿಗಾಗಿ ಜನ ಗೌಡರನ್ನು ಬೆಂಬಲಿಸಿ ಆಯ್ಕೆ ಮಾಡಿರುವುದನ್ನು ಸಂಶೋಧನೆಯಿಂದ ಅವಲೋಕಿಸಬಹುದು.[12] ಪಕ್ಷಕ್ಕಿಂತ ವ್ಯಕ್ತಿಯು ನಿರ್ವಹಿಸುವ ಕಾರ್ಯಗಳಿಂದ ಪಕ್ಷದ ಮೇಲೆ ಪ್ರಭಾವ ಬೀರಿ ವ್ಯಕ್ತಿಯು ದೊಡ್ಡದಾಗಿ ಬೆಳೆಯಬಹುದು ಎಂಬುದಕ್ಕೆ ಜಿ.ಮಾದೇಗೌಡರು ಉದಾಹರಣೆಯಾಗಿದ್ದಾರೆ. ಇದಕ್ಕೆ ಕಾರಣ ಗೌಡರ ಸೇವಾ ಮನೋಭಾವವೇ ಕಾರಣವಾಗಿದೆ.

**ನಾಲ್ಕನೇ ಬಾರಿ ವಿಧಾನಸಭಾ ಸದಸ್ಯರಾಗಿ ಆಯ್ಕೆ (1978–1983)**

1978ರ ವಿಧಾನಸಭಾ ಚುನಾವಣೆಯ ವೇಳೆಗೆ ಸಂಸ್ಥಾ ಕಾಂಗ್ರೆಸ್ ನಾಯಕರುಗಳು ಜನತಾ ಪಕ್ಷಕ್ಕೆ ಸೇರ್ಪಡೆಗೊಳ್ಳುತ್ತಾರೆ. ಈ ಚುನಾವಣೆಯಲ್ಲಿ ಜಿ.ಮಾದೇಗೌಡರು ಜನತಾ ಪಕ್ಷದ ಅಭ್ಯರ್ಥಿಯಾಗಿ ನಾಲ್ಕನೇ ಬಾರಿ ಶಾಸಕರಾಗಲು ಚುನಾವಣೆಗೆ ಧುಮುಕಿದರು. ಈ ಚುನಾವಣೆಯಲ್ಲಿ ಕಾಂಗ್ರೆಸ್‌ನಿಂದ ದಾಸನದೊಡ್ಡಿ ರಾಮೇಗೌಡ ಪಕ್ಷೇತರವಾಗಿ, ಮಾಜಿ ಶಾಸಕ ಬಿ.ಪಿ.ನಾಗರಾಜಮೂರ್ತಿ ಸ್ಪರ್ಧಿಸಿದರು. ಈ ಮೂವರ ನಡುವಿನ ಸ್ಪರ್ಧೆಯಲ್ಲಿ ಕಾಂಗ್ರೆಸ್‌ನ ದಾಸನದೊಡ್ಡಿ ರಾಮೇಗೌಡ ಅವರನ್ನು 21,241[13] ಮತಗಳ ಅಂತರದಿಂದ ಸೋಲಿಸುವುದರ ಮೂಲಕ ಜಿ.ಮಾದೇಗೌಡರು ನಾಲ್ಕನೇ ಬಾರಿಗೆ ಶಾಸಕರಾಗಿ ಆಯ್ಕೆಯಾದರು.

## 3.5 ಅರಣ್ಯ ಗಣಿ ಮತ್ತು ಭೂವಿಜ್ಞಾನ ಸಚಿವರಾಗಿ ಜಿ.ಮಾದೇಗೌಡರು (1980–1983)

1978ರ ವಿಧಾನಸಭಾ ಚುನಾವಣೆ ಜಿ.ಮಾದೇಗೌಡರ ಪಾಲಿಗೆ ಅದೃಷ್ಟದ ಚುನಾವಣೆ ಎಂದೇ ಹೇಳಬಹುದು. ಈ ಚುನಾವಣೆಯಲ್ಲಿ ಆಯ್ಕೆಯಾದ ಎರಡು ವರ್ಷಗಳ ನಂತರ ಅಂದರೆ 1980ರ ಮಧ್ಯಭಾಗದಲ್ಲಿ ಮುಖ್ಯಮಂತ್ರಿ ಆರ್.ಗುಂಡೂರಾವ್ ಅವರ ಸಚಿವ ಸಂಪುಟದಲ್ಲಿ ಅರಣ್ಯ, ಗಣಿ ಮತ್ತು ಭೂ ವಿಜ್ಞಾನ ಸಚಿವರಾಗಿ ನೇಮಕಗೊಂಡರು. ಸಾಮಾಜಿಕ ನ್ಯಾಯಕ್ಕೆ ಆದ್ಯತೆಯನ್ನು ನೀಡುತ್ತಿದ್ದ ಗುಂಡೂರಾವ್ ಅವರು ಜಿ.ಮಾದೇಗೌಡರ ಉತ್ತಮ ಗುಣಗಳನ್ನು ಹತ್ತಿರದಿಂದ ಬಲ್ಲವರಾಗಿದ್ದ ಕಾರಣದಿಂದಾಗಿ ಇವರ ಮೇಲೆ ವಿಶ್ವಾಸವಿಟ್ಟು ಸಚಿವರನ್ನಾಗಿ ಮಾಡಿದರು[14]. ಜಿ.ಮಾದೇಗೌಡರು 1980ರ ಮಧ್ಯಭಾಗದಿಂದ 1983 ರವರೆಗೆ ಅಂದರೆ ಸುಮಾರು ಎರಡೂವರೆ ವರ್ಷಗಳ ಕಾಲ ಅರಣ್ಯ, ಗಣಿ ಮತ್ತು ಭೂ ವಿಜ್ಞಾನ ಸಚಿವರಾಗಿ ಇಲಾಖೆಯಲ್ಲಿ ಗಮನಾರ್ಹವಾದ ಸಾಧನೆಯನ್ನು ಮಾಡಿ ಇಲಾಖೆಯಲ್ಲಿ ಅಮೂಲಾಗ್ರಹವಾದ ಬದಲಾವಣೆ ಹಾಗೂ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಇವರ ಸಾಧನೆಗಳ ಮೇಲೆ ಈ ಕೆಳಕಂಡಂತೆ ಬೆಳಕು ಚೆಲ್ಲಬಹುದಾಗಿದೆ. ಸುಮಾರು ವರ್ಷಗಳಿಂದಲೂ ಒಂದೇ ಜಾಗದಲ್ಲಿ ಅರಣ್ಯಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಿಬ್ಬಂದಿ ವರ್ಗದವರಿಗೆ ಗರಿಷ್ಠ ಮೂರು ವರ್ಷಗಳ ಅವಧಿ ನಿಗದಿಪಡಿಸಿ, ಮೂರು ವರ್ಷಗಳ ನಂತರ ಬೇರೊಂದು ಸ್ಥಳಕ್ಕೆ ವರ್ಗಾಯಿಸುವುದು ಎಂಬ ಕಾನೂನನ್ನು ಜಾರಿಗೆ ತಂದರು.

ಕಾಡುಗಳ್ಳರಿಂದ ಅರಣ್ಯ ನಾಶವನ್ನು ತಪ್ಪಿಸಿ, ಅರಣ್ಯ ಸಂರಕ್ಷಣೆಗೆ ಕಠಿಣವಾದ ಕಾನೂನನ್ನು ಜಾರಿಗೆ ತಂದರು. ರಾಜ್ಯದ ಪ್ರಜೆಗಳು ತಾವೇ ನೆಟ್ಟು ಬೆಳೆಸಿದ ಮರಗಳನ್ನು ಕಡಿಯಬೇಕಾದರೂ ಕಾನೂನು ರೀತ್ಯಾ ಹತ್ತಿರದ ಅರಣ್ಯಾಧಿಕಾರಿಗಳಿಗೆ ವಿಷಯ ಮುಟ್ಟಿಸಿ ಅವರ ಅನುಮತಿ ಪಡೆದು ಮರಗಳನ್ನು ಕಡಿಯಬೇಕೆಂದು ಶಾಸನವನ್ನು ಜಾರಿಗೊಳಿಸಿದರು. ಶಾಲೆಗಳ ಆವರಣ ಹಾಗೂ ಆಸ್ಪತ್ರೆಗಳ ಅವರಣದಲ್ಲಿ ಬೆಳೆದು ನಿಂತಿರುವ ಮರಗಳನ್ನು ಕಡಿಯಲು ಕಾನೂನಿನ ಅಡಿಯಲ್ಲಿ ಕಡಿಯಬೇಕೆಂದು ನಿಯಮವನ್ನು ಸಾರ್ವತ್ರಿಕಗೊಳಿಸಿದರು. ರಾಜ್ಯದ ಹೆದ್ದಾರಿಯ ಎರಡು ಬದಿಗಳಲ್ಲಿ ಖಾಲಿ ಜಾಗವಿದ್ದಲ್ಲಿ ನೀಲಗಿರಿ, ಸಿಲ್ವರ್, ಓಕ್, ತೇಗ ಮೊದಲಾದ ಗಿಡಗಳನ್ನು ನೆಡೆಸಿದರು. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿರುವ ಶ್ರೀ ಆದಿಚುಂಚನಗಿರಿ ಧಾರ್ಮಿಕ ಕ್ಷೇತ್ರದಲ್ಲಿ ರಾಷ್ಟ್ರೀಯ ಪಕ್ಷಿಯಾದ ನವಿಲುಗಳು ಯಥೇಚ್ಛವಾಗಿದ್ದನ್ನು ಕಂಡು ಆ ವನಕ್ಕೆ 'ಮಯೂರವನ' ಎಂದು ನಾಮಕರಣ ಮಾಡಿ ನವಿಲುಗಳನ್ನು ನಿರ್ಭಯವಾಗಿ ವಾಸಿಸಲು ಮತ್ತು ಆ ಪ್ರದೇಶದ ಪ್ರಕೃತಿಯ ಸೌಂದರ್ಯ ಹೆಚ್ಚಿಸಲು ಸರ್ಕಾರದಿಂದ ಬೇಕಾದ ಅಗತ್ಯ ಆರ್ಥಿಕ ಸೌಲಭ್ಯವನ್ನು ಒದಗಿಸಿದರು. ಮಂಡ್ಯ ನಗರದಿಂದ ಆರು ಕಿಲೋ ಮೀಟರ್ ದೂರದಲ್ಲಿರುವ ಇಂಡುವಾಳು ಮೋಳೆಕೊಪ್ಪಲು ನಡುವಿನ ಪ್ರದೇಶದಲ್ಲಿ 'ಪ್ರಕೃತಿವನ' ನಿರ್ಮಿಸಿ ಜಿಂಕೆ, ಸಾರಂಗ, ನವಿಲು, ಮೊಲ ಮುಂತಾದ ಪ್ರಾಣಿ, ಪಕ್ಷಿಗಳನ್ನು ಸಾಕಲು ಅಗತ್ಯ ಸೌಲಭ್ಯ ಕಲ್ಪಿಸಿದರು[15].

ಜಿ.ಮಾದೇಗೌಡರು ಸಚಿವರಾಗಿದ್ದಾಗ ನಾಗರಹೊಳೆ ಅಭಯಾರಣ್ಯಕ್ಕೆ ರಾಜೀವ್‌ಗಾಂಧಿ ರಾಷ್ಟ್ರೀಯ ಉದ್ಯಾನವನ ಎಂದು ನಾಮಕರಣ ಮಾಡಬೇಕೆಂದು ಒತ್ತಾಯ ಮಾಡಿದರೂ ಸಹ ತಾಂತ್ರಿಕ ಕಾರಣಗಳಿಂದ ಸಾಧ್ಯವಾಗಲಿಲ್ಲ. ಆದರೆ ಮುಂದಿನ ಸರ್ಕಾರ ಆ ಆಭಯಾರಣ್ಯಕ್ಕೆ ಜಿ.ಮಾದೇಗೌಡರು ಅಂದುಕೊಂಡ ಹೆರಸರನ್ನೇ ಅಂತಿಮಗೊಳಿಸಿದ್ದರಿಂದ ಇದರ ಕೀರ್ತಿ ಗೌಡರಿಗೆ ಸಲ್ಲುತ್ತದೆ. ಹೀಗೆ ಜಿ.ಮಾದೇಗೌಡರು ಸಚಿವರಾಗಿ ಇಲಾಖೆಯ ಆಮೂಲಾಗ್ರ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಸಾರ್ವಜನಿಕರಿಗೆ ಸ್ವಚ್ಛಂದ ರಾಜಕಾರಣಿ ಎಂದು ಹೆಸರು ಪಡೆದು ಧೀಮಂತ ನಾಯಕರಾದರು.

**ಐದನೆ ಭಾರಿಗೆ ವಿಧಾನಸಭಾ ಸದಸ್ಯರಾಗಿ ಆಯ್ಕೆ (1983–1985)**

1983ರ ವಿಧಾನಸಭೆಯ ಚುನಾವಣೆಯ ವೇಳೆಗೆ ಜಿ.ಮಾದೇಗೌಡರು ಮಾತೃ ಪಕ್ಷವಾದ ಕಾಂಗ್ರೆಸ್‌ಗೆ ಮರಳಿದರು. ಸಹಜವಾಗಿಯೇ ಕಾಂಗ್ರೆಸ್ ಪಕ್ಷದಿಂದ ಟಿಕೆಟ್ ಲಭಿಸಿ ಚುನಾವಣೆಯಲ್ಲಿ ಸ್ಪರ್ಧಿಸಿ ಜನತಾ ಪಕ್ಷದ ದಾಸನದೊಡ್ಡಿಯ ರಾಮೇಗೌಡರ ವಿರುದ್ಧ 10,856[16] ಮತಗಳ ಅಂತರದಲ್ಲಿ ಜಯದ ನಗೆ ಬೀರಿದರು.

**ಆರನೇ ಬಾರಿಗೆ ವಿಧಾನಸಭಾ ಸದಸ್ಯರಾಗಿ ಆಯ್ಕೆ (1985–1989)**

1985ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಜಿ.ಮಾದೇಗೌಡರು ಹಾಗೂ ಇವರ ಪ್ರತಿಸ್ಪರ್ಧಿಯಾಗಿ ಜನತಾ ಪಕ್ಷದಿಂದ ದಾಸನದೊಡ್ಡಿ ರಾಮೇಗೌಡರು ಸ್ಪರ್ಧಿಸಿದ್ದರು. ಈ ಅಭ್ಯರ್ಥಿಗಳ ನಡುವೆ ಚುನಾವಣೆ ನಡೆದು ಅಂತಿಮವಾಗಿ 772 ಮತಗಳ ಅಂತರದಲ್ಲಿ ಗೌಡರು ಗೆಲುವು ಸಾಧಿಸಿ.[17] ಸುದೀರ್ಘ ಆರು ನಿರಾಯಾಸ ಗೆಲುವುಗಳಿಂದ ದಾಖಲೆ ನಿರ್ಮಿಸಿದ ಗೌಡರು ಕ್ಷೇತ್ರದ ಅಭಿವೃದ್ಧಿಗೆ ನಿರಂತರವಾಗಿ ಶ್ರಮಿಸಿ ಕ್ಷೇತ್ರದ ಉದ್ದಗಲಕ್ಕೂ ಕರ್ನಾಟಕ ರಾಜ್ಯ ಸರ್ಕಾರದಿಂದ ರೂಪುಗೊಂಡ ಜನಪರ ಯೋಜನೆಗಳು ಮಂಡ್ಯ ಜಿಲ್ಲೆಯ, ಜನರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿ ನಂತರದ ದಿನಗಳಲ್ಲಿ ಲೋಕಸಭೆ ಮೂಲಕ ರಾಷ್ಟ್ರ ರಾಜಕಾರಣಕ್ಕೆ ಪಾದಾರ್ಪಣೆ ಮಾಡಲು ಕಾರಣವಾಯಿತು.

## 3.6 ಲೋಕಸಭಾ ಸದಸ್ಯರಾಗಿ ಜಿ.ಮಾದೇಗೌಡರು (1989–1995)

ಜಿ.ಮಾದೇಗೌಡರು 1989ರ ವೇಳೆಗೆ ಆರು ಬಾರಿ ಕಿರುಗಾವಲು ವಿಧಾನಸಭಾ ಕ್ಷೇತ್ರದ ಚುನಾವಣೆಯಲ್ಲಿ ಆಯ್ಕೆಯಾಗಿ ಜಿಲ್ಲೆಯಲ್ಲಿ ಮತ್ತು ಕ್ಷೇತ್ರದಲ್ಲಿ ಜನಪ್ರಿಯ ಶಾಸಕರಾಗಿದ್ದರು. ಇವರ ಅಭಿವೃದ್ದಿ ಕೆಲಸಗಳು ಜಿಲ್ಲೆಗೆ ಅಷ್ಟೇ ಅಲ್ಲದೇ ರಾಜ್ಯದಲ್ಲೂ ಪ್ರಭಾವ ಬೀರಿದವು. ಇವರ ಸಮುದಾಯದ ಅಭಿವೃದ್ಧಿಯ ಕಾರ್ಯ ವೈಖರಿಯನ್ನು ಗುರುತಿಸಿದ ರಾಜ್ಯ ಮಟ್ಟದ ನಾಯಕರು ಇವರನ್ನು ಅಭಿವೃದ್ದಿಯ ಹರಿಕಾರ ಹಾಗೂ ಇವರೆ ಲೋಕಸಭಾ ಅಭ್ಯರ್ಥಿ ಎಂದು ಬಿಂಬಿಸತೊಡಗಿದರು.[18]

1989ರ ಲೋಕಸಭಾ ಚುನಾವಣೆ ಘೋಷಣೆಯಾಗುವ ಮುಂಚಿನ ದಿನಗಳಲ್ಲಿ ಕಾಂಗ್ರೆಸ್‌ನ ದೆಹಲಿ ಮಟ್ಟದ ಪ್ರಭಾವಿ ನಾಯಕರು ಈ ಸಾಲಿನ ಲೋಕಸಭಾ ಚುನಾವಣೆಗೆ ಟಿಕೆಟ್ ನೀಡಲು ಒಂದು ನಿರ್ಧಾರಕ್ಕೆ ಬಂದಿರುತ್ತಾರೆ. ಕಳೆದ ಚುನಾವಣೆಯಲ್ಲಿ ಯಾವ ಅಭ್ಯರ್ಥಿ ಐವತ್ತು ಸಾವಿರಕ್ಕೂ ಹೆಚ್ಚು ಮತಗಳಿಂದ ಪರಾಜಯ ಹೊಂದಿದ್ದಾರೋ ಅಂತಹ ಅಭ್ಯರ್ಥಿಗಳಿಗೆ ಟಿಕೆಟ್ ನೀಡಬಾರದೆಂಬ ನಿರ್ಣಯವನ್ನು ಕೈಗೊಳ್ಳಲಾಗುತ್ತದೆ. ಇದರ ಹಿನ್ನೆಲೆಯಲ್ಲಿ ಎಸ್.ಎಂ.ಕೃಷ್ಣ ಅವರಿಗೆ ಮಂಡ್ಯ ಜಿಲ್ಲೆಯ ಲೋಕಸಭಾ ಕ್ಷೇತ್ರದ ಟಿಕೆಟ್ ನಿರಾಕರಿಸಲಾಗುತ್ತದೆ. ಇಂತಹ ರಾಜಕೀಯ ಮೇಲಾಟಗಳಿಂದಾಗಿ ಜಿ.ಮಾದೇಗೌಡರಿಗೆ ಕಾಂಗ್ರೆಸ್‌ನಿಂದ ಟಿಕೆಟ್ ಲಭಿಸುವ ಸುಯೋಗ ಬಂದೊದಗುತ್ತದೆ.[19] ಹಾಗೆಯೇ ಜಿ.ಮಾದೇಗೌಡರಿಗೆ ಟಿಕೆಟ್ ದೊರೆಯಲು ಮತ್ತೊಂದು ಕಾರಣವೆಂದರೆ ದೆಹಲಿ ಮಟ್ಟದ ರಾಷ್ಟ್ರೀಯ ನಾಯಕರು ಕರ್ನಾಟಕ ರಾಜ್ಯದಲ್ಲಿ ನಡೆಸಿದ ಗೌಪ್ಯ ವರದಿಯ ಸಮೀಕ್ಷೆಯ ಆಧಾರದ ಮೇರೆಗೆ ಗೌಪ್ಯತಾ

ಸಮಿತಿಯು ಇವರ ಹೆಸರನ್ನು ಮಂಡ್ಯ ಕ್ಷೇತ್ರಕ್ಕೆ ಶಿಫಾರಸ್ಸು ಮಾಡಿದ್ದರಿಂದ ಹಾಗೂ 1989ರಲ್ಲಿ ಕರ್ನಾಟಕ ರಾಜ್ಯದ ಕಾಂಗ್ರೆಸ ಪಕ್ಷದ ಉಸ್ತುವಾರಿ ಹೊಣೆಯನ್ನು ಹೊಂದಿದ್ದ ನೆರೆಯ ಕೇರಳದ ಕರುಣಾಕರನ್‌ರವರು ಹಾಗೂ ಪ್ರಧಾನಮಂತ್ರಿ ರಾಜೀವ್‌ಗಾಂಧಿಯವರ ಆದೇಶದ ಮೇರೆಗೆ ಅಭ್ಯರ್ಥಿಯಾದರು. ಜನತಾ ಪಕ್ಷದಿಂದ ಜಾನಪದ ತಜ್ಞ ಹೆಚ್.ಎಲ್.ನಾಗೇಗೌಡರು ಸ್ಪರ್ಧಿಸಿದ್ದರು. ಈ ಚುನಾವಣೆಯಲ್ಲಿ[20] ಅವರು 74,889 ಮತಗಳ ಅಂತರದಲ್ಲಿ ಸೋಲಿಸಿ ಜಯಗಳಿಸಿದರು. ಜಿ.ಮಾದೇಗೌಡರು ಪ್ರಥಮ ಬಾರಿಗೆ ಸಂಸತ್ ಪ್ರವೇಶಿಸಿ ಅಂದಿನ ಪ್ರಧಾನಮಂತ್ರಿಗಳಾದ ಪಿ.ವಿ.ನರಸಿಂಹರಾವ್ ಅವರ ವಿಶ್ವಾಸ ಗಳಿಸಿದರು. ಕೇಂದ್ರದ ಪ್ರಭಾವಿ ನಾಯಕರುಗಳಾದ ಶರದ್‌ಪವಾರ್, ರಾಜೇಶ್ ಪೈಲಟ್, ಕರುಣಾಕರನ್, ಹೀಗೆ ಅನೇಕ ಹಿರಿಯ ನಾಯಕರುಗಳ ಸ್ನೇಹ ಗಳಿಸಿದರು. ಮಂಡ್ಯ ಜಿಲ್ಲೆಗೆ ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗಬೇಕಿದ್ದ ಅನುದಾನವನ್ನು ಬಿಡುಗಡೆಗೊಳಿಸಿದರು. ಈ ಕೆಳಕಂಡ ಯೋಜನೆಗಳನ್ನು ತಂದು ಮಂಡ್ಯ ಅಭಿವೃದ್ಧಿಗೆ ಕೊಡುಗೆಯನ್ನು ನೀಡಿದರು.

ಕೇಂದ್ರ ಸರ್ಕಾರದ ಮಹಾತ್ವಾಕಾಂಕ್ಷಿ ಯೋಜನೆಯಾದ ಸಣ್ಣ ಪಟ್ಟಣಗಳ ಅಭಿವೃದ್ಧಿ ಯೋಜನೆಯಡಿಯಲ್ಲಿ ಮಂಡ್ಯ ನಗರವನ್ನು ಸೇರಿಸಿ ಮಂಡ್ಯ ನಗರದ ಮೂಲಭೂತ ಸೌಕರ್ಯಗಳಾದ ರಸ್ತೆ, ಚರಂಡಿ, ಕುಡಿಯುವ ನೀರು, ಸಾರ್ವಜನಿಕ ಶೌಚಾಲಯ, ಉದ್ಯಾನವನಗಳ ನಿರ್ಮಾಣ, ಬಸ್ ನಿಲ್ದಾಣಗಳು ಹೀಗೆ ಹಲವಾರು ಕೆಲಸ ಕಾರ್ಯಗಳನ್ನು ಕೈಗೊಂಡು ಮಂಡ್ಯದ ಸಮಗ್ರ ಅಭಿವೃದ್ಧಿಗೆ ಶ್ರಮಿಸಿದರು. ಮಹಿಳಾ ಮತ್ತು ಮಕ್ಕಳಾಭಿವೃದ್ಧಿ ಇಲಾಖೆಯ ಅನುದಾನದಿಂದ ಭಾರತೀನಗರದಲ್ಲಿ ಒಂದು ಬೃಹತ್ ವಸತಿ ನಿಲಯವನ್ನು ನಿರ್ಮಿಸಿದರು. ಮಂಡ್ಯ ನಗರದ ಹೃದಯ ಭಾಗದಲ್ಲಿರುವ ಕ್ರೀಡಾಂಗಣದ ಸಮಗ್ರ ಅಭಿವೃದ್ಧಿಗೆ, ಕ್ರೀಡೆಗಳಿಗೆ ಹಾಗೂ ಕ್ರೀಡಾ ಆಸಕ್ತರಿಗೆ ಉತ್ತೇಜನ ನೀಡುವ ನಿಟ್ಟಿನಲ್ಲಿ ಕೇಂದ್ರ ಸರ್ಕಾರದಿಂದ ಧನ ಸಹಾಯ ಒದಗಿಸಿದರು. ತಮ್ಮ ರಾಜಕೀಯ ಗುರುಗಳಾದ ಕೆ.ವಿ.ಶಂಕರಗೌಡರು ಸ್ಥಾಪಿಸಿದ ಜನತಾ ಶಿಕ್ಷಣ ಸಂಸ್ಥೆಯ ಕ್ರೀಡಾಂಗಣದ ಅಭಿವೃದ್ಧಿಗೆ ಕೇಂದ್ರ ಸರ್ಕಾರದ ಅನುದಾನದಲ್ಲಿ ಧನ ಸಹಾಯ ಮಂಜೂರು ಮಾಡಿಸಿದರು[21]. ಹೀಗೆ ಹಲವಾರು ಸಮುದಾಯತ್ವದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಗಾಂಧೀಜಿಯವರ ತತ್ವಾದರ್ಶಗಳನ್ನು ಮೈಗೂಡಿಸಿಕೊಂಡು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಜಿ.ಮಾದೇಗೌಡರು ದುಡಿದಿದ್ದಾರೆ.

**ಎರಡನೇ ಬಾರಿಗೆ ಲೋಕಸಭಾ ಸದಸ್ಯರಾಗಿ ಆಯ್ಕೆ (1991-1995)**

ಜಿ.ಮಾದೇಗೌಡರು ಮೊದಲ ಬಾರಿಗೆ ಸಂಸತ್ ಪ್ರವೇಶಿಸಿ, ಪ್ರಧಾನ ಮಂತ್ರಿಗಳು, ಪ್ರಭಾವಿ ನಾಯಕರು ಮತ್ತು ಸಚಿವರುಗಳ ಸಂಪರ್ಕ ಬೆಳೆಸಿಕೊಂಡು ಜಿಲ್ಲೆಯ

ಅಭಿವೃದ್ಧಿಗೆ ಅತ್ಯಲ್ಪ ಅವಧಿಯಲ್ಲೇ ಹಲವಾರು ಜನಪರ ಕಾರ್ಯಗಳನ್ನು ಆಯೋಜಿಸಿದ್ದರಿಂದ ಸಹಜವಾಗಿಯೇ ಇವರ ನಾಯಕತ್ವದ ಮೇಲೆ ಜಿಲ್ಲೆಯ ಜನತೆಯ ವಿಶ್ವಾಸ ಇಮ್ಮಡಿಯಾಗಿ ಅಪಾರ ಮನ್ನಣೆ ಗಳಿಸಿದರು. ಅನಿರೀಕ್ಷಿತ ರಾಜಕೀಯ ವಿದ್ಯಮಾನಗಳಿಂದಾಗಿ ಅಲ್ಪಾವಧಿಯಲ್ಲೇ ಒಂಬತ್ತನೆಯ ಲೋಕಸಭೆಯು ವಿಸರ್ಜಿಸಲ್ಪಟ್ಟಿತು. 1991ರ ಜೂನ್ ತಿಂಗಳಲ್ಲಿ ಹತ್ತನೆಯ ಲೋಕಸಭೆಗೆಂದು ನಡೆದ ಮಧ್ಯಂತರ ಚುನಾವಣೆಗೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಹೈಕಮಾಂಡ್ ಮಂಡ್ಯ ಕ್ಷೇತ್ರದಿಂದ ಜಿ.ಮಾದೇಗೌಡರಿಗೆ ಟಿಕೆಟ್ ನೀಡಿತು. ಜನತಾ ಪಕ್ಷದಿಂದ ಹೆಚ್.ಟಿ.ಕೃಷ್ಣಪ್ಪ, ಭಾರತೀಯ ಜನತಾ ಪಕ್ಷದಿಂದ ಡಿ.ರಾಮಲಿಂಗಯ್ಯನವರು ಪ್ರತಿಸ್ಪರ್ಧಿಗಳಾಗಿ ಸ್ಪರ್ಧಿಸಿದರು. ಈ ಚುಣಾವಣೆಯಲ್ಲಿ ಬಿ.ಜೆ.ಪಿ. ಅಭ್ಯರ್ಥಿ ಡಿ.ರಾಮಲಿಂಗಯ್ಯ ಅವರ ವಿರುದ್ದ ಗುರುದೇವರಹಳ್ಳಿ ಮಾದೇಗೌಡರು 95,347 ಮತಗಳ ಅಂತರದಿಂದ ಆಯ್ಕೆಯಾದರು[22]. ಎರಡನೇ ಬಾರಿಗೆ ಲೋಕಸಭೆಗೆ ಆಯ್ಕೆಯಾದ ಮೇಲೆ ಗುರುದೇವರಹಳ್ಳಿ ಮಾದೇಗೌಡರು ಕಾವೇರಿ ಜಲವಿವಾದ ಪರಿಹಾರಕ್ಕೆ ಸಂಬಂಧಿಸಿದಂತೆ ಸಂಬಂಧಪಟ್ಟ ಕೇಂದ್ರ ಜಲಸಂಪನ್ಮೂಲ ಹಾಗೂ ಕಾನೂನು ಸಚಿವರೊಂದಿಗೆ ಸಮಾಲೋಚಿಸಿ. ಶಾಶ್ವತ ಪರಿಹಾರ ಕಂಡುಹಿಡಿಯುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾದರು. ಜೊತೆಗೆ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗದ ಮೂಲಕ ಹೋರಾಟವನ್ನು ರೂಪಿಸಿದರು. ಸಾರ್ವಜನಿಕ ಹಿತಕ್ಕಾಗಿ ಈ ಕೆಳಕಂಡ ಯೋಜನೆಗಳನ್ನು ಜನರಿಗೆ ತಲುಪಿಸಲು ಕ್ರಮಕೈಗೊಂಡರು. ಅವುಗಳೆಂದರೆ, ಸಂಸದರ ಕೋಟಾದಡಿ ವಿತರಿಸುವ ಸಾರ್ವಜನಿಕ ಅಡಿಗೆ ಅನಿಲ ಸಂಪರ್ಕವನ್ನು ಸಬ್ಸಿಡಿ ಸಹಿತವಾಗಿ ಮೂರು ಸಾವಿರಕ್ಕಿಂತಲೂ ಅಧಿಕ ಕುಟುಂಬಗಳಿಗೆ ಈ ಸೌಲಭ್ಯವನ್ನು ಒದಗಿಸಿದರು. ಸಂಸದರ ಕೋಟಾದಡಿ ಮಂಡ್ಯ ಜಿಲ್ಲೆಯಾದ್ಯಂತ ಭಾರತೀಯ ದೂರವಾಣಿ ಸಂಪರ್ಕ ನಿಗಮ ನಿಯಮಿತ ಇಲಾಖೆಯ ಮೂಲಕ ಸ್ಥಿರ ದೂರವಾಣಿ ಸಂಪರ್ಕವನ್ನು ಸಾಮಾನ್ಯ ಜನರಿಗೂ ತಲುಪುವಂತೆ ಕ್ರಮಕೈಗೊಂಡರು. 1993ರಲ್ಲಿ ಮಂಡ್ಯ ಜಿಲ್ಲೆಯಲ್ಲಿ ನಡೆದ 63ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ, ಸಮ್ಮೇಳನವನ್ನು ಅಚ್ಚುಕಟ್ಟಿನಿಂದ ಯಶಸ್ವಿಯಾಗಿ ನಿರ್ವಹಿಸಿದರು. ಈ ಸಮ್ಮೇಳನಕ್ಕೆ ಸಂಗ್ರಹಿಸಿದ ಒಟ್ಟು ನಲವತ್ತೈದು ಲಕ್ಷ ಹಣದಲ್ಲಿ, ಇಪತ್ತೈದು ಲಕ್ಷ ರೂ.ಗಳು ಖರ್ಚಾಗಿ ಉಳಿದ ಇಪ್ಪತ್ತು ಲಕ್ಷ ರೂ. ಹಣವನ್ನು ಮಂಡ್ಯ ಹೃದಯ ಭಾಗದಲ್ಲಿರುವ ರೈತರ ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ ಈ ಆವರಣದಲ್ಲಿರುವ ರಾಷ್ಟ್ರಕವಿ ಕುವೆಂಪು ಅವರ ಪುತ್ಥಳಿ ಸ್ಥಾಪಿಸಲು ಮೂರು ಲಕ್ಷ ರೂ. ಜಾನಪದ ಲೋಕಕ್ಕೆ ಒಂದು ಲಕ್ಷ ರೂ. ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾಮಂದಿರ ನಿರ್ಮಾಣಕ್ಕೆ ಎಂಟೂವರೆ ಲಕ್ಷ ರೂ.ಗಳ ಆರ್ಥಿಕ ನೆರವು ನೀಡಿದರು. ಉಳಿದ ಹಣದಲ್ಲಿ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಸ್ವಂತ ಭವನವನ್ನು ನಿರ್ಮಿಸಲಾಯಿತು[23]. ಹೀಗೆ ಜಿ.ಮಾದೇಗೌಡರು

ರಾಜಕೀಯ ಅಧಿಕಾರವನ್ನು ನಿಸ್ವಾರ್ಥತೆ ಹಾಗೂ ಪ್ರಾಮಾಣಿಕತೆಯಿಂದ ವಿನಿಯೋಗಿಸಿದ್ದಾರೆ.

ಜಿ.ಮಾದೇಗೌಡರ ಪಾಲಿಗೆ 1996ರ ಲೋಕಸಭಾ ಚುನಾವಣೆ ಮಹತ್ವದ ಚುನಾವಣೆ. ಚಲನಚಿತ್ರ ನಟ ಅಂಬರೀಶ್ ಅವರು ಜಾತ್ಯಾತೀತ ಜನತಾದಳ ತೊರೆದು ಜಿ.ಮಾದೇಗೌಡರ ಆಶೀರ್ವಾದದೊಂದಿಗೆ ಪ್ರಧಾನಿ ಪಿ.ವಿ.ನರಸಿಂಹರಾವ್ ಅವರ ಸಮ್ಮುಖದಲ್ಲಿ ಕಾಂಗ್ರೆಸ್‌ಗೆ ಸೇರ್ಪಡೆಗೊಂಡರು. ನಂತರ ಪಕ್ಷದ ಕಾರ್ಯ ಚಟುವಟಿಕೆಯಲ್ಲಿ ಹಾಗೂ ಪಕ್ಷದ ಸಂಘಟನೆಯಲ್ಲಿ ಸಕ್ರಿಯರಾದರು. ಇದೇ ಸಮಯಕ್ಕೆ 1996ರ ಲೋಕಸಭೆ ಚುನಾವಣೆ ಘೋಷಣೆಯಾಗಿ ಕಾಂಗ್ರೆಸ್‌ನಿಂದ ಅಂಬರೀಶ್ ಅವರಿಗೆ ಟಿಕೆಟ್ ಘೋಷಣೆಯಾಯಿತು. ಆದರೆ ಜಿ.ಮಾದೇಗೌಡರ ಬೆಂಬಲಿಗರ ಉಗ್ರ ಹೋರಾಟ ಮತ್ತು ಮುಷ್ಕರದ ಕಾರಣ ಕಾಂಗ್ರೆಸ್ ಹೈಕಮಾಂಡ್ ಜಿ.ಮಾದೇಗೌಡರಿಗೆ ಬಿ.ಫಾರಂ ನೀಡಿ ಚುನಾವಣೆಯಲ್ಲಿ ಸ್ಪರ್ಧಿಸುವಂತೆ ಆದೇಶಿಸಿತು. ಈ ಹಿನ್ನೆಲೆಯಲ್ಲಿ ಜಿ.ಮಾದೇಗೌಡರು ಮತ್ತು ಅಂಬರೀಶ್ ನಡುವಿನ ಬಾಂಧವ್ಯ ಕಳಚಿತು. ಈ ಸಂಬಂಧ ಅಂಬರೀಶ್‌ಗೆ ಜಿ.ಮಾದೇಗೌಡರು ಟಿಕೆಟ್ ತಪ್ಪಿಸಿದರೆಂಬ ಅಪಪ್ರಚಾರ ಜಿಲ್ಲೆಯ ಸಾರ್ವಜನಿಕರಲ್ಲಿ ವ್ಯಾಪಕವಾಗಿ ಹರಡಿತು. ಈ ಚುನಾವಣೆಯಲ್ಲಿ ಜನತಾ ದಳದ ಅಭ್ಯರ್ಥಿಯಾಗಿ ಕೆ.ಆರ್.ಪೇಟೆ ಕೃಷ್ಣ ಅವರು ಅಭ್ಯರ್ಥಿಯಾದರು. ಈ ಚುನಾವಣಾ ಸ್ಪರ್ಧೆಯಲ್ಲಿ ಆರುಬಾರಿ ಶಾಸಕರಾಗಿ ಎರಡು ಭಾರಿ ಲೋಕಸಭಾ ಸಂಸದರಾಗಿ ಜಿಲ್ಲೆಯ ರಾಜಕಾರಣದಲ್ಲಿ ಪ್ರಭಾವಿ ನಾಯಕತ್ವದ ಮೂಲಕ ಹೆಸರು ಗಳಿಸಿದ ಹಾಗೂ ಕಾವೇರಿ ಜಲವಿವಾದ ಹೋರಾಟದ ಮೂಲಕ ಆಡಳಿತ ನಡೆಸುವ ಸರ್ಕಾರವನ್ನೇ ನಡುಗುವಂತೆ ಮಾಡಿದ್ದ ಜಿ.ಮಾದೇಗೌಡರು ಪ್ರಥಮ ಬಾರಿಗೆ ಈ ಚುನಾವಣೆಯಲ್ಲಿ ಕೆ.ಆರ್.ಪೇಟೆ ಕೃಷ್ಣ ವಿರುದ್ಧ 33,386 ಮತಗಳ ಅಂತರದಿಂದ ಪರಾಭಗೊಂಡರು[24] ಗೆಲುವು ಸಾಧಿಸಿ ಜಿಲ್ಲೆಯನ್ನು ಪ್ರತಿನಿಧಿಸಲು ಜಿ.ಮಾದೇಗೌಡರೇ ತಕ್ಕ ವ್ಯಕ್ತಿ ಎಂದು ಕೇಂದ್ರ ಮಟ್ಟದಲ್ಲಿ ನಿರೂಪಿಸಿಕೊಂಡಿದ್ದರೂ ಮೂರನೆಯ ಸಂಸತ್ ಚುನಾವಣೆಯಲ್ಲಿ ಪರಾಭವಗೊಳ್ಳಲು ಪ್ರಮುಖ ಕಾರಣವೇನೆಂದರೆ ಅವರು ತಮ್ಮ ಅಭಿವೃದ್ಧಿ ಕಾರ್ಯಯೋಜನೆಗಳನ್ನು ಜಿಲ್ಲೆಯಾದ್ಯಂತ ವಿಸ್ತರಿಸುವ ಬದಲು ತಮ್ಮ ತವರು ಕ್ಷೇತ್ರವನ್ನೇ ಕೇಂದ್ರೀಕರಿಸಿ ಕೊಂಡಿದ್ದರು.

1998ರಲ್ಲಿ ಅನಿರೀಕ್ಷಿತ ರಾಜಕೀಯ ಬೆಳವಣಿಗೆಯಿಂದಾಗಿ ಮಧ್ಯಂತರ ಲೋಕಸಭಾ ಚುನಾವಣೆ ಘೋಷಣೆಯಾಯಿತು. ಈ ವೇಳೆಗೆ ಅಂಬರೀಶ್‌ರವರಿಗೆ 1996ರ ಚುನಾವಣೆಯಲ್ಲಿ ಕಾಂಗ್ರೆಸ್ ಟಿಕೆಟ್ ನೀಡದಿದ್ದಕ್ಕೆ ಕಾಂಗ್ರೆಸ್ ಪಕ್ಷದ ನಾಯಕರ ಜೊತೆ ಮನಸ್ತಾಪದಿಂದ ಬೇಸತ್ತು ಜನತಾದಳ ಸೇರಿದರು. ಸಹಜವಾಗಿ 1998ರ ಚುನಾವಣೆಯಲ್ಲಿ ಮಂಡ್ಯ ಕ್ಷೇತ್ರದಿಂದ ಅಂಬರೀಶ್ ಅವರು ಅಭ್ಯರ್ಥಿಯಾದರು.

ಕಾಂಗ್ರೆಸ್ ಜಿ.ಮಾದೇಗೌಡರನ್ನು ಅಭ್ಯರ್ಥಿಯನ್ನಾಗಿ ಕಣಕ್ಕಿಳಿಸಿತು. ಈ ಚುನಾವಣಾ ಹೋರಾಟದಲ್ಲಿ ಅಂಬರೀಶ್ ಅವರು 1,80,523 ಮತಗಳ ಅಂತರದಲ್ಲಿ ಐತಿಹಾಸಿಕ ಜಯ ಗಳಿಸಿದರು[25]. ಇದರಿಂದಾಗಿ ಜಿ.ಮಾದೇಗೌಡರಿಗೆ ತಮ್ಮ ಕ್ರಿಯಾಶೀಲ ರಾಜಕಾರಣದಲ್ಲಿ ಎರಡನೆಯ ಬಾರಿಗೆ ಸೋಲಿನ ಅನುಭವವಾಯಿತು. ನಂತರ ರಾಷ್ಟ್ರ ಹಾಗೂ ರಾಜ್ಯ ರಾಜಕಾರಣದಿಂದ ಹಿಂದೆ ಸರಿದರು.

ಹೀಗೆ ರಾಜಕೀಯ ಕ್ಷೇತ್ರದಲ್ಲಿ ಏಳು–ಬೀಳುಗಳನ್ನು ಕಂಡ ಜಿ.ಮಾದೇಗೌಡರು ಆಡು ಮುಟ್ಟದ ಸೊಪ್ಪಿಲ್ಲ ಎಂಬ ಕನ್ನಡದ ಪ್ರಖ್ಯಾತ ನಾಣ್ನುಡಿಗೆ ಅನ್ವರ್ಥಕವಾಗಿ ರಾಜಕೀಯ ಕ್ಷೇತ್ರಕ್ಕೆ ಸೀಮಿತವಾಗಿರದೆ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ರೈತ ಹೋರಾಟಗಳಲ್ಲೂ ಅಪ್ರತಿಮ ಸಾಧನೆ ಮಾಡಿ ಇಂದಿಗೂ ಸಕ್ರಿಯವಾಗಿ ಜನಪರ ಕಾರ್ಯಗಳಿಗೆ ದುಡಿಯುತ್ತಿದ್ದಾರೆ. ಗೌಡರು ರೈತ ಹೋರಾಟಗಳಲ್ಲಿ ನಾಯಕತ್ವನ್ನು ವಹಿಸುವ ಮುಖಾಂತರ ರೈತರ ಬಾಳನ್ನು ಹಸನುಗೊಳಿಸಿದ್ದಾರೆ. ಮಂಡ್ಯ ಜಿಲ್ಲೆಯ ರೈತ ಹಿತರಕ್ಷಣಾ ಸಮಿತಿ ಹಾಗೂ ಕಾವೇರಿ–ಕೃಷ್ಣ ಸಮನ್ವಯ ಸಮಿತಿ ಇವುಗಳಿಗೆ ಅಧ್ಯಕ್ಷರಾಗಿ ಮತ್ತು ಸಂಘಟನೆಯ ಜವಾಬ್ದಾರಿಯನ್ನು ಯಶಸ್ವಿಯಾಗಿ ಇಂದಿಗೂ ನಿರ್ವಹಿಸುತ್ತಿದ್ದಾರೆ. ಕಾವೇರಿ ನೀರಿನ ವಿಷಯದಲ್ಲಿ ತಮ್ಮ ಬದುಕನ್ನೇ ಮುಡುಪಾಗಿಟ್ಟು 92ರ ಇಳಿ ವಯಸ್ಸಿನಲ್ಲೂ ಯುವಕರು ನಾಚುವಂತೆ ರೈತರನ್ನು ಸಂಘಟಿಸಿ ಹೋರಾಟ ನಡೆಸುತ್ತಾ ಸಕ್ರಿಯರಾಗಿದ್ದಾರೆ. ಇಂದಿನ ಯುವಕರಿಗೆ ಮುಂದಿನ ಪೀಳಿಗೆಗೆ ಮಾದರಿ ನಾಯಕರಾಗಿದ್ದಾರೆ. ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಾಗಿದ್ದ ಇ.ಎಸ್.ವೆಂಕಟರಾಮಯ್ಯ ಅವರು ಗೌಡರ ಸಾಮಾಜಿಕ ಕಳಕಳಿಯ ಬಗ್ಗೆ ತಮ್ಮ ಅಭಪ್ರಾಯವನ್ನು ವ್ಯಕ್ತಪಡಿಸುತ್ತಾ ಗೌಡರದ್ದು ಗ್ರಾಮೀಣ ಮನೋಭಾವದ ನೈಜ ಜನಪರ ಕಾಳಜಿಯುಳ್ಳ ಪ್ರಾಮಾಣಿಕ ವ್ಯಕ್ತಿತ್ವ ಎಂದು ಉಲ್ಲೇಖಿಸಿರುವುದು ಇಲ್ಲಿ ಸ್ಮರಣೀಯ ಇದನ್ನು ಅವಲೋಕಿಸಿದಾಗ ಜಿ.ಮಾದೇಗೌಡರು ಜನ ಹಿತಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಿರುವುದು ಸಂಶೋಧನೆಯಿಂದ ತಿಳಿದು ಬರುತ್ತದೆ.

## 3.7 ಸದನದಲ್ಲಿ ಜಿ.ಮಾದೇಗೌಡರ ಚಿಂತನೆ ಹಾಗೂ ವಿಚಾರಧಾರೆಗಳು

ಜಿ.ಮಾದೇಗೌಡರು ವಿಧಾನಸಭಾ ಸದಸ್ಯರಾಗಿದ್ದ ವೇಳೆ 1962 ರಿಂದ 1989ರವರೆಗೆ ವಿಧಾನಸಭೆ ಅಧಿವೇಶನದಲ್ಲಿ ಎತ್ತಿದ ಪ್ರಶ್ನೆಗಳು, ಪ್ರಸ್ತಾಪಿಸಿದ ವಿಚಾರಗಳಿಂದ ಜಿ.ಮಾದೇಗೌಡರು ಹೆಚ್ಚಾಗಿ ರೈತಪರ ನಿಲುವುಗಳನ್ನು ತಳೆದಿರುತ್ತಾರೆ. ಜೊತೆಗೆ ಬಹಳ ಸಮರ್ಪಕ ನಿಲುವುಗಳನ್ನು ಮಂಡಿಸುತ್ತಾ ಸತ್ಯಕ್ಕೆ ಹತ್ತಿರವಾದ

ನಿರ್ಣಯಗಳನ್ನು ಪಾಸು ಮಾಡುವಂತೆ ಒತ್ತಾಯಿಸಿರುತ್ತಾರೆ. ವಿಧಾನಸಭಾ ಸದಸ್ಯರಾಗಿದ್ದ ವೇಳೆ ಅವರು ಚರ್ಚಿಸಿದ, ಪ್ರಸ್ತಾಪಿಸಿದ, ಎತ್ತಿದ ಪ್ರಶ್ನೆಗಳಿಂದಾಗಿ ಪ್ರಸ್ತುತ ರೈತ ಬದುಕು ಹಸನಾಗಿರುವುದನ್ನು ಗಮನಿಸಬಹುದು. ಈ ವಿಚಾರಗಳನ್ನು ಸಾರ್ವಜನಿಕರ ಗಮನಕ್ಕೆ ತರುವುದು ಪ್ರಮುಖವಾದ ಕಾರ್ಯವಾಗಿರುತ್ತದೆ. ಅಂದರೆ ದೃಢನಿಲುವು ಮತ್ತು ಅತ್ಯುತ್ತಮ ವಿಚಾರಗಳು ಅವರ ಮನೋಧೋರಣೆಯನ್ನು ನಾವು ಪಾರದರ್ಶಕವಾಗಿ ಅರಿಯಬಹುದಾಗಿದೆ.

ಇವರು ನಾಡಿಗೆ ಸ್ವಾತಂತ್ರ್ಯ ಬಂದ ಪ್ರಾರಂಭದ ದಶಕಗಳಲ್ಲಿ ರಚನಾತ್ಮಕ ಕಾರ್ಯಗಳ ಮೂಲಕ ಜನತೆಗೆ ಶಿಕ್ಷಣವನ್ನು ನೀಡಿ, ದುಡಿಯುವ ನಿಸ್ವಾರ್ಥ ಕೈಗಳಿಗೆ ದುಡಿಮೆಯ ಎಲ್ಲಾ ಅವಕಾಶಗಳನ್ನು ಕಲ್ಪಿಸಿಕೊಡುವ ಮಾರ್ಗಗಳನ್ನು ಜನಸಮುದಾಯಕ್ಕೆ ತೆರೆದಿಟ್ಟು ಅದರಲ್ಲೂ ರೈತರ ಬಾಳಿನ ಆಸರೆಯಾಗಿ ಕಂಡುಬಂದರು. ಜಿ.ಮಾದೇಗೌಡರು, ತಮಗೆ ದೊರೆತ ಅಧಿಕಾರವನ್ನು ಪ್ರಭುತ್ವವೆಂದು ಅರಿಯದೇ ಜವಾಬ್ದಾರಿ ಎಂದು ಜನ ಸಮುದಾಯದ ಸರ್ವತೋಮುಖ ಪ್ರಗತಿಯನ್ನು ಹೊಂದಬೇಕೆಂಬ ಕನಸ್ಸನ್ನು ಹೊಂದಿ ಆ ನಿಟ್ಟಿನಲ್ಲೇ ಸಾಗಿರುವ ಅಂಶಗಳು ಮತ್ತು ಆ ಎಲ್ಲಾ ಸುಧಾರಣೆಗಳು ಫಲನೀಡಿದೆವೆಂಬುದು ಜನರ ಅಭಿಪ್ರಾಯವೇ ಆಗಿದೆ. ಇಂತಹ ಪ್ರಬುದ್ಧ ಮಾರ್ಗದರ್ಶಿ ವ್ಯಕ್ತಿತ್ವದ ಪ್ರಸ್ತುತ ಸಮಾಜಕ್ಕೆ ಮಾದರಿಯಾಗಿರುತ್ತಾರೆ.

**ಸಹಕಾರಿ ಕ್ಷೇತ್ರದ ಬಗ್ಗೆ ಸದನದಲ್ಲಿ ಚರ್ಚೆ**

ಜಿ.ಮಾದೇಗೌಡರು ಆರಂಭದಲ್ಲಿ 1963ರಲ್ಲಿ ವಿಧಾನಸಭೆಯಲ್ಲಿ ನಡೆದ ಚರ್ಚೆಯಲ್ಲಿ ಪ್ರಸ್ತಾಪಿಸಿರುವ ಅಂಶವೆಂದರೆ ಅವರು ಪ್ರತಿನಿಧಿಸಿದ್ದ ಮಳವಳ್ಳಿ ತಾಲ್ಲೋಕಿನಲ್ಲಿ ಇರುವಂತಹ ಬೃಹಗಾತ್ರದ ಸಹಕಾರಿ ಸೊಸೈಟಿಗಳು ಎಷ್ಟು ಸಂಖ್ಯೆಯಲ್ಲಿವೆ ಎಂದು ಅಂದಿನ ಸಹಕಾರಿ ಮತ್ತು ಅಭಿವೃದ್ಧಿ ಸಚಿವರಾಗಿದ್ದ ರಾಮಕೃಷ್ಣ ಹೆಗ್ಗಡೆಯವರನ್ನು ಪ್ರಶ್ನಿಸಿದಾಗ ಅವುಗಳ ಸಂಖ್ಯೆ ಎರಡು ಎಂಬುದಾಗಿರುತ್ತದೆ. ಈ ಅಂಕಿ ಅಂಶವು ನಮಗೆ ಅಂದಿನ ಆರ್ಥಿಕಾಭಿವೃದ್ಧಿಗೆ ಪೂರಕವಾದ ಸಹಕಾರಿ ಸಂಸ್ಥೆಗಳು ಸ್ಥಾಪನೆಗೊಂಡಿರುವ ಅಂಶ ವ್ಯಕ್ತವಾಗುತ್ತದೆ.[26] ಜಿ.ಮಾದೇಗೌಡರು 1964 ಜುಲೈ 10 ರಂದು ಪ್ರಸ್ತಾಪಿಸುತ್ತಾ ಕೃಷಿ ಸಚಿವರಾದಂತಹ ಬಿ.ಡಿ.ಜತ್ತಿಯವರಿಗೆ 'ಸಕ್ಕರೆಯನ್ನು ಸಾರ್ವಜನಿಕರಿಗೆ ಹಂಚಿಕೆ ಮಾಡುವಾಗ ಯಾವ ಏಜೆನ್ಸಿ ಮೂಲಕ ಹಂಚಿಕೆ ಮಾಡಿಸುತ್ತೀರಿ, ಎಂದಿರವುದಲ್ಲದೆ ವರ್ತಕರಿಗೆ ಲೈಸೆನ್ಸ್ ಕೊಡುವಾಗ ಕೆಲವು ನಿಯಮಗಳನ್ನು ಪಾಲಿಸಬೇಕು ಎಂದಿರುತ್ತಾರೆ. ಸಾರ್ವಜನಿಕರಿಗೆ ನೇರವಾಗಿ ಮಾರಾಟ ಮಾಡದೇ ಬ್ಲಾಕ್ ಮಾರ್ಕೆಟಿನಲ್ಲಿ ಮಾರುತ್ತಿದ್ದಾರೆಂಬ ದೂರು ಸರ್ಕಾರದ ಗಮನಕ್ಕೆ ಬಂದಿದೆಯೇ ಎಂದು ಪ್ರಶ್ನಿಸುತ್ತಾ ತಾವೇ ಉತ್ತರವನ್ನು ಸದನದಲ್ಲಿ ಪರಿಹಾರವಾಗಿ ನೀಡಿರುತ್ತಾರೆ. ಸಹಕಾರ ಸಂಘಗಳು ಎಲ್ಲೆಲ್ಲಿ ಇದೆಯೋ ಅವುಗಳ ಮುಖಾಂತರವೇ

ಸಕ್ಕರೆಯನ್ನು ಸಮರ್ಪಕವಾಗಿ ಹಂಚುವ ತತ್ವವನ್ನು ಒಪ್ಪಿಕೊಂಡಿದೆ. ಆದರೆ ಸಹಕಾರ ಸಂಘಗಳ ಮುಖಾಂತರ ಜನರಿಗೆ ಸರಿಯಾಗಿ ತಲುಪಿಸುತ್ತಿಲ್ಲ. ಸರಿಯಾಗಿ ತಲುಪಿಸಲು ಅಗತ್ಯ ಕ್ರಮದ ಅವಶ್ಯಕತೆ ಇದೆ ಎಂದರು.[27] ಜಿ.ಮಾದೇಗೌಡರು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೋಕು ತೊರೆಬೊಮ್ಮನಹಳ್ಳಿ ಸಿ.ಎ.ಕೆರೆ ಹೋಬಳಿ ಈ ಗ್ರಾಮದಲ್ಲಿ ಉದ್ದೇಶಿತ ಸಹಕಾರಿ ಸಂಘದ ಸೇವಾ ಕೇಂದ್ರ ನಿರ್ಮಾಣಕ್ಕೆ ತೋಟಿ ಇನಾಂ ಭೂಮಿ ಸ್ವಾಧೀನಕ್ಕಾಗಿ ಸುಮಾರು 15 ಗುಂಟೆಗಳನ್ನು ನೀಡುವಂತೆ ಇದರ ಅಗತ್ಯತೆಯನ್ನು ಮನಗಂಡು ಸಹಕಾರ ಇಲಾಖೆಯೂ ಸಹ ಈಗಾಗಲೇ ಸರ್ಕಾರಕ್ಕೆ ಶಿಫಾರಸ್ಸು ಕೋರಿಕೆಯನ್ನು ಸಲ್ಲಿಸಿ, ಈ ಬಗ್ಗೆ ಕಂದಾಯ ಸಚಿವರು ಗಮನಹರಿಸಿ ಗ್ರಾಮೀಣಾಭಿವೃದ್ಧಿಗೆ ಸಹಕರಿಸುವಂತೆ ಸದನದಲ್ಲಿ ಒತ್ತಾಯಿಸಿರುತ್ತಾರೆ. ಅಂದಿನ ಸಹಕಾರ ಸಚಿವರಾಗಿದ್ದ ಆರ್.ಎಲ್. ಜಾಲಪ್ಪರವರು ಜಾರಿಗೆ ತಂದಿರುವ ಸಹಕಾರಿ ಸಂಘಗಳ ಸಾಲ ಮರುಪಾವತಿ ವಿಧೇಯಕ ಕಾನೂನನ್ನು ಗುರುದೇವರಹಳ್ಳಿ ಮಾದೇಗೌಡರ ವಿರೋಧಿಸಿರುತ್ತಾರೆ ಹಾಗೂ ವಿಷಾದ ವ್ಯಕ್ತಪಡಿಸಿರುತ್ತಾರೆ. ಅವರು ವಿರೋಧಿಸುತ್ತಾ ದೇಶ ಇವತ್ತು ಬರಗಾಲ ಪರಿಸ್ಥಿತಿಯಲ್ಲಿದ್ದು ಜನ ತಲ್ಲಣಿಸುತ್ತಿದ್ದಾರೆ. ಇದು ಸರ್ಕಾರಕ್ಕೂ ಗೊತ್ತು ಈ ವಿಧೇಯಕ ಸಾಲಗಾರರು ಸರ್ಕಾರಕ್ಕೆ ಮೋಸ ಮಾಡಿದಂತೆ ತಡೆಯುವ ಹೊಣೆಗಾರಿಕೆಯಾಗಿದ್ದರೂ ಇದು ರೈತರಿಗೆ ಗಂಡಾಂತರಕಾರಿಯಾಗಿದೆ. ಕರ್ನಾಟಕ ರಾಜ್ಯದಲ್ಲಿ ಯಾರು ಅಂಥಹ ದೊಡ್ಡ ಶ್ರೀಮಂತ ವ್ಯವಸಾಯಗಾರರು ಇಲ್ಲ ಈ ವಿಧೇಯಕ ಸಾಲಗಾರ ರೈತನ ಜಮೀನನ್ನು ಬಹಿರಂಗವಾಗಿ ಹರಾಜಾಕುತ್ತದೆ. ಇವತ್ತು ಭೂ ಸುಧಾರಣೆ ಕಾನೂನು ಪ್ರಕಾರ ತರಿ ಜಮೀನನ್ನು 10 ಎಕರೆಗಿಂತ ಮೇಲ್ಪಟ್ಟು ಇಟ್ಟುಕೊಳ್ಳುವ ಹಾಗಿಲ್ಲ. ಅಂದ ಮೇಲೆ ರೈತರಿಗೆ ಅವಮಾನ ಮಾಡಿದಂತಾಗುತ್ತದೆ. ಇದರಿಂದ ರೈತರು ಆತ್ಮಹತ್ಯೆಗೆ ಮುಂದಾಗಬಹುದು. ಹೀಗಾಗಿ ಸಾಲ ವಸೂಲಿ ಮಾಡಲು ಬೇರೆ ಅನ್ಯ ಮಾರ್ಗ ಬಳಸಬೇಕೆಂದು, ಜೊತೆಗೆ ಈ ಕಾನೂನಿಗೆ ನಮ್ಮ ಬೆಂಬಲ ಇಲ್ಲವೆಂದು ಬಹಿರಂಗವಾಗಿ ಎಚ್ಚರಿಸಿದರು[28]. ಇಂದು ಇರುವುದು ಪ್ರಜಾಸರ್ಕಾರ ನವಾಬರ ಆಡಳಿತವಲ್ಲ ಹೀಗಾಗಿ ಪ್ರಜಾಹಿತ ಕಾಪಾಡುವುದು ಮುಖ್ಯವಾಗಿದೆ. ರೈತರು ಸಂಘಟಿತರಾಗಲು ಅವರ ಬೇಡಿಕೆಗಳು ಸರ್ಕಾರದ ಮುಂದೆ ಅಪಾರವಾಗಿವೆ. ಹೀಗಾಗಿ ಈ ಕಾನೂನನ್ನು ಮರುಪರಿಶೀಲನೆ ಮಾಡಿ ಸಮಸ್ಯೆ ಬಗೆಹರಿಸಬೇಕೆಂದು ಸರ್ಕಾರವನ್ನು ಜಿ.ಮಾದೇಗೌಡರು ಎಚ್ಚರಿಸಿದರು.

**ಕಬ್ಬಿನ ಶುಲ್ಕದ ನಿಧಿ ಸ್ಥಾಪನೆಯ ಬಗ್ಗೆ ಚರ್ಚೆ**

1965 ಮಾರ್ಚ್ 31 ರಂದು ಸದನದಲ್ಲಿ ಮಂಡ್ಯ ಜಿಲ್ಲಾ ವಿಭಾಗದ ಕಬ್ಬಿನ ಸೆಸ್ ನಿಧಿ ಬಗೆಗೆ ಪ್ರಶ್ನೆಗಳನ್ನು ಗೌಡರು ಕೇಳುತ್ತಾ ವಾಸ್ತವ ಸ್ಥಿತಿಗತಿಗಳನ್ನು ಪ್ರಸ್ತಾಪಿಸಿದ್ದಾರೆ. ಪಾರ್ಲಿಮೆಂಟರಿ ಕಾರ್ಯದರ್ಶಿಯವರಿಗೆ ಹಾಗೂ ಲೋಕೋಪಯೋಗಿ ಇಲಾಖೆ

ಸಚಿವರಾದ ಜಿ.ಬಿ.ಶಂಕರರಾವ್‌ರವರನ್ನು ಮಂಡ್ಯ ಜಿಲ್ಲಾ ವಿಭಾಗದ ಕಬ್ಬಿನ ತೆರಿಗೆ ನಿಧಿಯ ಬಗ್ಗೆ ತಿಳಿಸಿ ಹಾಗೂ ಈ ತೆರಿಗೆ ನಿಧಿಯಿಂದ ಒಟ್ಟು ಎಷ್ಟು ಮೈಲಿ ಉದ್ದದ ರಸ್ತೆ ನಿರ್ಮಿಸಲಾಗಿದೆ, ಈ ವಿಭಾಗವನ್ನು ರದ್ದುಮಾಡಲು ಅಥವಾ ನಿಷೇಧಿಸಲು ಬಲವಾದ ಕಾರಣ ಏನು. ಪ್ರತಿವರ್ಷ ರಸ್ತೆಗಳ ನಿರ್ವಹಣೆಗೆ ಎಷ್ಟು ಹಣದ ಅಗತ್ಯವಿದೆ. ಈ ಕಬ್ಬಿನ ಸೆಸ್ ವಿಭಾಗದಿಂದ ರಸ್ತೆ ನಿರ್ವಹಣೆಗೆ ಹೇಗೆ ಹಣ ಬಿಡುಗಡೆಯಾಗುತ್ತಿತು ಎಂಬ ಪ್ರಶ್ನೆಗಳಿಗೆ ಮಾನ್ಯ ಮಂತ್ರಿಗಳು ಹೀಗೆ ಉತ್ತರಿಸಿರುತ್ತಾರೆ. ಹೌದು ವಸೂಲಿ ಮಾಡಲಾಗುತ್ತಿತ್ತು. ಈ ಕಬ್ಬಿನ ಸೆಸ್ ಡಿವಿಜನ್ ವಾರ್ಷಿಕ ಸಮರ್ಪಕವಾಗಿ ಕೆಲಸ ನಿರ್ವಹಿಸದೇ ಬಾಕಿ ಉಳಿಸಿಕೊಳ್ಳುತ್ತಿದ್ದರಿಂದ ಸೆಸ್ ನಿಷೇಧಿಸಲ್ಪಟ್ಟಿತು. 1290 ಮೈಲಿ ವಾರ್ಷಿಕ ರಸ್ತೆ ನಿರ್ಮಾಣವಾಗಿದೆ. ವಾರ್ಷಿಕ ರಸ್ತೆ ನಿರ್ಮಾಣ ನಿರ್ವಹಣಾ ವೆಚ್ಚ ರೂ. 5,16,000 ಎಂಬುದಾಗಿ ಉತ್ತರಿಸಿದ್ದಾರೆ[29].

1959 ರಿಂದ ಮಂಡ್ಯ ಡಿವಿಜನ್‌ನಲ್ಲಿ ಕಬ್ಬು ಬೆಳೆಯುವುದಕ್ಕೆ ರೈತರಿಂದ ಟನ್ ಒಂದಕ್ಕೆ ಆರು ರೂಪಾಯಿ ಪ್ರಕಾರ ಷುಗರ್ ಕೇನ್ ಸೆಸ್ ಫಂಡ್ ವಸೂಲಿ ಮಾಡಿ ಈಗ 1965 ರಿಂದ ಸೆಸ್ ಮತ್ತು ಸಂಬಂಧಪಟ್ಟ ಡಿವಿಜನ್ ಸಹ ತೆಗೆದು ಹಾಕಿರುವ ಅಂಶ ಸರ್ಕಾರದ ಗಮನಕ್ಕೆ ಬಂದಿದೆಯೆ ಅದಕ್ಕೆ ಪ್ರತಿಯಾಗಿ ಈ ಕಬ್ಬಿನ ಸೆಸ್ ನಂತರ ಕಮಿರ್ಷಿಯಲ್ ಟ್ಯಾಕ್ಸ್ ಅಗಿ, ಪರ್ಚೆಸ್ ಟ್ಯಾಕ್ಸ್ ಎಂದು ಟನ್ ಒಂದಕ್ಕೆ ಆರು ರೂಪಾಯಿಗಳನ್ನು ತೆಗೆದುಕೊಳ್ಳಲಾಗುತ್ತಿದೆ ಎಂದು ಹೇಳುತ್ತಿದ್ದಾಗ. ಜಿ.ಮಾದೇಗೌಡರು ಸುಪ್ರಿಂ ಕೋರ್ಟ್ ತೀರ್ಮಾನದಂತೆ ತೆಗೆದುಹಾಕಿದ್ದಾರೆ ಹಾಗೂ ಸುಪ್ರಿಂಕೋರ್ಟಿಗೆ ಈ ಕೇಸನ್ನು ತೆಗೆದುಕೊಂಡು ಹೋದವರು ಯಾರು ಎಂದು ಪ್ರಶ್ನಿಸಿದಾಗ ಲೋಕೋಪಯೋಗಿ ಸಚಿವರಾದ ವಿರೇಂದ್ರಪಾಟಿಲರು ಸೂಕ್ತ ಉತ್ತರವನ್ನು ಕೊಡದೆ ಇದ್ದ ಕಾರಣ ಸದನವನ್ನು ಬಹಿಷ್ಕರಿಸುತ್ತಾರೆ.

ಕೆ.ಮಲ್ಲಪ್ಪ ಕೈಗಾರಿಕೆ ಮತ್ತು ವಾಣಿಜ್ಯ ಸಚಿವರನ್ನು ಈ ರೀತಿಯಾಗಿ ಪ್ರಶ್ನೆ ಮಾಡಿದ್ದಾರೆ. ತಮ್ಮ ಜಿಲ್ಲೆಗೆ ಸಿಮೆಂಟ್ ಹಂಚಿಕೆ ಎರಡು ವರ್ಷಗಳಿಂದ ಯಾವ ಪ್ರಮಾಣದಲ್ಲಿ ಜಿಲ್ಲಾಧಿಕಾರಿಗಳ ಕೋಟಾದಲ್ಲಿ ಹಂಚಿಕೆಯಾಗುತ್ತಿದೆ ಎಂದು ಹಾಗೂ ಎಷ್ಟು ಸಂಖ್ಯೆ ಸದಸ್ಯರು ಹಾಗೂ ಸಂಘ ಸಂಸ್ಥೆಗಳು ಈ ಎರಡು ವರ್ಷಗಳ ಅವಧಿಯಲ್ಲಿ ಸಿಮೆಂಟ್ ಪ್ರಮಾಣದ ವೇತನ ಪಡೆಯುತ್ತಿವೆ. ಇದಕ್ಕೆ ಸಚಿವರ ಉತ್ತರ ಈಗಿರುತ್ತದೆ. 1963 ಜನವರಿಯಿಂದ 1964 ಡಿಸೆಂಬರ್‌ವರೆಗೆ 7600 ಟನ್ ಬಂದಿದೆ ಎಂಬುದಾಗಿ ಉತ್ತರಿಸುತ್ತಾರೆ[30]. ಅರ್ಜಿದಾರರು 6146 ಇದ್ದು 145629 ಸಿಮೆಂಟ್ ಬ್ಯಾಗ್ಸ್ ಪ್ರಮಾಣ ಹಂಚಿಕೆಯಾಗಿರುತ್ತದೆ ಎಂದಿರುತ್ತಾರೆ. ಜಿ.ಮಾದೇಗೌಡರು ಈ ವಿಚಾರಕ್ಕೆ ಸಂಬಂಧಿಸಿದಂತೆ ನಿಖರವಾದ ಮಾಹಿತಿ ನೀಡಬೇಕೆಂದು ಸದನದಲ್ಲಿ ಒತ್ತಾಯಿಸಿದ್ದಾರೆ.

### ಕೃಷಿ ಉತ್ಪಾದನಾ ಯೋಜನೆ ಬಗ್ಗೆ ಚರ್ಚೆ

1966ರ ಏಪ್ರಿಲ್ ರಂದು, ಮಂಡ್ಯ ಜಿಲ್ಲೆಯಲ್ಲಿ ಪ್ಯಾಕೆಜ್ ಪ್ರೋಗ್ರಾಮ್ ಪ್ರಯೋಜನಕ್ಕೆ ಒಟ್ಟು ಎಷ್ಟು ಗ್ರಾಮಗಳು ಸೇರಿವೆ ಮತ್ತು ಕಳೆದ ಮೂರು ವರ್ಷಗಳಲ್ಲಿ ಒಟ್ಟು ಎಷ್ಟು ಸಂಖ್ಯೆಯಲ್ಲಿ ಕೌಟುಂಬಿಕ ಕೃಷಿ ಉತ್ಪಾದನೆ ಯೋಜನೆ ಆರಂಭವಾಗಿವೆ. ಈ ಎಲಾ ಸಾಮಾನ್ಯ ಕುಟುಂಬಗಳಿಗೆ ಸಹಾಯದ ಸ್ವರೂಪ ಹೇಗಿದೆ, ಈ ಯೋಜನೆ ಪರಿಚಯಿಸಿದ ನಂತರ ಅವುಗಳ ಎಕರೆಗಳಲ್ಲಿ ಸರಾಸರಿ ಉತ್ಪಾದನೆ ಹೇಗಿದೆ ಎಂದು ಜಿ.ಮಾದೇಗೌಡರು ಪ್ರಶ್ನಿಸಿರುತ್ತಾರೆ.[31] ಇದಕ್ಕೆ ಅಂದಿನ ಕೃಷಿ ಸಚಿವರಾದ ಜಿ.ಎ.ನಾರಾಯಣಗೌಡರು ಈ ಕೆಳಗಿನಂತೆ ಹೇಳಿಕೆಯನ್ನು ನೀಡಿರುತ್ತಾರೆ. ನಾವು ಅಲ್ಪಾವದಿ ಬೆಳೆಗಳ ಉತ್ಪಾದನೆಗೆ ಆದ್ಯತೆಯನ್ನು ಸರಳವಾಗಿ ನೀಡಿದ್ದು ಕೃಷಿ ಉತ್ಪಾದನಾ ಫಾರಂ ಯೋಜನೆ ಆಧಾರದಲ್ಲಿ ನೀಡಲಾಗಿದೆ. 475 ಮತ್ತು 476 ಸಂಖ್ಯೆಯಲ್ಲಿ ನೀಡಿದ್ದೇವೆ. ಬೆಳೆ ಅಭಿವೃದ್ದಿಗೆ ಬೀಜ ಪೂರೈಕೆ, ಗೊಬ್ಬರ, ಕೀಟನಾಶಕಗಳು, ರೋಗನಾಶಕಗಳು, ಕೃಷಿ ಅಭಿವೃದ್ದಿ ಮಾದರಿಯ ಪರಿಚಯ, ತಾಂತ್ರಿಕ ಮಾರ್ಗದರ್ಶನ ವಿಸ್ತರಣೆ ಮಣ್ಣಿನ ಪರೀಕ್ಷೆಯ ಆಧಾರದ ಮೇಲೆ ಗೊಬ್ಬರ ವಿತರಣೆ ಹಾಗೂ ಕೃಷಿ ಅಭಿವೃದ್ದಿ ಮತ್ತು ಕೃಷಿ ಉಪಕರಣಗಳನ್ನು ಬಳಸಲು ಪ್ರೋತ್ಸಾಹವಾಗಿ ತರಬೇತಿ ಕಾರ್ಯಾಗಾರ ಏರ್ಪಡಿಸುವುದು. ಆಧುನಿಕ ಟ್ರ್ಯಾಕ್ಟರ್ ಮತ್ತು ಬುಲ್ಡೇಜರ್ ಬಳಕೆ ವಿಸ್ತರಣೆ, ಸಾಲ ನೀಡಿಕೆ ಮತ್ತು ಮಾರುಕಟ್ಟೆ ವ್ಯವಸ್ಥೆ ಕಲ್ಪಿಸುವುದು ಕಾರ್ಮಿಕ ನಿಯಮಗಳಂತೆ ನೀರಾವರಿ ಪಂಪ್‌ಗಳನ್ನು ನೀಡುವುದು ಎಂಬುದಾಗಿ ತಿಳಿಸಿದ್ದಾರೆ.

## ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಚರ್ಚೆ ಹಾಗೂ ವಿಚಾರಧಾರೆಗಳು

### ಶಾಲಾ ಮಕ್ಕಳ ಹಾಜರಾತಿ ಹೆಚ್ಚಳ ಕುರಿತು ಚರ್ಚೆ

ಮಳವಳ್ಳಿ ತಾಲ್ಲೋಕಿನಲ್ಲಿ 6 ರಿಂದ 10 ವರ್ಷ ವಯಸ್ಸಿನ ಗಂಡು ಮತ್ತು ಹೆಣ್ಣು ಮಕ್ಕಳ ವಿದ್ಯಾರ್ಥಿಗಳ ಒಟ್ಟು ಸಂಖ್ಯೆಯನ್ನು ತಿಳಿಸುವಂತೆ ಇದರಲ್ಲಿ ಎಷ್ಟು ಗಂಡು ಮತ್ತು ಹೆಣ್ಣು ಮಕ್ಕಳು ಶಾಲೆಯಲ್ಲಿ ಹಾಜರಾಗುತ್ತಿದ್ದಾರೆಂದು ಹಾಗೂ ಶಾಲೆಗೆ ಹಾಜರಾಗದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಏನು ಕ್ರಮಕೈಕೋಂಡಿದ್ದೀರಿಯೇ ಅಂದಿನ ಶಿಕ್ಷಣ ಸಚಿವರಾದ ಎಸ್.ಆರ್. ಕಂಠಿಯವರನ್ನು ಪ್ರಶ್ನಿಸಿರುತ್ತಾರೆ. ಇದಕ್ಕೆ ವಿವರ ನೀಡಿದ್ದ ಮಾನ್ಯ ಸಚಿವರು ಒಟ್ಟು ಗಂಡು 17935, ಹೆಣ್ಣು 15501ಗಳಿದ್ದು, ಮಕ್ಕಳ ಪೋಷಕರ ಮೇಲೆ ಮಾತ್ರ ಕ್ರಮಕೈಗೊಳ್ಳುತ್ತಿವೆ ಎಂದು ತಿಳಿಸಿರುತ್ತಾರೆ. ಪ್ರಸ್ತುತ ಪ್ರೇರೇಪಿಸುವ ಕ್ರಮಗಳನ್ನು ಕೈಗೊಳ್ಳುತ್ತಿದ್ದೇವೆ ಎಂದಿರುತ್ತಾರೆ.[32] ಗೈರು ಹಾಜರಾಗುವ ಮಕ್ಕಳ ಸಮಸ್ಯೆಗಳನ್ನು ಗುರುತಿಸುವುದು ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವುದು

ಅವಶ್ಯಕವಾಗಿದೆ ಎಂದರು. ಅಲ್ಲದೆ ಹಾಜರಾತಿಯನ್ನು ಹೆಚ್ಚಿಸಲು ಶಿಕ್ಷಣದ ಯೋಜನೆಗಳನ್ನು ರೂಪಿಸಲು ಜಿ.ಮಾದೇಗೌಡರು ಸಲಹೆ ನೀಡಿದ್ದರು.

**ಕಡ್ಡಾಯ ಪ್ರಾಥಮಿಕ ಶಿಕ್ಷಣದ ಬಗ್ಗೆ ಚರ್ಚೆ**

1968 ರ ಏಪ್ರಿಲ್‌ನಲ್ಲಿ ಜಿ.ಮಾದೇಗೌಡರು ರಾಜ್ಯದಲ್ಲಿ ಎಷ್ಟು ಮಂದಿ ವಿದ್ಯಾರ್ಥಿಗಳು ಕಡ್ಡಾಯ ಪ್ರಾಥಮಿಕ ಶಿಕ್ಷಣ ಯೋಜನೆಗೆ ಒಳಪಟ್ಟಿರುತ್ತಾರೆ, ಎಲ್ಲಾರು ಪ್ರತಿನಿತ್ಯ ಶಾಲೆಗೆ ಹಾಜರಾಗುತ್ತಿದ್ದಾರ, ಪ್ರತಿನಿತ್ಯ ಹಾಜರಾಗದ ವಿದ್ಯಾರ್ಥಿಗಳ ಪೋಷಕರಿಗೆ ಮಾಹಿತಿ ನೀಡುವುದಕ್ಕೆ ಸರ್ಕಾರವು ಕ್ರಮಕೈಗೊಂಡಿದೆಯೆ ಎಂದು ಅಂದಿನ ಕೃಷಿ ಮತ್ತು ಶಿಕ್ಷಣ ಮಂತ್ರಿಯಾದ ಕೆ.ವಿ.ಶಂಕರಗೌಡರನ್ನು ಪ್ರಶ್ನಿಸಿರುತ್ತಾರೆ. ಅದಕ್ಕೆ ಉತ್ತರವಾಗಿ ಸದನದಲ್ಲಿ ಅವರು 22,61470 ಮಕ್ಕಳು ಕಡ್ಡಾಯ ಪ್ರಾಥಮಿಕ ಯೋಜನೆಯಲ್ಲಿ ಸೇರ್ಪಡೆಯಾಗಿರುತ್ತಾರೆಂದು, ದಿನಂಪ್ರತಿ ಸುಮಾರು 80% ಹಾಜರಾಗುತ್ತಿದ್ದಾರೆಂದು, ಪ್ರತಿನಿತ್ಯ ವಿದ್ಯಾರ್ಥಿಗಳು ಹಾಜರಾಗುವಂತೆ ಪ್ರೇರೆಪಿಸುವ ಪ್ರಗತಿಪರ ಯೋಜನೆಗಳನ್ನು ಅನುಸರಿಸಲಾಗುತ್ತಿದೆ ಎಂದು ಉತ್ತರ ನೀಡಿರುತ್ತಾರೆ.[33] ಆದರೂ ಈ ಪ್ರಶ್ನೆಗಳಿಗೆ ಸರ್ಕಾರದ ಕಡೆಯಿಂದ ಸಮರ್ಪಕವಾದ ಉತ್ತರ ಬಾರದೆ ಹೋದದ್ದರಿಂದ ಜಿ.ಮಾದೇಗೌಡರು ಬಡ ಮಕ್ಕಳ ಶಿಕ್ಷಣಕ್ಕೆ ಪ್ರಾಥಮಿಕ ಶಿಕ್ಷಣ ಯೋಜನಗೆ ಹೆಚ್ಚು ಹೊತ್ತು ನೀಡಬೇಕೆಂದು ಹೇಳಿದರು. ಅಲ್ಲದೆ ವಿದ್ಯಾರ್ಥಿಗಳನ್ನು ಶಾಲೆಯ ಕಡೆಗೆ ಗಮನಸೆಳೆಯಲು ಪ್ರಗತಿ ಯೋಜನೆಗಳನ್ನು ಅನುಸರಿಸುವ ಮೂಲಕ ಶಿಕ್ಷಣದ ಹಾಜರಾತಿಯನ್ನು 100% ಮಾಡಬೇಕೆಂಬುವುದು ಜಿ.ಮಾದೇಗೌಡರ ಚಿಂತನೆಯಾಗಿತ್ತು. ಜೊತೆಗೆ ಸಚಿವರಿಗೆ ಕೋರಿಕೆಯನ್ನು ನೀಡುತ್ತಾರೆ.

ಜಿ.ಮಾದೇಗೌಡರು 1977 ರಲ್ಲಿ ರಾಜ್ಯದ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆಯ ಅನ್ವಯ ಸರ್ಕಾರವು ಪೋಷಕರಿಗೆ ಮತ್ತು ಸಂಬಂಧಪಟ್ಟವರಿಗೆ ದಂಡವನ್ನು ಮತ್ತು ಶಿಕ್ಷೆಯನ್ನು ನೀಡುವ ಬಗ್ಗೆ ಅರಿವು ಮೂಡಸಲಾಗಿರುತ್ತದೆಯೇ, ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ರಾಜ್ಯದಲ್ಲಿ ಒಟ್ಟು ಎಷ್ಟು ವಿದ್ಯಾರ್ಥಿಗಳು ಪಡೆಯುತ್ತಿದ್ದಾರೆ ಎಂದು ಕೇಳಿದ್ದಾಗ ಶಿಕ್ಷಣ ಸಚಿವರಾಗಿದ್ದ ಬಿ.ಸುಬ್ಬಯ್ಯಶೆಟ್ಟಿಯವರು ಸದನದಲ್ಲಿ, ಈ ಕಾಯ್ದೆಗೆ ಒಳಪಡುವ ಅಂಶಗಳ ಬಗ್ಗೆ ಯಾವುದೇ ದಾಖಲೆಗಳಿಲ್ಲವೆಂದು, ಈ ಕಾಯ್ದೆಯು ಪ್ರಾಥಮಿಕ ಶಾಲಾ ಪಂಚಾಯತ್ ಕೋರ್ಟ್ಸ್‌ಗೆ ಪ್ರಶಸ್ತಿ, ದಂಡ, ಶಿಕ್ಷೆಗೆ ಸಂಬಂಧಿಸಿದಂತೆ ಅಧಿಕಾರ ಹೊಂದಿರುತ್ತದೆ. ಜೊತೆಗೆ ಚಂದಾ ತೆರಿಗೆ ಕೂಡ ವಿಧಿಸಿ ವಸೂಲಿ ಮಾಡುತ್ತದೆ. ಪ್ರಸ್ತುತ 1977 ರಲ್ಲಿ ರಾಜ್ಯದಲ್ಲಿ 17,03238 ಗಂಡುಮಕ್ಕಳು 13,79,495 ಹೆಣ್ಣುಮಕ್ಕಳು ಒಟ್ಟು 30,82,733 ಮಕ್ಕಳು ಕಡ್ಡಾಯ ಪ್ರಾಥಮಿಕ ಶಿಕ್ಷಣ ಪಡೆಯುತ್ತಿದ್ದಾರೆ ಎಂಬುದಾಗಿ ಉತ್ತರಿಸಿದ್ದಾರೆ. ಹೀಗೆ ಗುರುದೇವರಹಳ್ಳಿ ಮಾದೇಗೌಡರು ತಮ್ಮ ಚರ್ಚೆಯಲ್ಲಿ ಆರ್ಥಿಕ ಸ್ವಾವಲಂಬನ ಹೊಂದುವಂತೆ ತನ್ನ ಕ್ಷೇತ್ರದ ಜನತೆಗೆ ಎಲ್ಲಾ

ರೀತಿಯ ಪೂರಕ ಸೌಲಭ್ಯಗಳನ್ನು ಕಲ್ಪಿಸಿಕೊಡುವಲ್ಲಿ ಮತ್ತು ರಾಜ್ಯದಲ್ಲಿ ಎಲ್ಲಾ ಮಕ್ಕಳು ಶಿಕ್ಷಣ ಪಡೆಯಬೇಕೆಂಬ ಆಶಯಗಳನ್ನು ಹೊಂದಿರುವುದನ್ನು ಸ್ಪಷ್ಟವಾಗಿ ಕಂಡುಬರುತ್ತದೆ.

**ಶಿಕ್ಷಕರ ಕೊರತೆ ನೀಗಿಸಲು ಕ್ರಮ ಕೈಗೊಳ್ಳುವಂತೆ ಚರ್ಚೆ**

1978ರ ಮೇ ನಲ್ಲಿ ಸದನದಲ್ಲಿ ಪ್ರಸ್ತಾಪಿಸುತ್ತಾ ಕರ್ನಾಟಕದಲ್ಲಿ ಸ್ಟೈಪೆಂಡರಿ ಸ್ಕೀಮ್ ಮೇಲೆ ಕೆಲವು ಉಪಧ್ಯಾಯರನ್ನು ನೇಮಕ ಮಾಡಿಕೊಂಡಿದ್ದು ಕರ್ನಾಟಕದಲ್ಲಿ ಸುಮಾರು 1500 ಉಪಾಧ್ಯಾಯರ ಕೊರತೆ ಇದೆ. ಈ ನೇಮಕವನ್ನು ಹಿಂದೆಯೇ ಡಿಸ್ಟ್ರೀಕ್ಟ್ ಲೆವೆಲ್ ರಿಕ್ರ್ಯೂಟ್‌ಮೆಂಟ್ ಕಮಿಟಿ ನೇಮಕ ಮಾಡಿಕೊಳ್ಳಲಾಗಿದ್ದು ಈ ಹುದ್ದೆಯನ್ನು ಹಂಚಿಕೆ ಮಾಡದೆ ತಡೆಯಿಡಿಯಲಾಗಿದೆ ಎಂದು ಪ್ರಸ್ತಾಪಿಸಿ ಇವರನ್ನು ಖಾಯಂ ಮಾಡದೇ ಹೋದರೆ ಶಾಲೆಗಳಲ್ಲಿ ಉಪಾಧ್ಯಾಯರು ಲಭ್ಯವಿರುವುದಿಲ್ಲವೆಂದು ಸೂಚಿಸಿರುತ್ತಾರೆ.[34] ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ ಕೊರತೆಯಿಂದ ವಿದ್ಯಾರ್ಥಿಗಳು ಶಿಕ್ಷಣದಿಂದ ವಂಚಿತರಾಗುತ್ತಾರೆ. ಶಾಲೆ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವುದಲ್ಲದೆ ವಿದ್ಯಾರ್ಥಿಗಳ ಗೈರುಹಾಜರಿಗೆ ಕಾರಣವಾಗುತ್ತದೆ. ಇದಕ್ಕೆ ಪರಿಹಾರವಾಗಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳುವುದರ ಮೂಲಕ ಶಿಕ್ಷಕರ ಕೊರೆತೆಯನ್ನು ನೀಗಿಸಬಹುದೆಂದು ಜಿ.ಮಾದೇಗೌಡರು ಒತ್ತಾಯಿಸಿರುವುದು ಅವರು ಶಿಕ್ಷಣದ ಬಗೆಗಿನ ಹೊಂದಿದ್ದ ಒಲವು ಹಾಗೂ ಚಿಂತನೆಯನ್ನು ಕಾಣಬಹುದಾಗಿದೆ.

9ನೇ ಮೇ 1988ರ ವಿಧಾನ ಸಭಾ ಕಲಾಪದಲ್ಲಿ ಗುರುದೇವರಹಳ್ಳಿ ಮಾದೇಗೌಡರು ಅಂದಿನ ಶಿಕ್ಷಣ ಮಂತ್ರಿಯಾಗಿದಂತಹ ಬಿ.ಸೋಮಶೇಖರ್‌ರವರ ಜೊತೆ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಒಂದು ರಿಂದ ಏಳನೇ ತರಗತಿವರೆಗೆ ಇಂಗ್ಲೀಷ್ ಮಾಧ್ಯಮದಲ್ಲಿ ಪಾಠ ಹೇಳಿಕೊಡುತ್ತಿವೆ. ಸರ್ಕಾರ ಈ ಶಿಕ್ಷಣ ಸಂಸ್ಥೆಗಳಿಗೆ ಒಂದರಿಂದ ಏಳನೇ ತರಗತಿವರೆಗೆ ಇಂಗ್ಲೀಷ್‌ನಲ್ಲಿ ಬೋಧನೆ ನಡೆಸಲು ಅವಕಾಶ ನೀಡಿವೆ. ಆದರೆ ಎಂಟ ರಿಂದ ಹತ್ತನೇ ತರಗತಿಯ ಮಕ್ಕಳಿಗೆ ಇಂಗ್ಲೀಷ್‌ನಲ್ಲಿ ಬೋಧನೆ ಮಾಡಲು ಅನುಮತಿ ನೀಡುತ್ತಿಲ್ಲ. ಅಂದರೆ ಒಂದು ರಿಂದ ಏಳನೇ ತರಗತಿವರೆಗೆ ಇಂಗ್ಲೀಷ್ ಮಾಧ್ಯಮದಲ್ಲಿ ಓದಿಕೊಂಡು ಬಂದಿರುವಂತಹ ಮಕ್ಕಳು ಎಂಟನೇ ತರಗತಿಯಿಂದ ಕನ್ನಡ ಮಾಧ್ಯಮದಲ್ಲಿ ಓದಬೇಕಾಗುತ್ತದೆ. ಇದರಿಂದ ಮಕ್ಕಳ ವಿದ್ಯಾಭ್ಯಾಸದಲ್ಲಿ ಗೊಂದಲ ಸೃಷ್ಟಿ ಮಾಡಿದಂತೆ ಆಗುತ್ತದೆ. ಸರ್ಕಾರಗಳು ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮಗಳಿಗೆ ಅನುಮತಿಯನ್ನು ನೀಡುವಂತಹ ಸಂದರ್ಭದಲ್ಲಿ ಸರಿಯಾದ ತೀರ್ಮಾನಗಳನ್ನು ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ತೆಗೆದುಕೊಳ್ಳ ಬೇಕಾಗುತ್ತದೆ. ಕೆಲವು ವಿದ್ಯಾಸಂಸ್ಥೆಗಳ ಒತ್ತಡಕ್ಕೆ ಮಣಿದು ಅವರ ಇಚ್ಚೆಯಂತೆ ಅನುಮತಿ ನೀಡಿದ್ದರೆ ಗೊಂದಲ ಉಂಟಾಗುವುದು ವಿದ್ಯಾರ್ಥಿಗಳಿಗೆ ಈ ದಿಸೆಯಿಂದ ತೀರ್ಮಾನ ತೆಗೆದುಕೊಳ್ಳುವಾಗ ಸರ್ಕಾರ ಆಲೋಚನೆ ಮಾಡಬೇಕಾಗುತ್ತದೆ ಎಂಬುದಾಗಿ ಸದನದಲ್ಲಿ ಚರ್ಚಿಸಿದ್ದಾರೆ

ಒಂದು ರಿಂದ ಡಿಗ್ರಿ ತನಕ ಒಂದೇ ತೆರೆನಾದ ಮಾಧ್ಯಮದಲ್ಲಿ ಬೋಧನೆ ನಡೆಸುವುದಕ್ಕೆ ಅವಕಾಶ ಕಲ್ಪಿಸಕೊಡಬೇಕಾಗುತ್ತದೆ[35] ಎಂಬುದಾಗಿ ಚರ್ಚಿಸಿದ್ದಾರೆ.

ಸದನದಲ್ಲಿ ಇದೇ ವಿಚಾರಕ್ಕೆ ಸಂಬಂಧಿಸಿದಂತೆ ಸಭಾಧ್ಯಕ್ಷರಿಗೆ ಈ ಕೆಳಗಿನಂತೆ ಮನವಿಯನ್ನು ಜಿ.ಮಾದೇಗೌಡರು ಮಾಡಿದ್ದಾರೆ. ಬೇಸಿಗೆ ರಜೆ ಕಳೆದು ಶಾಲೆಗಳು ಇನ್ನೂ ನಾಲ್ಕು ರಿಂದ ಐದು ದಿವಸಗಳಲ್ಲಿ ಶಾಲೆಯನ್ನು ಆರಂಭಿಸಬೇಕು ಶಿಕ್ಷಣ ಸಂಸ್ಥೆಗಳು ಅನುಮತಿ ದೊರೆಯುತ್ತದೆ ಎಂಬ ಆಸೆಯಿಂದ ಮಕ್ಕಳಿಗೆ ಅರ್ಜಿನೀಡಿ ಶಾಲೆಗೆ ಸೇರಿಸಿಕೊಳ್ಳಲು ಮುಂದಾಗುತ್ತಿದ್ದಾರೆ. ಆದರೆ ಸರ್ಕಾರ ಈ ವಿಚಾರದಲ್ಲಿ ಇನ್ನೂ ಕೂಡ ಸರಿಯಾದ ತೀರ್ಮಾನಕ್ಕೆ ಬಂದಿಲ್ಲ ಆಡಳಿತ ನಡೆಸುತ್ತಿರುವ ಸರ್ಕಾರವೇ ಆಭದ್ರವಾಗಿದೆ. ಸರ್ಕಾರ ಉಳಿಸಿಕೊಳ್ಳುವುದಕ್ಕೆ ಪ್ರಯತ್ನ ನಡೆಸುತ್ತಿದೆ. ಇಂತಹ ಸಂದರ್ಭದಲ್ಲಿ ಶಾಲೆಗಳನ್ನು ನಡೆಸುತ್ತಿರುವ ಸಂಸ್ಥೆಗಳು ಹಾಗೂ ಇಂತಹ ಶಾಲೆಯನ್ನೇ ನಂಬಿಕೊಂಡು ಶಾಲೆಗೆ ಸೇರಿಕೊಳ್ಳುತ್ತಿರುವ ವಿದ್ಯಾರ್ಥಿಗಳ ಗತಿ ಏನು ಎಂಬುದನ್ನು ನಾವುಗಳು ಆಲೋಚನೆ ಮಾಡಬೇಕಾಗುತ್ತದೆ. ಶಿಕ್ಷಣ ಸಂಸ್ಥೆಗಳಿಗೆ ಇರುವ ಗೊಂದಲವನ್ನು ಸರಿಪಡಿಸುವ ಜವಾಬ್ದಾರಿಯನ್ನು ಶಿಕ್ಷಣ ಮಂತ್ರಿಗಳು ನಿಭಾಯಿಸಲು ಸಾಧ್ಯವಾಗುತ್ತಿಲ್ಲ ಮತ್ತು ಯಾವ ಹಂತದವರೆಗೆ ಆಂಗ್ಲಮಾಧ್ಯಮದಲ್ಲಿ ಬೋಧನೆ ನಡೆಸುವುದಕ್ಕೆ ಅನುಮತಿ ನೀಡಬೇಕು ಎಂಬುದರ ಬಗ್ಗೆ ಶೀಘ್ರವಾಗಿ ತೀರ್ಮಾನಕ್ಕೆ ಸರ್ಕಾರ ಬಂದರೆ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತದೆ ಎಂದು ಜಿ.ಮಾದೇಗೌಡರು ಸದನದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

### ವಿದ್ಯಾಭೂದಾನ ಚಳುವಳಿಯ ಬಗ್ಗೆ ಚರ್ಚೆ

1979ರ ಅವಧಿಯಲ್ಲಿ ಶಿಕ್ಷಣ ವಿದ್ಯಾಭೂದಾನ ಸಮಾನತೆ ಮತ್ತು ಸಾರ್ವತ್ರೀಕರಣಕ್ಕಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಸರ್ಕಾರವು ಪ್ರತಿ ಹಳ್ಳಿ ಹಾಗೂ ಪಟ್ಟಣಗಳಲ್ಲೂ ವಿಸ್ತರಿಸುವ ಕಾಲಘಟ್ಟವಾಗಿದ್ದಿತು. ಆ ವೇಳೆ ಭೂರಹಿತರಿಗೆ ಭೂದಾನ ಮೂಲಕ ಭೂ ಹಂಚಿಕೆ ಕಾರ್ಯಕ್ರಮಗಳನ್ನು ಮಹನೀಯರ ನೇತೃತ್ವದಲ್ಲಿ ಭೂಮಿ ಉಳ್ಳವರು ಇಲ್ಲದವರಿಗಾಗಿ ನೀಡುತ್ತಿದ್ದಂತಹ ಅವಧಿ ಇದೇ ವೇಳೆ ವಿದ್ಯಾದಾನ ಚಳುವಳಿಗಾಗಿ ಭೂದಾನವನ್ನು ನೀಡಲಾಗುತ್ತಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಜಿ.ಮಾದೇಗೌಡರು ಅಂದಿನ ಶಿಕ್ಷಣ ಸಚಿವರಾಗಿದ್ದ ಬಿ.ಸುಬ್ಬಯ್ಯಶೆಟ್ಟಿಯವರನ್ನು ವಿದ್ಯಾಭೂದಾನ ಚಳುವಳಿಗಾಗಿ ಸರ್ಕಾರವು ಹೆಚ್ಚು ಭೂಮಿಯನ್ನು ಸಂಗ್ರಹಿಸಬೇಕು ಇದಕ್ಕಾಗಿ ಇರುವ ಭೂಮಿಯನ್ನು ನೀಡುವಂತೆ ಪ್ರೋತ್ಸಾಹಿಸಬೇಕು. ಸಂಗ್ರಹಿಸಿದ ಭೂಮಿಯನ್ನು ಶಿಕ್ಷಣಕ್ಕಾಗಿಯೇ ಬಳಸಿಕೊಳ್ಳಬೇಕು. ಬೇರೆ ಉದ್ದೇಶಗಳಿಗೆ ಬಳಸಬಾರದು ಎಂದು ತಿಳಿಸಿದರು. ಶಿಕ್ಷಣವೇ ಶಕ್ತಿ. ಶಿಕ್ಷಣದಿಂದಲೇ ಎಲ್ಲಾ ಸಮಸ್ಯೆಗಳಿಗೆ ಪರಿಹಾರವೆಂಬುದು ಜಿ.ಮಾದೇಗೌಡರ ಚಿಂತನೆಯಾಗಿತ್ತು.[36]

**ಚುನಾವಣೆಗಳಲ್ಲಿ ನೌಕರ ವರ್ಗ ತಟಸ್ಥವಾಗಿರಬೇಕು ಎಂಬುದರ ಬಗ್ಗೆ ಚರ್ಚೆ**

1968ರ ಏಪ್ರಿಲ್‌ನಲ್ಲಿ ನಡೆದ ಮಂಡ್ಯ ಪಾರ್ಲಿಮೆಂಟರಿ ಚುನಾವಣೆಯಲ್ಲಿ, ಮಂಡ್ಯ ಜಿಲ್ಲೆಯ ಅನೇಕ ಸರ್ಕಾರಿ ಅಧಿಕಾರಿಗಳು ನೇರವಾಗಿ ಭಾಗವಹಿಸಿದ್ದರ ಬಗ್ಗೆ ಸರ್ಕಾರವು ನೋಟೀಸ್ ನೀಡಿದೆಯೇ, ಅವರ ವಿರುದ್ಧ ಸರ್ಕಾರ ಕ್ರಮ ಕೈಗೊಂಡಿದೆಯೇ ಎಂದು ಪ್ರಶ್ನಿಸಿದ್ದಾಗ ಅಂದಿನ ಮುಖ್ಯಮಂತ್ರಿಗಳಾಗಿದ್ದ ಎಸ್.ನಿಜಲಿಂಗಪ್ಪನವರು ಇಲ್ಲವೆಂದು ಉತ್ತರಿಸಿರುತ್ತಾರೆ.[37] ಈ ಸಂದರ್ಭದಲ್ಲಿ ಜಿ.ಮಾದೇಗೌಡರು ಚುನಾವಣೆಗಳು ಬರುತ್ತವೆ ಹೋಗುತ್ತವೆ. ಅಧಿಕಾರಿಗಳು ರಾಜಕೀಯ ನಾಯಕರಿಗೆ ನಿಷ್ಠೆಯಿಂದ ಕೆಲಸ ಮಾಡದೆ ವಸ್ತುನಿಷ್ಠವಾಗಿ ಕೆಲಸ ಮಾಡಬೇಕು ಪಕ್ಷದ ಕೆಲಸ ಮಾಡದೆ ಜನಗಳ ಸೇವೆ ಮಾಡುವುದು ಮುಖ್ಯವಾಗಿದೆ ಎಂದು ಮನವಿ ಮಾಡಿದ್ದಾರೆ.

**ಬರಗಾಲ ಪರಿಹಾರದ ಕ್ರಮದ ಬಗ್ಗೆ ಚರ್ಚೆ**

ಭೂ ಕಂದಾಯ ಇಳಿಕೆ ಮಾಡುವಂತೆ ಗುರುದೇವರಹಳ್ಳಿ ಮಾದೇಗೌಡರು 1967ರ ನವೆಂಬರ್ ತಿಂಗಳಿನಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಕೆಲಭಾಗಗಳು ಬರಗಾಲಕ್ಕೆ ಒಳಗಾಗಿರುವುದನ್ನು ಕಂದಾಯ ಸಚಿವರು ಪ್ರವಾಸದಲ್ಲಿ ಕಂಡುಕೊಂಡಿ ದ್ದಾರೆಯೇ ಎಂಬುದನ್ನು ತಿಳಿಸಿ, ಇದರಿಂದಾಗಿ ಬೆಳೆ ನಷ್ಟ ಹಾನಿ ಆಗಿದೆ ಎಂಬುದು ತಮ್ಮ ಗಮನಕ್ಕೆ ಬಂದಿದೆಯೇ, ಹೀಗಾಗಿ ಕಂದಾಯ ಸಚಿವರು ಸಾರ್ವಜನಿಕ ಸಭೆಯಲ್ಲಿ 1967–68ರ ಭೂ ಕಂದಾಯವನ್ನು ಇಳಿಕೆ ಮಾಡುವ ಬಗ್ಗೆ ಮತ್ತು ಪರಿಹಾರ ಕ್ರಮಗಳನ್ನು ಸಂಬಂಧಿಸಿದ ಮಳವಳ್ಳಿ, ಮದ್ದೂರು ಪ್ರದೇಶಗಳಿಗೆ ಕ್ರಮಗಳನ್ನು ಕೈಗೊಳ್ಳಬೇಕೆಂದು, ಸರ್ಕಾರವು ಇದರ ಪರವಾಗಿ ಸೂಕ್ತ ಕ್ರಮ ವಹಿಸಬೇಕೆಂದು ಪ್ರಸ್ತಾಪಿಸಿರುತ್ತಾರೆ.[38] ಇದಕ್ಕೆ ಅಂದಿನ ಕಂದಾಯ ಮತ್ತು ಅರಣ್ಯ ಇಲಾಖೆ ಸಚಿವರಾಗಿದ್ದ ಬಿ. ರಾಚಯ್ಯನವರು, ಬರಗಾಲಕ್ಕೆ ಈಡಾದ ಪ್ರದೇಶದ ಬಗ್ಗೆ ಕಂಡುಕೊಂಡಿದ್ದೇನೆಂದು, ಜೊತೆಗೆ ಬೆಳೆಹಾನಿ ನಷ್ಟ ಆಗಿದೆ ಎಂದು ಸಾರ್ವಜನಿಕ ಸಭೆಯಲ್ಲಿ 1965–66, 1966–67, 1967–68 ಅವಧಿಗಳ ಹಿಂದಿನ ಅವದಿಯ ಭೂಕಂದಾಯವನ್ನು ಇಳಿಕೆ ಮಾಡಲು ತೀರ್ಮಾನಿಸಲಾಗಿದೆ ಹಾಗೂ ಬರಪರಿಹಾರ ಕ್ರಮ ಆರಂಭವಾಗಿದೆ ಮಳವಳ್ಳಿ, ಮದ್ದೂರು ಭಾಗಗಳ ಬರ ಪರಿಹಾರ ಕ್ರಮಗಳನ್ನು ಕೈಗೊಂಡು ಭೂ ಅಭಿವೃದ್ಧಿ ಮತ್ತು ತಕ್ಕಾವಿ ಸಾಲುಗಳನ್ನು ನೀಡಲಾಗುತ್ತಿದೆ ಹಾಗೂ ಆಹಾರ ಧಾನ್ಯಗಳನ್ನು ಸಹಕಾರಿ ಸಂಘಗಳ ಮೂಲಕ ಕಾರ್ಮಿಕರಿಗೆ ಹಂಚಿಕೆ ಮಾಡಲಾಗುತ್ತಿದೆ ಎಂದು ತಿಳಿಸಿರುತ್ತಾರೆ.[39]

ಈ ಮೇಲಿನ ಅಂಶಗಳಿಂದ ನಾವು ಕಂಡುಕೊಂಡ ನಿಲುವುಗಳೆಂದರೆ ಜಿ.ಮಾದೇಗೌಡರು ತಾವು ಪ್ರತಿನಿಧಿಸಿರುವ ಕ್ಷೇತ್ರದ ಬಗ್ಗೆ ಹೊಂದಿರುವ ಕಾಳಜಿಗಳು ವ್ಯಕ್ತವಾಗುತ್ತವೆ. ಈ ವಿಧಾನಸಭಾ ಕ್ಷೇತ್ರದ ಜನತೆಯ ಪ್ರಮುಖ ಉದ್ಯೋಗ ಕೃಷಿ

ಆಗಿದ್ದು, ಕೃಷಿ ಅಭಿವೃದ್ಧಿಗಾಗಿ ಹಾಗೂ ಶಿಕ್ಷಣ, ಸಹಕಾರ ಸಂಘ, ವ್ಯಾಪಾರ ವಹಿವಾಟಿನ ಬಗೆಗೆ ಕೂಲಂಕಷವಾಗಿ ವಿಚಾರಗಳನ್ನು ಪ್ರಸ್ತಾಪಿಸಿರುವುದನ್ನು ಕಾಣಬಹುದು.

## ನೀರಾವರಿ ಯೋಜನೆಗಳ ಬಗ್ಗೆ ಚರ್ಚೆ ಮತ್ತು ವಿಚಾರಧಾರೆಗಳು

### ಶಿಂಷಾನದಿಗೆ ಅಣೆಕಟ್ಟು ನಿರ್ಮಾಣದ ಬಗ್ಗೆ ಚರ್ಚೆ

1972 ಜುಲೈ 11 ರಂದು ಜಿ.ಮಾದೇಗೌಡರು ವಿಧಾನಸಭಾ ಅಧಿವೇಶನದಲ್ಲಿ ರಾಜ್ಯದ ಬೃಹತ್ ನೀರಾವರಿ ಸಚಿವರಾದ ಹೆಚ್.ಎನ್.ನಂಜೇಗೌಡರನ್ನು ಶಿಂಷಾ ನದಿಯ ಅಣೆಕಟ್ಟು ನಿರ್ಮಾಣದ ಬಗ್ಗೆ ಪ್ರಶ್ನಿಸಿದರು. ಶಿಂಷಾ ನದಿಯು ತುಮಕೂರು ಜಿಲ್ಲೆಯ ದೇವರಾಯದುರ್ಗದ ಬಳಿ ಜನಿಸಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನಲ್ಲಿ ಪ್ರವೇಶ ಪಡೆದು ಮುಂದೆ ಮಳವಳ್ಳಿ ತಾಲ್ಲೂಕಿನ ರೊಟ್ಟಿಕಟ್ಟೆ ಗ್ರಾಮದ ಬಳಿ ಗಗನಚುಕ್ಕಿ ಜಲಪಾತವನ್ನು ಸೇರುತ್ತದೆ. ಈ ಮೂಲಕ ಕಾವೇರಿ ನದಿಯ ಉಪನದಿಯಾಗಿ ಹರಿಯುತ್ತದೆ. ಈ ನದಿಯು ಮದ್ದೂರು ಹಾಗೂ ಮಳವಳ್ಳಿ ತಾಲ್ಲೂಕಿನ ಜನಗಳಿಗೆ ಉಪಯುಕ್ತವಾಗಿದ್ದು, ಕಿರುಗಾವಲಿನ ಇಗ್ಗಲೂರು ಬಳಿ ಹರಿಯುವ ಶಿಂಷಾನದಿಗೆ ಅಡ್ಡಲಾಗಿ ಅಣೆಕಟ್ಟೆ ನಿರ್ಮಾಣ ಮಾಡಬೇಕೆಂದು ಬೇಡಿಕೆ ಹಾಕಿದರು. ಏಕೆಂದರೆ ಈ ನದಿಯು ಮಳೆಗಾಲದಲ್ಲಿ ತುಂಬಿಹರಿಯುತ್ತದೆ. ಬೇಸಿಗೆಯಲ್ಲಿ ಬರಡಾಗುತ್ತದೆ. ಇದರಿಂದ ಅನೇಕ ಸಮಸ್ಯೆಗಳು ತಲೆದೋರುತ್ತದೆ. ಕುಡಿಯುವ ನೀರಿನ ಸಮಸ್ಯೆ, ಕೃಷಿ ಚಟುವಟಿಕೆಗಳಿಗೆ ನೀರಿನ ಅಭಾವ, ಜಾನುವಾರುಗಳಿಗೆ ಕುಡಿಯುವ ನೀರು ಇಲ್ಲದಾಗುತ್ತದೆ ಹೀಗಾಗಿ ಶಿಂಷಾ ನದಿಗೆ ಅಣೆಕಟ್ಟೆ ನಿರ್ಮಿಸಲು ಯೋಜನೆ ಮತ್ತು ಅಂದಾಜನ್ನು ತಯಾರಿಸಲಾಗಿದೆಯೇ ಎಂದ ಪ್ರಶ್ನಿಸಿದರು ಹಾಗೂ ಅಣೆಕಟ್ಟೆ ನಿರ್ಮಾಣ ಯೋಜನೆಯ ವೆಚ್ಚ ಎಷ್ಟು, ಈ ಅಣೆಕಟ್ಟೆ ನಿರ್ಮಾಣದಿಂದಾಗಿ ಎಷ್ಟು ಪ್ರದೇಶಕ್ಕೆ ಪ್ರಯೋಜನವಾಗಲಿದೆ, ಈ ಯೋಜನೆಗೆ ಅನುಮೋದನೆ ನೀಡಲು ಏಕೆ ತಡವಾಗುತ್ತಿದೆ ಎಂದು ಪ್ರಸ್ತಾಪಿಸಿದ್ದರು.[40] ಇದಕ್ಕೆ ಬೃಹತ್ ಕೈಗಾರಿಕೆ ಸಚಿವರು, ಯೋಜನೆ ತಯಾರಿಸಲಾಗಿದೆ ಇದರ ಅಂದಾಜು ವೆಚ್ಚ ರೂ. 132 ಲಕ್ಷ ರೂ.ಗಳು ಸುಮಾರು 10.700 ಎಕರೆ ಪ್ರದೇಶದ ಬೆಳೆಗೆ ಅನುಕೂಲವಾಗಲಿದೆ. ನಾವು ಭಾರತ ಸರ್ಕಾರದ ಪರವಾನಿಗೆಯನ್ನು ನಿರೀಕ್ಷಿಸುತ್ತಿದ್ದೇವೆ ಎಂದು ಉತ್ತರ ನೀಡಿರುತ್ತಾರೆ.[41] ಈ ಮೂಲಕ ಇಗ್ಗಲೂರು ಬ್ಯಾರೇಜ್ ನಿರ್ಮಾಣ ಮಾಡುವ ಮೂಲಕ ಕಿರುಗಾವಲು ಮಳವಳ್ಳಿ ಮತ್ತು ಮದ್ದೂರು ತಾಲ್ಲೂಕಿನ ಪ್ರದೇಶದ ನೂರಾರು ಗ್ರಾಮಗಳಿಗೆ ಉಪಯುಕ್ತವಾಗಿದೆ. ಈ ಯೋಜನೆ ಜಾರಿಗೊಳ್ಳುವಲ್ಲಿ ಜಿ.ಮಾದೇಗೌಡರು ದೂರದೃಷ್ಟಿತ್ವ ಹೊಂದಿದ್ದು ಈ ಕಾರ್ಯವನ್ನು ಅನುಷ್ಠಾನಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಜಿ.ಮಾದೇಗೌಡರು 1972ರ ಜುಲೈ 14 ರಂದು ಸದನದಲ್ಲಿ ರಾಜ್ಯದ ಯೋಜನಾ ಮತ್ತು ಮಾಹಿತಿ ಖಾತೆ ಸಚಿವರನ್ನು ರಾಜ್ಯದ 4ನೇ ಪಂಚವಾರ್ಷಿಕ ಯೋಜನೆಗಳ ಬಗೆಗೆ ಪ್ರಶ್ನಿಸಿದರು. ಪಂಚವಾರ್ಷಿಕ ಯೋಜನೆಗಳು ದೇಶದ ಅಭಿವೃದ್ಧಿಗೆ ಪ್ರಮುಖ ಪಾತ್ರ ನಿರ್ವಹಿಸುತ್ತಿವೆ. ಮೊದಲ ಪಂಚವಾರ್ಷಿಕ ಯೋಜನೆ ಕೃಷಿಗೆ ಆದ್ಯತೆ ನೀಡಿದ್ದು, 2ನೇ ಪಂಚವಾರ್ಷಿಕ ಯೋಜನೆ ಕೈಗಾರಿಕೆಗಳಿಗೆ ಆದ್ಯತೆ ನೀಡಿದ್ದು, 3ನೇ ಪಂಚವಾರ್ಷಿಕ ಯೋಜನೆಯ ವ್ಯವಸ್ಥೆ ಮೇಲೆ ಭಾರತ ಪಾಕಿಸ್ತಾನ ಯುದ್ಧ ಮತ್ತು ಭಾರತ ಚೀನಾ ಯುದ್ಧಗಳಿಂದ ಸಂಪೂರ್ಣವಾಗಿ ಯಶಸ್ವಿಗೊಳ್ಳಲಿಲ್ಲ. ಈಗ 4ನೇ ಪಂಚವಾರ್ಷಿಕ ಯೋಜನೆಗಳು ಹಣ ಹೂಡುವ ಮೀತಿ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರ ನಿರೀಕ್ಷಿಸಬಹುದಾದ ಅನುದಾನದ ಬಗ್ಗೆ ಪ್ರಶ್ನಿಸಿದರು. ಇವುಗಳಿಗೆ ಉತ್ತರವಾಗಿ ಅಂದಿನ ಯೋಜನಾ ಮತ್ತು ಮಾಹಿತಿ ಸಚಿವರಾಗಿದ್ದ ದೇವೇಂದ್ರಪ್ಪ ಗಾಲಪ್ಪ ರವರು ಈ ರೀತಿಯಾಗಿ ಉತ್ತರಿಸಿದ್ದರು. ನಾಲ್ಕನೇ ಪಂಚವಾರ್ಷಿಕ ಯೋಜನೆಗಳು ಅಂತಿಮಗೊಂಡಿವೆ ಇದರ ಒಟ್ಟು ವೆಚ್ಚ ಮಿತಿ ರೂ. 350 ಕೋಟಿ ರೂ.ಗಳು, ಇದರಲ್ಲಿ 70% ಸಾಲ ಮತ್ತು 30% ಅನುದಾನ ನಿರೀಕ್ಷಿಸಲಾಗುತ್ತಿದೆ ಎಂದು ತಿಳಿಸಿರುತ್ತಾರೆ.[42] ಈ ಮೂಲಕ ರಾಜ್ಯಕ್ಕೆ ಪಂಚವಾರ್ಷಿಕ ಯೋಜನೆಯಲ್ಲಿ ಹೆಚ್ಚಿನ ಅನುದಾನವನ್ನು ಪಡೆದುಕೊಂಡು ಅಭಿವೃದ್ಧಿ ಕಾರ್ಯಗಳಿಗೆ ಬಳಸಿಕೊಳ್ಳಬೇಕೆಂದು ಸದನದ ಗಮನಸೆಳೆದಿದ್ದರು. ಮಂಡ್ಯ ಜಿಲ್ಲೆಯ ಅಭಿವೃದ್ಧಿ, ಅಲ್ಲದೆ ಮೈಸೂರು ರಾಜ್ಯದ ಅಭಿವೃದ್ಧಿಯು ಮುಖ್ಯ ಎಂಬುದು ಜಿ.ಮಾದೇಗೌಡರ ಚಿಂತನೆಯಾಗಿದೆ.

**ಬಿ.ಜಿ.ಪುರ ಮತ್ತು ಕಿರುಗಾವಲು ಹೋಬಳಿಗೆ ಕಾವೇರಿ ನದಿ ನೀರಿನ ಪೂರೈಕೆ**

1971–72ರ ಅವಧಿಯಲ್ಲಿ ಮಳವಳ್ಳಿ ತಾಲ್ಲೋಕಿನ ಬಿ.ಜಿ.ಪುರ ಮತ್ತು ಕಿರುಗಾವಲು ಹೋಬಳಿಗಳಿಗೆ ಮುಡುಕುತೊರೆಯಿಂದ ಕಾವೇರಿ ನದಿ ನೀರಿನ ಪೂರೈಕೆಗಾಗಿ ಕೆಳಮಟ್ಟದಿಂದ ಮೇಲಕ್ಕೆ ನೀರನ್ನು ಎತ್ತುವ ಪಂಪ್‌ಗಳನ್ನು ಜೋಡಿಸುವ ಯೋಜನೆಗಳು ಮತ್ತು ಅಂದಾಜು ತಯಾರಿಸಲಾಗಿದೆಯೇ, ಇದರ ವೆಚ್ಚ ಎಷ್ಟು, ಇದಕ್ಕೆ ಸರ್ಕಾರಿ ಆದೇಶವಾಗಿದೆಯೇ ಎಂದು ಜಿ.ಮಾದೇಗೌಡರು ಪ್ರಸ್ತಾಪಿಸಿರುತ್ತಾರೆ. ಇದಕ್ಕೆ ಅಂದಿನ ರಾಜ್ಯದ ಲೋಕೋಪಯೋಗಿ ಮತ್ತು ವಿದ್ಯುಚ್ಛಕ್ತಿ ಸಚಿವರಾಗಿದ್ದ ಎಂ.ಚನ್ನಬಸವಪ್ಪನವರು ಈ ರೀತಿಯಾಗಿ ಉತ್ತರ ನೀಡಿರುತ್ತಾರೆ. ಟಿ.ನರಸೀಪುರ ತಾಲ್ಲೋಕಿನ ಮುಡುಕುತೊರೆಯಿಂದ ಮಳವಳ್ಳಿ ತಾಲ್ಲೋಕಿನ ಬಿ.ಜಿ.ಪುರ ಮತ್ತು ಕಿರುಗಾವಲು ಹೋಬಳಿಗಳಿಗೆ ನೀರು ಪೂರೈಕೆಗೆ ಯೋಜನೆಯ ಅಂದಾಜು ತಯಾರಿಸಲಾಗಿದೆ. ಇದರ ಯೋಜನಾ ವೆಚ್ಚ As per S.R. of 1971-72 ಗೆ ರೂ. 20.46 ಲಕ್ಷಗಳು ಇದು ಅರೆ ಒಣ ಪ್ರದೇಶಗಳ ಉದ್ದೇಶಿತ 7.20 ಎಕರೆ ನೀರಾವರಿ ಯೋಜನೆಯಾಗಿದೆ. ಇದಕ್ಕೆ ಸರ್ಕಾರಿ ಆದೇಶ ಸಂಖ್ಯೆ PWD 4LBW 66 dated

15th June 1971. ಇದನ್ನು ಸಹಕಾರಿ ಸಂಘಗಳು ಮತ್ತು ಇತರೆ ನಿಧಿಗಳ ಯೋಜನಾ ವೆಚ್ಚದ ಫಲಾನುಭವ ಪಡೆದು ಈ ಯೋಜನೆ ಪರಿಗಣಿಸಿ, ಮಂಜೂರು ಮತ್ತು ಜಾರಿಗೆ ತರಬೇಕೆಂದು ಆದೇಶಿಸಲಾಗಿದೆ ಎಂದಿರುತ್ತಾರೆ.[43] ಈ ಮೂಲಕ ಬಿ.ಜಿ.ಪುರ, ಕಿರುಗಾವಲು ಪ್ರದೇಶಗಳಿಗೆ ಟಿ.ನರಸೀಪುರದ ಮುಡುಕುತೊರೆಯಿಂದ ಕಾವೇರಿ ನದಿ ನೀರನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಜಿ.ಮಾದೇಗೌಡರ ಹೋರಾಟದ ಫಲವಾಗಿ ಈ ಭಾಗವು ಹಸಿರಿನಿಂದ ಕಂಗೋಳಿಸಲು ಸಾಧ್ಯವಾಗಿದೆ.

ಜಿ.ಮಾದೇಗೌಡರು ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೋಕು, ಕಿರುಗಾವಲು ಹೋಬಳಿ, ಅಂಕುಲ ಹತ್ತಿರ ವಾಟರ್ ಟ್ಯಾಂಕ್ ನಿರ್ಮಾಣದ ಯೋಜನೆಗಳು ಮತ್ತು ಅಂದಾಜುವೆಚ್ಚ ತಯಾರಿಸಬೇಕೆಂದು ಅಂದಿನ ಮುಖ್ಯಮಂತ್ರಿಯಾಗಿದ್ದ ಡಿ.ದೇವರಾಜು ಅರಸುರವರನ್ನು ಒತ್ತಾಯಿಸಿದರು.[44] ಈ ಮೂಲಕ ವಾಟರ್ ಟ್ಯಾಂಕ್ ನಿರ್ಮಾಣ ಮೂಲಕ ಜನ-ಜಾನುವಾರುಗಳಿಗೆ ಕುಡಿಯುವ ನೀರನ್ನು ಪೂರೈಸುವಲ್ಲಿ ಜಿ.ಮಾದೇಗೌಡರ ಚಿಂತನಾತ್ಮಕ ಹೋರಾಟ ಫಲಪ್ರದವಾಗಿದೆ ಎಂದು ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

**ವರುಣಾನಾಲಾ ಅಣೆಕಟ್ಟೆ ಕುರಿತು ಸದನದಲ್ಲಿ ಚರ್ಚೆ**

9ನೇ ಮೇ 1988ರಲ್ಲಿ ನಡೆದ ಸದನದಲ್ಲಿ ಸಭಾಧ್ಯಕ್ಷರು ಹಾಗೂ ನೀರಾವರಿ ಮಂತ್ರಿ, ಮುಖ್ಯಮಂತ್ರಿಯಾದ ದೇವರಾಜ ಅರಸ್‌ರವರ ಜೊತೆ ವರುಣಾನಾಲಾ ಅಣೆಕಟ್ಟಿನ ಬಗ್ಗೆ ಸಮಗ್ರವಾಗಿ ಸದನದಲ್ಲಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ. ನೀರಾವರಿಗೆ ಸಂಬಂಧಿಸಿದಂತೆ ನಮ್ಮ ಜಿಲ್ಲೆಯಲ್ಲಿರುವ ಕೃಷ್ಣರಾಜ ಸಾಗರ ಅಣೆಕಟ್ಟು ತಮಗೆ ಗೊತ್ತಿರುವ ಸಂಗತಿ ತಮಿಳುನಾಡು ಮುಖ್ಯಮಂತ್ರಿಗಳು ನಮ್ಮ ರಾಜ್ಯಸರ್ಕಾರಕ್ಕೆ ನೀರು ಕೊಡಬೇಕೆಂದು ಫೋನ್ ಮೂಲಕ ಬೇಡಿಕೆ ಇಟ್ಟಿದ್ದಾರೆ. ನಾನು ಮುಖ್ಯಮಂತ್ರಿಗಳಲ್ಲಿ ಬೇಡಿಕೊಳ್ಳುವುದು ಏನೆಂದರೆ ಕೃಷ್ಣರಾಜ ಸಾಗರ ಅಣೆಕಟ್ಟೆಯಲ್ಲಿ ಈಗಿನ ಸಂದರ್ಭದಲ್ಲಿ ಸುಮಾರು 97 ಅಡಿ ನೀರು ಮಾತ್ರ ಇದೆ. ಬಹುಶಃ ಇನ್ನೂ 4 ರಿಂದ 5 ಅಡಿ ಕೆಳಗಡೆ ನೀರು ಹೋದರೆ ಮೈಸೂರಿಗೆ ಕುಡಿಯುವ ನೀರಿಗೆ ತೊಂದರೆಯಾಗುತ್ತದೆ. ಕೃಷ್ಣರಾಜ ಸಾಗರ ಅಣೆಕಟ್ಟೆಯ ಕೆಳಪ್ರದೇಶದಲ್ಲಿ ಸಾವಿರಾರು ಎಕರೆ ಬೆಳೆಯನ್ನು ಬಿತ್ತಲಾಗಿದೆ. ಈ ಬೆಳೆಗಳಿಗೂ ತೊಂದರೆಯಾಗುತ್ತದೆ. ಈ ಪರಿಸ್ಥಿತಿ ಸರಿಹೋಗುವವರೆಗೆ ಯಾವ ಕಾರಣಕ್ಕೂ ಕೂಡ ದಯಮಾಡಿ ಕೃಷ್ಣರಾಜಸಾಗರ ಅಣೆಕಟ್ಟೆಯಿಂದ ತಮಿಳುನಾಡಿಗೆ ನೀರನ್ನು ಬಿಡಬಾರದಾಗಿ ಜಿ.ಮಾದೇಗೌಡರು ಕಳಕಳಿಯಿಂದ ಪ್ರಾರ್ಥಿಸಿಕೊಂಡಿದ್ದಾರೆ.

ಕೃಷ್ಣರಾಜ ಸಾಗರ ಅಣೆಕಟ್ಟೆಯ ಎಡದಂಡನಾಲೆಯಾದ ವಿಶ್ವೇಶ್ವರಯ್ಯ ನಾಲೆಯ ಪ್ರದೇಶದಲ್ಲಿ ರೈತರು ನಮ್ಮ ನೇತೃತ್ವದಲ್ಲಿ 1977 ರಲ್ಲಿ[45] ವರುಣಾ ನಾಲೆ ವಿರುದ್ದ ದೊಡ್ಡ ಚಳುವಳಿಯನ್ನು ಮೂರು ತಿಂಗಳ ಕಾಲ ನಡೆಸಿರುವುದು ಮಾನ್ಯ ಮುಖ್ಯಮಂತ್ರಿಗಳಾದ ತಮಗೂ ಸಂಬಂಧಪಟ್ಟ ಸಚಿವರುಗಳಿಗೂ, ಸದನಕ್ಕೂ ಇದೆ ಕರ್ನಾಟಕಕ್ಕೂ ತಿಳಿದಿರುವ ಸಂಗತಿಯಾಗಿದೆ. 1977 ರಲ್ಲಿ ದೊಡ್ಡ ಪ್ರಮಾಣದ ಹೋರಾಟ ನಡೆಸಿದರು. ವರುಣಾ ನಾಲೆ ಕಾಮಗಾರಿಯನ್ನು ಕೈಗೆತ್ತಿಕೊಂಡಿದೇ ಸಮಸ್ಯೆಗೆ ಕಾರಣವಾಯಿತು.

ಕೃಷ್ಣರಾಜ ಸಾಗರ ಅಣೆಕಟ್ಟಿಯ ಕೆಳ ಪ್ರದೇಶದಲ್ಲಿ ಸುಮಾರು ಎರಡು ಲಕ್ಷ ಎಕರೆ ಪ್ರದೇಶದ ಬೆಳೆಗಳಿಗೆ ಬಹಳ ತೊಂದರೆಯಾಗಿರುವುದನ್ನು ನಾನು ತಿಳಿಸಿದ್ದೇನೆ. ಆ ಪ್ರದೇಶದ ಜನರ ಜೀವನ್ಮರಣದ ಪ್ರಶ್ನೆ ಎಂಬುದನ್ನು ಅರ್ಥಮಾಡಿಕೊಂಡು ನಾನು ಹೋರಾಟನಡೆಸಿದ್ದನೆ. ನನ್ನ ನೇತೃತ್ವದಲ್ಲಿ ಸಾವಿರಾರು ರೈತರು, ಮುಖಂಡರುಗಳು ಬೆಂಗಳೂರಿಗೆ ಬಂದು ಅಂದಿನ ಮುಖ್ಯಮಂತ್ರಿಗಳು, ರಾಜ್ಯಪಾಲರನ್ನು ಭೇಟಿಮಾಡಿ ಸಮಸ್ಯೆಯನ್ನು ಸಮಗ್ರವಾಗಿ ಅನೇಕ ಬಾರಿ ಮಾತುಕತೆ ನಡೆಸಿ ಒಂದು ಒಪ್ಪಂದಕ್ಕೆ ಬಂದರು. ಈ ಒಪ್ಪಂದದ ಸಲುವಾಗಿಯೇ ವಿಶ್ವೇಶ್ವರಯ್ಯ ನಾಲಾ ಪ್ರದೇಶದ 22 ಲಕ್ಷ ಎಕರೆಗೆ ನೀರನ್ನು ಕೊಡಬೇಕು ಅನ್ನುವ ದೃಷ್ಟಿಯಿಂದ ಕೃಷ್ಣರಾಜ ಸಾಗರ ಎಡದಂಡೆ ನಾಲೆಯ ಆಧುನೀಕರಣ ಯೋಜನೆಯನ್ನು ಕೈಗೊಳ್ಳಬೇಕೆಂದು ವರುಣಾ ನಾಲಾ ಚಳುವಳಿಯ ಸಂದರ್ಭದಲ್ಲಿ ಒಪ್ಪಂದವಾಯಿತು. 1979 ರಲ್ಲಿ ಸರ್ಕಾರದಿಂದ ಆಜ್ಞಾಯೊಂದನ್ನು ಹೊರಡಿಸಲಾಯಿತು. ಮುಖ್ಯಮಂತ್ರಿ ಡಿ.ದೇವರಾಜ ಅರಸುರವರು ಈ ಒಂದು ಆಧುನೀಕರಣ ಯೋಜನೆ ಹಾಗೂ ವರುಣಾ ನಾಲೆ ಕೆಲಸವನ್ನು ಒಂದೇ ದಿವಸದಲ್ಲಿ ಪ್ರಾರಂಭ ಮಾಡುತ್ತೇವೆ ಎಂಬುದಾಗಿ ನಮಗೆ ಭರವಸೆಕೊಟ್ಟಿದ್ದಾರೆ. ಏಕಪ್ರಕಾರವಾಗಿ ಈ ಎರಡೂ ಕಾಮಗಾರಿಗಳನ್ನು ನಾಲ್ಕೈದು ವರ್ಷಗಳಲ್ಲಿ ಮುಗಿಸುತ್ತೇವೆ ಎಂದು ಸದನದಲ್ಲಿ ಮಾತನ್ನೂ ಕೊಟ್ಟಿದ್ದರು. ಆದರೆ ಕಳೆದ ಮೂರು ವರ್ಷದಿಂದ ಆಗಿರುವ ಕೆಲಸವನ್ನು ನೋಡಿದ್ದಾಗ ಒದಗಿಸಿರುವ ಹಣವನ್ನು ಅಧಿಕಾರಿಗಳು ದುರುಪಯೋಗ ಮಾಡಿಕೊಂಡಿದ್ದಾರೆ. ಇದರ ಬಗ್ಗೆ ಯಾವ ಕ್ರಮಗಳನ್ನು ತೆಗೆದು ಕೊಂಡಿದ್ದೀರಿ ಎಂಬುದನ್ನು ಸದನದಲ್ಲಿ ಚರ್ಚಿಸಿದ್ದಾರೆ. ವರುಣಾ ನಾಲೆಯಿಂದ ಆಗಬಹುದಾದ ಸಮಸ್ಯೆಗಳು ರೈತರ ಸಾವಿಗೆ ಕಾರಣವಾಗುತ್ತವೆ. ಸರ್ಕಾರ ಮಾಡಲು ಹೊರಟಿರುವ ಈ ಯೋಜನೆಯಿಂದಾಗಿ ಕುಡಿಯುವ ನೀರಿಗೂ ಅಭಾವ ಉಂಟಾಗುತ್ತದೆ. ಮುಖ್ಯಮಂತ್ರಿಗಳು ತಾವೇ ಖುದ್ದಾಗಿ ಬಂದು ಈ ಯೋಜನೆಯಿಂದಾಗುವ ಸಮಸ್ಯೆಯನ್ನು ಕಣ್ಣಾರೆ ನೋಡಿದ್ದಾರೆ. ಆದ್ದರಿಂದ ಈ ಯೋಜನೆಯಿಂದಾಗುವ ಸಾಧಕ-ಬಾಧಕಗಳ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರು ಆಲೋಚಿಸಿದ್ದರೆ ಸಮಸ್ಯೆಗಳು ಬರುತ್ತಿರಲಿಲ್ಲ ಎಂಬುದಾಗಿ ಸದನದಲ್ಲಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ.

## 1924ರ ಕಾವೇರಿ ನದಿ ನೀರಿನ ಒಪ್ಪಂದ ಬಗ್ಗೆ ಚರ್ಚೆ

1974ರಲ್ಲಿ ಜಿ.ಮಾದೇಗೌಡರು ಅಂದಿನ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಡಿ.ದೇವರಾಜ್ ಅರಸ್ ರವರೊಂದಿಗೆ ಸದನದಲ್ಲಿ 1924ರ ಕಾವೇರಿ ನದಿ ನೀರಿನ ಒಪ್ಪಂದ ಬಗೆಗೆ ಚರ್ಚಿಸಿದ್ದರು. 1924ರ ಕಾವೇರಿ ನದಿ ನೀರಿನ ಒಪ್ಪಂದವನ್ನು 1974 ರಲ್ಲಿ ಪರಿಷ್ಕರಿಸಲಾಗಿರುತ್ತದೆಯೇ ಎಂದು ಪ್ರಶ್ನಿಸಿದರು. ಅಲ್ಲದೆ ಕಾವೇರಿ ನದಿ ನೀರಿನ ಬಳಕೆಯ ಗರಿಷ್ಠ ಮಿತಿ ಅಸ್ಥಿತ್ವದಲ್ಲಿರುವ ಒಪ್ಪಂದದಂತೆ ಮುಂದಿನ ನಡೆಯನ್ನು ಚರ್ಚಿಸಲಾಗಿದೆಯೇ ಎಂದು ಪ್ರಸ್ತಾಪಿಸಿದರು. ಇದಕ್ಕೆ ಮುಖ್ಯಮಂತ್ರಿಗಳು ಉತ್ತರಿಸುತ್ತಾ, 1924ರ ಒಪ್ಪಂದವು ಭಾರತದ ಸುಪ್ರೀಂಕೋರ್ಟ್‌ನಲ್ಲಿ ಒಟ್ಟುಗೂಡಿದ ತಮಿಳುನಾಡು, ಕೇರಳ, ಮೈಸೂರು ರಾಜ್ಯಗಳಿಗೆ ಸಂಬಂಧಿಸಿದೆಂದು ವಾದಿಸಿದ್ದರೂ ಅದು ಇಂದು ರದ್ದಾಗದಿದ್ದರೂ ಪ್ರಸ್ತುತ ಮೈಸೂರು ರಾಜ್ಯಕ್ಕೆ ಬಂಧನಕಾರಕವಾಗಿಲ್ಲ ಇದು ಅಂತರರಾಜ್ಯ ಸಂಬಂಧಿತವಾದರಿಂದ, ಮೈಸೂರು ರಾಜ್ಯ, ತಮಿಳುನಾಡು, ಕೇರಳ ರಾಜ್ಯಗಳ ಮುಖ್ಯಮಂತ್ರಿಗಳು ಸಭೆಸೇರಿ ಒಮ್ಮತದ ಅಭಿಪ್ರಾಯಕ್ಕೆ ಬರಲಾಗಿದ್ದು ಇದಕ್ಕೆ ಸಂಬಂಧಿಸಿದಂತೆ ಕಾವೇರಿ ನದಿ ನೀರಿನ ಸಂಬಂಧಿಸಿದ ಅಂಕಿ ಅಂಶ ಸಂಗ್ರಹಕ್ಕೆ ಭಾರತ ಸರ್ಕಾರವು 'ಪೈಂಡಿಂಗ್ ಕಮಿಟಿ' ನೇಮಿಸಿ ಪರಿಷ್ಕರಿಸಿರುತ್ತದೆ ಎಂದಿದ್ದಾರೆ.[46] ಈ ರೀತಿಯಾಗಿ 1924ರ ಒಪ್ಪಂದವು ಮೈಸೂರು ರಾಜ್ಯದ ಮೇಲೆ ಬೀರಬಹುದಾಗಿದ್ದ ಪ್ರಭಾವವನ್ನು, ಅನಾನೂಕೂಲಗಳನ್ನು ತಪ್ಪಿಸಲು 1974ರ ಕಾವೇರಿ ನದಿ ನೀರಿನ ಒಪ್ಪಂದವನ್ನು ಪರಿಸ್ಕರಿಸಬೇಕೆಂದು ಮುಖ್ಯಮಂತ್ರಿಗಳಿಗೆ ಒಪ್ಪಂದದ ಬಗ್ಗೆ ಮನವರಿಕೆ ಮಾಡಿಕೊಟ್ಟರು. ಅಂತೆಯೇ ಗೊರೂರು ಡ್ಯಾಂನ ನೀರಾವರಿ ಸೌಲಭ್ಯಗಳನ್ನು ಪಡೆಯಲು ಅವಕಾಶವಿದೆಯೇ ಎಂದು, ಗೋರರೂ ಡ್ಯಾಂನಿಂದ ನಾಗಮಂಗಲ ತಾಲ್ಲೂಕಿಗೆ ನೀರಾವರಿ ಸೌಲಭ್ಯ ಒದಗಿಸುವುದು ಖಚಿತವಾಗಿದೆಯೇ ಎಂದು ಪ್ರಸ್ತಾಪಿಸಿತ್ತಾರೆ. ಇದಕ್ಕೆ ಸಂಬಂಧಿಸಿದ ಸಚಿವರು ಪ್ರಗತಿಯಲ್ಲಿದೆ ಎಂದಿರುತ್ತಾರೆ.[47] ಈ ರೀತಿಯಾಗಿ ರೈತರ ಮೇಲಿನ ಕಾಳಜಿ ಅಪಾರವಾಗಿದ್ದು ಕಾವೇರಿ ಮತ್ತು ಹೇಮಾವತಿ ನದಿಗಳ ನೀರು ಸಮರ್ಪಕ ಬಳಕೆಯ ಬಗ್ಗೆ ಜಿ.ಮಾದೇಗೌಡರು ತೋರಿಸಿದ ಚಿಂತನಾಕಾರ್ಯ ಮಹತ್ವದ್ದಾಗಿದೆ.

## ರಾಜ್ಯ ನೀರಾವರಿ ಯೋಜನೆಗಳ ಬಗ್ಗೆ ಸರ್ಕಾರದ ನಿರ್ಲಕ್ಷ್ಯ ಕುರಿತು ಚರ್ಚೆ

1988ರ ಮಾರ್ಚ್ ತಿಂಗಳ ಶಾಸಕಾಂಗಸಭೆಯಲ್ಲಿ ಕರ್ನಾಟಕ ನೀರಾವರಿ ಯೋಜನೆ ನಿಧಾನವಾಗುತ್ತಿರುವ ಬಗ್ಗೆ ಹಕ್ಕುಚ್ಯುತಿ ನಿರ್ಣಯವನ್ನು ಮಂಡಿಸಲಾಯಿತು. ಆ ಸಂದರ್ಭದಲ್ಲಿ ಜಿ.ಮಾದೇಗೌಡರು ಮಾತನಾಡುತ್ತಾ ಸಭಾಧ್ಯಕ್ಷರಾಗಿದ್ದ ಎ.ಲಕ್ಷ್ಮೀಸಾಗರರವರಿಗೆ 1976ರ 'ಬಜಾವತ್ ಆಯೋಗದ' ಪ್ರಕಾರ ಸಭೆಯಲ್ಲಿ ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂದ್ರ ಪ್ರದೇಶ ಈ ಮೂರು ರಾಜ್ಯಗಳು ಸೇರಿ ತಮ್ಮ

ಪಾಲಿನ 5 ಟಿ.ಎಂ.ಸಿ.ಎಫ್.ಟಿ. ನೀರನ್ನು ಮದ್ರಾಸಿಗೆ ಕುಡಿಯುವ ನೀರಿನ ಸರಬರಾಜಿಗಾಗಿ ಬಿಡುಗಡೆ ಮಾಡಬೇಕು ಎಂದು ಒಪ್ಪಂದ ಆಗಿದೆ. ಇದೇ ರೀತಿ ಕುಡಿಯುವ ನೀರಿನ ಇತರೆ ಪ್ರಾಜೆಕ್ಟ್‌ಗಳೆಂದರೆ ಅಪ್ಪರ್ ಕೃಷ್ಣ ಪ್ರಜೆಕ್ಟ್, ಘಟಪ್ರಭಾ, ಮಲಪ್ರಭಾ, ಸೌದಾಗರ ಪ್ರಾಜೆಕ್ಟ್, ಲೋಯರ್ ಮುಲ್ಲಾಮುರಿ ಪ್ರಾಜೆಕ್ಟ್‌ಗಳು ಕೂಡ ತುಂಗಭದ್ರಾ ಅಧೀನದಲ್ಲಿ ಬರುತ್ತವೆ. ಅಂದರೆ ಬಚಾವತ್ ಆಯೋಗದ ಪ್ರಕಾರ ಸು. 800 ಟಿ.ಎಂ.ಸಿಎಫ್.ಟಿ. ನೀರನ್ನು ಆಂದ್ರವರಿಗೆ ಸುಮಾರು 700 ಟಿ.ಎಂ.ಸಿ.ಎಫ್ ನೀರನ್ನು ಕರ್ನಾಟಕಕ್ಕೆ ಸು. 560 ಟಿ.ಎ..ಸಿ.ಎಫ್.ಟಿ. ನೀರನ್ನು ಮಹಾರಾಷ್ಟ್ರಕ್ಕೆ ನಿಗಧಿ ಅದಂಥ ನೀರನ್ನು ಅವರು ಈಗಾಗಲೇ ಸಂಪೂರ್ಣವಾಗಿ ಉಪಯೋಗ ಮಾಡಿಕೊಂಡಿದ್ದಾರೆ.[48] ಈ ಹಂತದಲ್ಲಿ ಅವರು ಮತ್ತೇ ಹೆಚ್ಚಿನ ನೀರನ್ನು ಉಪಯೋಗ ಮಾಡಿಕೊಳ್ಳಲು ತೆಲುಗು ಗಂಗಾ ಹೊಸ ಪ್ರಾಜೆಕ್ಟ್‌ನ್ನು ತಯಾರು ಮಾಡಿ ಅಂದರೆ ಅವರು ಬರಗಾಲ ಪೀಡಿತ ಪ್ರದೇಶಗಳಾದ ರಾಯಲ್ ಸೀಮೆಯ ಚಿತ್ತೂರು ಜಿಲ್ಲೆಯ ಕರ್ನೂಲು, ನೆಲ್ಲೂರು ಭಾಗದವರೆಗೆ ನೀರಾವರಿ ವಿಸ್ತರಿಸಬೇಕೆಂದು ಸು. 200 ಕಿ.ಮಿ. ವರೆಗೆ ತಂದು, ಇದಕ್ಕಾಗಿ ಹೆಚ್ಚಿನ ಹಣವನ್ನು ವೆಚ್ಚ ಮಾಡಿ ಕೆಲಸ ಪ್ರಾರಂಭ ಮಾಡಿರುತ್ತಾರೆ. ಇದಕ್ಕೆ ಈಗಾಗಲೇ 280 ಕೋಟಿ ರೂಪಾಯಿಗಳ ಹಣವನ್ನು ಖರ್ಚು ಮಾಡಿದ್ದಾರೆ. ಆಂಧ್ರದ ತೆಲುಗು, ಗಂಗಾ ಯೋಜನೆ, ಶ್ರೀ ಶೈಲಂ ರೈಟ್ ಕೆನಾಲ್ ಯೋಜನೆಯಿಂದಾಗಿ ಕರ್ನಾಟಕದವರೆಗೆ ಅದರಲ್ಲೂ ಹಿಂದುಳಿದ ಭಾಗ ಉತ್ತರ ಕರ್ನಾಟಕದ ರೈತರಿಗೆ ದೊಡ್ಡಹಾನಿಯಾಗುತ್ತದೆ. ಈ ಆಂಧ್ರದ ಪ್ರಾಜೆಕ್ಟ್‌ನಿಂದ ಕರ್ನಾಟಕದ ರೈತರ ಕೊಲೆಯಾಗುತ್ತದೆ ಎಂದು ಸ್ಪಷ್ಟವಾಗಿ ಸರ್ಕಾರಕ್ಕೆ ತಿಳಿಸಿರುತ್ತಾರೆ. ಅಲ್ಲದೆ ಈ ಸಮಸ್ಯೆಗೆ ಪರಿಹಾರವನ್ನು ಜಿ.ಮಾದೇಗೌಡರೆ ಸೂಚಿಸಿರುತ್ತಾರೆ. ಕರ್ನಾಟಕ ಸರ್ಕಾರವು ಕೃಷ್ಣ ಬೇಸಿನ್ ನೀರಾವರಿ ಕಾರ್ಯಚಟುವಟಿಕೆಗಳಿಗಾಗಿ ಬಜೆಟ್‌ನಲ್ಲಿ ಸಾಕಷ್ಟು ಹಣವನ್ನು ಬಿಡುಗಡೆ ಮಾಡಬೇಕು. ಈ ಬಗ್ಗೆ ನೀರಾವರಿ ಸಚಿವರು ಹಾಗೂ ಮುಖ್ಯಮಂತ್ರಿಗಳ ಇಚ್ಛಾಶಕ್ತಿ ಅಗತ್ಯ ಎಂದಿದ್ದಾರೆ. ಕೃಷ್ಣ ಬೇಸಿನ ಪ್ರಾಜೆಕ್ಟ್‌ಗಳನ್ನು ಸಂಪೂರ್ಣವಾಗಿ ಕಾರ್ಯಗತಗೊಳಿಸಲು ರೂ. 4000 ಕೋಟಿ ಅಗತ್ಯವಿದೆ. ಅದೇ ರೀತಿ ಕಾವೇರಿ ಬೇಸಿನ್ ಪ್ರಾಜೆಕ್ಟ್ ಪೂರ್ಣಗೊಳ್ಳಲು ರೂ. 1000 ಕೋಟಿ ಬೇಕಾಗುತ್ತದೆ. ಇವೆಲ್ಲವೂ ಪೂರ್ಣಗೊಳ್ಳಲು ನಮಗೆ ಸು. 10 ವರ್ಷಗಳೇ ಆಗುತ್ತವೆ ಎಂದಿದ್ದಾರೆ. ಹೀಗಾಗಿ ಈ ಕಳೆದ ವರ್ಷ ರೂ. 300 ಕೋಟಿಯನ್ನು ಕೃಷ್ಣ ಬೇಸಿನ್ ಪ್ರಾಜೆಕ್ಟ್‌ಗೆ ತೋರಿಸಿ ಕೇವಲ 117 ಕೋಟಿ ರೂಪಾಯಿಗಳು ಮಾತ್ರ ಖರ್ಚು ಆಗಿದೆ. (ಎಲ್ಲಾ ನೀರಾವರಿ ಪ್ರಾಜೆಕ್ಟ್ ಸೇರಿ) ಎಂದು ವಿವರಿಸುತ್ತಾ ಈ ಬಗ್ಗೆ ಕೇಳಿದರೆ ಗಮನ ಕೊಡುತ್ತಿಲ್ಲ. ರಾಜ್ಯವು ಹಕ್ಕು ಬಿಟ್ಟು ಕೊಡುವುದಿಲ್ಲ ಎನ್ನುತ್ತಾರೆ. ಈಗಾಗಲೇ ಕೇಂದ್ರ ಸರ್ಕಾರಕ್ಕೂ ತಿಳಿಸಿದ್ದೇವೆ, ಪ್ರಧಾನಮಂತ್ರಿಯವರಿಗೆ ಪತ್ರ ಬರೆದಿದ್ದೇವೆ ಎಂದೂ ಮುಖ್ಯಮಂತ್ರಿಗಳು ಉತ್ತರಿಸುತ್ತಾರೆ.[49] ಆದರೆ ಆಂಧ್ರಪ್ರದೇಶ ಸರ್ಕಾರದ

ಮುಖ್ಯಮಂತ್ರಿಗಳು ತಮಗೆ ಅಲಾಟ್ ಆದ ಸು. 800 ಟಿ.ಎಂ.ಸಿ.ಎಫ್.ಟಿ. ನೀರನ್ನು ಸಂಪೂರ್ಣವಾಗಿ ರೂಸ್ ಮಾಡಿದರೂ ಕೂಡ ಶ್ರೀ ಶೈಲಂ ರೈಟ್ ಬ್ಯಾಂಕ್ ಕೆನಾಲ್ ಅನ್ನು ತೆಲುಗು ಗಂಗಾ ಯೋಜನೆಯಲ್ಲಿ ನೀರಾವರಿ ವಿಸ್ತರಣೆಗಾಗಿ ಮಾಡಿಕೊಂಡು ಹೋಗುತ್ತೇವೆ ಎಂದು ಹಠ ಹಿಡಿದು ಇದಕ್ಕಾಗಿ ಶ್ರೀ ಶೈಲಂ ಡ್ಯಾಂ ಎತ್ತರ ಮಾಡಿ ಇದಕ್ಕಾಗಿ ಕೆಳೆದ ಸಲ 100 ಕೋಟಿ ರೂ. ಪ್ರಾವಿಜನ್ ಮಾಡಿದ್ದು ಈಗಾಗಲೇ ಸುಮಾರು 280 ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ.

ಆದುದರಿಂದ ನಮ್ಮ ರಾಜ್ಯ ಸರ್ಕಾರದ ನಡೆ ಈ ವಿಚಾರದಲ್ಲಿ ಖಂಡನೀಯ ಸರ್ಕಾರದ ನಿರಾಸಕ್ತಿ, ನಿರ್ಲಕ್ಷ್ಯವೆ, ಕಾರಣವಾಗಿದೆ. ನೀರನ್ನು ನ್ಯಾಯವಾಗಿ ಕರ್ನಾಟಕಕ್ಕೆ ಉಪಯೋಗಮಾಡಿಕೊಳ್ಳಬೇಕೆಂಬ ಮನೋಭಾನೆಯನ್ನು ಇಟ್ಟುಕೊಂಡಿಲ್ಲ ಎನ್ನುತ್ತಾರೆ. ಹೀಗಾದರೆ 300 ಟಿ.ಎಂಸಿ.ಎಫ್.ಟಿ. ನೀರು ಅಂದ್ರಕ್ಕೆ ಸೋರಿಕೆಯಾಗುತ್ತದೆಂದು ಕಳಕಳಿ ವ್ಯಕ್ತಪಡಿಸಿರುತ್ತಾರೆ. ಈ ಅಂತರ ರಾಜ್ಯ ನೀರು ಹಂಚಿಕೆ ಹೋರಾಟ ಇವತ್ತಿನದಲ್ಲ ಎನ್ನುತ್ತಾ ಬ್ರಿಟಿಷ್ ಕಾಲದಲ್ಲೇ ಈ ರೀತಿ ಹಂಚಿಕೆ ವಿಚಾರಗಳನ್ನು ನಿರ್ಣಯಿಸಿ ಒಪ್ಪಂದಗಳಾಗಿರುತ್ತವೆಂದು ಸದನಕ್ಕೆ ತಿಳಿಸಿರುತ್ತಾರೆ.[50] ಈ ಬಗ್ಗೆ 1951 ಇಸವಿ, ಅದಕ್ಕಿಂತ ಮುಂಚಿತವಾಗಿಯೂ ನಿರ್ಣಯಗಳು ಭಾರತದಲ್ಲಾಗಿವೆ ಎಂದು ಪ್ರಸ್ತಾಪಿಸಿರುತ್ತಾರೆ. ಆಂಧ್ರದ ಈ ಯೋಜನೆಯ ಬಗೆಗೆ ಅನೇಕ ದಿನಪತ್ರಿಕೆಗಳಲ್ಲಿ ಪ್ರಕಟವಾಗಿದೆ ಎನ್ನುತ್ತಾ 'ದಿ ಹಿಂದೂ' ಪತ್ರಿಕೆಯಲ್ಲಿ ಅಂದ್ರ ಮುಖ್ಯಮಂತ್ರಿ ಎನ್.ಟಿ.ರಾಮರಾವ್ ಈ ರೀತಿ ಹೇಳಿಕೆ ಕೊಟ್ಟಿದ್ದಾರೆ. ಹೀಗೆ ಇದರ ಜೊತೆಗೆ ಶ್ರೀ ಶೈಲ ಡ್ಯಾವರ್ ಕೆನಾಲ್ ವಿಸ್ತರಣೆ ಸೇರಿಸಿರುತ್ತಾರೆ. ಹೀಗಾಗಿ ಜಿ.ಮಾದೇಗೌಡರು ಕರ್ನಾಟಕಕ್ಕೆ ನಿಗಧಿ ಅದ ನೀರು ಸಂಪೂರ್ಣ ಸದ್ಬಳಕೆ ಅಗುತ್ತಿಲ್ಲವೆಂದು ಬಹಳ ವಿಷಾದದಿಂದ ಚರ್ಚಿಸಿರುವುದು ಕಂಡುಬರುತ್ತದೆ. ಈ ಚರ್ಚೆ ಸದನದಲ್ಲಿ 30 ಮಾರ್ಚ್ 1988 ರಲ್ಲಿ ನಡೆಯುತ್ತಿರುವ ವೇಳೆಯೇ ನೀರಾವರಿ ಸಚಿವರು ರಾಜೀನಾಮೆ ನೀಡಿರುತ್ತಾರೆ. ಮಾನ್ಯ ಮುಖ್ಯಮಂತ್ರಿಯವರಿಗೆ ಈ ಬಗ್ಗೆ ವಿಸ್ತರಿಸುತ್ತಾ ನಮ್ಮಲ್ಲಿ ನೀರಾವರಿ ವಿಸ್ತರಣೆಗಾಗಿ ಸಾಕಷ್ಟು ಹಣ ಬಜೆಟ್‌ನಲ್ಲಿ ಮೀಸಲಿಡಬೇಕೆಂದು ಸದನದಲ್ಲಿ ಪಾಸ್ ಆದ ರೆಸೆಲ್ಯೂಶನ್ ಸಂಪೂರ್ಣವಾಗಿ ಅವಿರೋಧವಾಗಿ ಎಲ್ಲರೂ ಒಪ್ಪಿಕೊಂಡಿದ್ದಾಗಿದೆ. ಅದರೂ ಇದಕ್ಕೆ ಕಿಂಚಿತ್ತು ತಾವು ಬೆಲೆ ನೀಡಿಲ್ಲ ಎನ್ನುತ್ತಲೇ ಬಜೆಟ್ ಪ್ರಾವಿಜನ್‌ನಲ್ಲಿ ಕಾಲುಭಾಗವನ್ನು ಕೂಡ ಖರ್ಚು ಮಾಡಿಲ್ಲ ಇದರ ಅರ್ಥ ಏನು ಎಂದು ನಿರ್ಭಯವಾಗಿ ಪ್ರಶ್ನಿಸಿರುತ್ತಾರೆ. ಷೇರು ಬಂಡವಾಳವು ಇಲ್ಲ ಇದರಲ್ಲಿ ಮುಖ್ಯಮಂತ್ರಿಗಳಿಗೆ ಇತ್ಯರ್ಥ ಮನೋಭಾವವೂ ಇಲ್ಲ. ಆ ಭಾಗದ ಜನರಿಗಾಗಿ ಕೆಲಸ ಮಾಡಬೇಕೆಂಬ ಮನಸ್ಸು ಇಲ್ಲದಿದ್ದರೆ ಹೇಗೆ ಜನರ ಕಲ್ಯಾಣ ಮಾಡುತ್ತೀರಿ ಜನ ಕಲ್ಯಾಣಕ್ಕೆ ಮನಸ್ಸಿದ್ದರೆ ಈ ಕಾರ್ಯ ಸಾಧನೆಗೆ ಹಣವನ್ನು ಯಾವ ರಿತಿಯಿಂದಲಾದರೂ ಒದಗಿಸುತ್ತಾ ಇದ್ದೀರಿ ಎಂದಿರುತ್ತಾರೆ ನಮ್ಮ ಕರ್ನಾಟಕ ರಾಜ್ಯದಲ್ಲಿ 21% ನೀರಾವರಿ ವ್ಯವಸ್ಥೆ ಇದೆ, ನಮ್ಮ ಭಾಗಕ್ಕೆ 3% ಇದೆ ಕರ್ನಾಟಕದ ಎಲ್ಲಾ

ಜಿಲ್ಲೆಗಳಲ್ಲೂ ಇದಕ್ಕಿಂತ ಕಡಿಮೆಯೇ ಇದೆ ಇಂತಹ ಪರಿಸ್ಥಿತಿಯಲ್ಲಿ ಈ ಭಾಗಗಳಲ್ಲಿ ನೀರಾವರಿ ಯೋಜನೆ ಕೈಗೊಳ್ಳಲು ಏತಕ್ಕಾಗಿ ಆಸಕ್ತಿ ತೋರಿತಿಲ್ಲ ಅದರೆ ಆಂದ್ರದವರು ಇಂತಹ ಯೋಜನೆಗಳಲ್ಲಿ ಬಹಳ ಮುಂದೆ ಇದ್ದಾರೆ ಇದಕ್ಕಾಗಿ ಬೇಕಾದಷ್ಟು ಹಣ ಖರ್ಚು ಮಾಡುತ್ತಿದ್ದಾರೆ ಅವರು 1990–91 ಇಸವಿ ಹೊತ್ತಿಗೆ ಜನತೆಗೆ ಪ್ರತಿಜ್ಞೆ ನೀಡಿದಂತೆ ತೆಲುಗು ಗಂಗಾ ಯೋಜನೆ ಪ್ರಾಜೆಕ್ಟ್ ಮುಗಿಸುತ್ತಾರೆ.[51] ಆಗ ನಮ್ಮ ಗತಿ ಏನಾಗುತ್ತದೆ ಒಟ್ಟಿನಲ್ಲಿ ಇದು ಕೂಡ ನಾವು ತಮಿಳುನಾಡಿನವರು ಪದೆ ಪದೆ ಕೇಳಿಕೊಂಡಾಗ ಮೆಟ್ಟೂರು ಡ್ಯಾಂಗೆ ಕಾವೇರಿ ನೀರನ್ನು ಬಿಟ್ಟು ಹಾಗೆಯೇ ಆಗುತ್ತದೆ. ಇಂತಹ ಸ್ಕೀಮ್‌ಗಳನ್ನು ನಾವು ತಡೆಯಬೇಕೆಂದರೆ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸ ಬೇಕೆಂದು ಪರಿಹಾರ ಸೂಚಿಸಿರುತ್ತಾರೆ. ಇಲ್ಲದಿದ್ದಲ್ಲಿ ಕರ್ನಾಟಕದ ಜನತೆಗೆ ದ್ರೋಹ ಮಾಡಿದಂತೆ ಆಗುತ್ತದೆ ಸ್ಪಷ್ಟವಾಗಿ ಹೇಳಿದ್ದಾರೆ.

ಈ ಯೋಜನೆಗಳಿಗೆ ನೀವು ಕೇವಲ 50 ಲಕ್ಷ ನೀಡಿದರೆ ಸಾಕಾಗುವುದಿಲ್ಲ. ನಿಮ್ಮ ಪಬ್ಲಿಸಿಟಿಗಾಗಿ 300 ಕೋಟಿ ನೀಡುತ್ತೇವೆ ಎನ್ನುತ್ತೀರ ಇದಕ್ಕೆ 50 ಲಕ್ಷ ಮಂಜೂರು ಮಾಡುತ್ತೀರ ಇದು ತಪ್ಪು ಮಾಡಿದಾಗೆ ಆಗುತ್ತದೆ. ಏಕೆ ಇತರೆ ಸರ್ಕಾರಿ ಪ್ರಚಾರಕ್ಕೆ, ರಾಜಕೀಯವಾಗಿ ವೈಯಕ್ತಿಕವಾಗಿ ಆಗಿ ನಿಮ್ಮ ವ್ಯಕ್ತಿತ್ವ ಬೆಳೆಯಬೇಕೆಂದು ಪ್ರಚಾರಕ್ಕಾಗಿ, ಅಂತರಾಷ್ಟ್ರೀಯ ಸಮ್ಮೇಳನಗಳಿಗೆ ಹೋಗುವುದಕ್ಕೆ ಮತ್ತು ಏರ್ಪಡಿಸಲು ಹಣ ಇರುತ್ತದೆ. ಆದರೆ ಇಡೀ ರಾಜ್ಯದ ಅರ್ಥಿಕ ಅಭಿವೃದ್ದಿಗೆ ಜನಾಂಗದ ಕಲ್ಯಾಣಕೆಲಸಗಳಿಗೆ ನೀವು ಮಹತ್ವ ನೀಡುತ್ತಿಲ್ಲ ಎಂದು ನುಡಿದಿರುವುದು ಕಂಡು ಬರುತ್ತದೆ.[52] ಜಿ.ಮಾದೇಗೌಡರು ಕೃಷಿ ಅಭಿವೃದ್ದಿಗೆ ಪೂರಕವಾಗಿ ನೀರಾವರಿ ಅಗತ್ಯವೆಂಬ ದೂರದೃಷ್ಟಿ ಯೋಜನೆ ಹೊಂದಿದ್ದರು ಎಂಬುದು ವ್ಯಕ್ತವಾಗುತ್ತದೆ.

**ಅಂತರ್ಜಲ ಕುಸಿತದ ಬಗ್ಗೆ ಚರ್ಚೆ**

1982ರ ಸದನದಲ್ಲಿ ಜಿ.ಮಾದೇಗೌಡರು ಅಂತರ್‌ಜಲದ ಬಗ್ಗೆ ಮಾತನಾಡುತ್ತಾ ಜೀವಜಲದ ಹೆಚ್ಚಳದಲ್ಲಿ ಅಂತರ್ಜಾಲದ ಪಾತ್ರ ಮುಖ್ಯವಾದುದು. ಅಂತರ್ಜಲವು ಕೆರೆ, ಕಾಲುವೆ, ಬಾವಿ, ಕಟ್ಟೆಗಳು ತುಂಬುವುದರಿಂದ ಉತ್ತಮ ಮಟ್ಟದಲ್ಲಿರುತ್ತವೆ. ಆದರೆ ಇಂದು ಕಾಲಕಾಲಕ್ಕೆ ಮಳೆಯ ಅಭಾವದಿಂದ ಅಂತರ್ಜಲ ಮಟ್ಟ ಕುಸಿಯುತ್ತಿದೆ. ಆದ್ದರಿಂದ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಬಾವಿಗಳ ಸಂಖ್ಯೆಗಳನ್ನು ಸಮೀಕ್ಷೆ ಮಾಡಿಸಬೇಕು. ಹೊಸ ಬಾವಿಗಳನ್ನು ತೆರೆಯಲು ಜಿಯಾಲಿಜಿಸ್ಟ್‌ಗಳ ಮೂಲಕ ಸ್ಥಳ ಪರಿಶೀಲನೆ ಮಾಡಿಸಬೇಕು. ಇದರ ಖರ್ಚು 10 ರೂಪಾಯಿಗಳು ಮಾತ್ರ ಆಗುತ್ತದೆ. ನೀರು ಇರುವ ಬಾಪಿಗಳು, ಬತ್ತಿದ ಬಾವಿಗಳ ಬಗ್ಗೆ ವರದಿಯನ್ನು ತರಿಸಿಕೊಂಡು ಅಂತರ್ಜಾಲ ಮಟ್ಟವನ್ನು ಉತ್ತಮ ಪಡಿಸಿಲು ಕ್ರಮಗಳನ್ನು ಕೈಗೊಳ್ಳಬೇಕು.[53] ಹೊಸ ಬಾವಿಗಳನ್ನು ತೆರೆಯುವ ಸಂದರ್ಭದಲ್ಲಿ ಅಂತರ್ಜಾಲ ಮಟ್ಟವನ್ನು ಗುರುತಿಸಿ ತೆರೆಯಬೇಕೆಂದು

ಯೋಜನೆಗಳನ್ನು ರೂಪಿಸಿದರು. ಅಲ್ಲದೆ ಅಂತರ್ಜಲದ ಸಮತೋಲನ ಮಟ್ಟವನ್ನು ಕಾಯ್ದುಕೊಳ್ಳುವುದು ಪರಿಸರ ಸಂರಕ್ಷಣೆಗೆ ಪೂರಕವಾಗಿದೆ ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಪ್ರಕೃತಿ ವಿಕೋಪದ ಬಗ್ಗೆ ಚರ್ಚೆ ಮತ್ತು ವಿಚಾರಧಾರೆಗಳು**

ಜಿ.ಮಾದೇಗೌಡರು ಕಂದಾಯ ಸಚಿವರಾಗಿದ್ದ ಹುಚ್ಚಮಾಸ್ತಿಗೌಡರನ್ನು ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೋಕಿನ ದೊಡ್ಡೆಗೌಡನ ಕೊಪ್ಪಲು ಪ್ರದೇಶದಲ್ಲಿ ಇತ್ತೀಚೀಗೆ ಸಂಭವಿಸಿದ ಭೂಕಂಪದ ಬಗ್ಗೆ ಪ್ರಸ್ತಾಪಿಸಿ ಅಲ್ಲಿನ ಜನಗಳು ಸಂಕಷ್ಟಕ್ಕೆ ಸಿಲುಕಿದ್ದಾರೆ. ಅವರಿಗೆ ಪರಿಹಾರ ನೀಡಬೇಕೆಂದು ಒತ್ತಾಯಿಸಿದರು. ಈ ಬಗ್ಗೆ ಕಾರ್ಯಾಚರಣೆ ಕೈಗೊಳ್ಳಲಾಗಿದೆಯೇ ಅಲ್ಲದೆ ಹಾನಿಗೊಳಗಾದ ಜೀವಗಳು ಮತ್ತು ಅಸ್ತಿ ನಷ್ಟವನ್ನು ಅಂದಾಜಿಸಲಾಗಿದೆಯೇ ಎಂದು ಅಂಕಿ ಅಂಶಗಳ ಬಗ್ಗೆ ಸದನದಲ್ಲಿ ಪ್ರಶ್ನಿಸಿದರು. ಇದಕ್ಕೆ ಕಂದಾಯ ಸಚಿವರು ಉತ್ತರಿಸುತ್ತಾ ಈ ದುರ್ಘಟನೆಯಲ್ಲಿ ನೊಂದವರಿಗೆ ಮಂಡ್ಯ ಜಿಲ್ಲಾ ಡೆಪ್ಯೂಟಿ ಕಮೀಷನರ್‌ರವರು ರೂ. 50,000 ಹಣವನ್ನು ತಕ್ಷಣದ ಪರಿಹಾರ ಕಾರ್ಯಕ್ಕೆ ನೀಡಿರುತ್ತಾರೆ. ಈ ಹಣವನ್ನು ಭೂ ರಹಿತ ಕಾರ್ಮಿಕರಿಗೆ ನೀಡಲಾಗಿದ್ದು ನಂತರದಲ್ಲಿ ಸಂಬಂಧಪಟ್ಟವರನ್ನು ಪರಿಹಾರ ಕಾರ್ಯಕ್ರಮಕ್ಕೆ ಪರಿಗಣಿಸಿ ನೀಡಲಾಗುವುದೆಂದು ಮಾಹಿತಿ ನೀಡುತ್ತಾರೆ. ಭೂಕಂಪನದ ದುರ್ಘಟನೆಯಿಂದ ಜೀವಕ್ಕೆ ತೊಂದರೆಯಾಗಿಲ್ಲ. ಆದರೆ 227 ಮನೆಗಳೂ ಹಾನಿಗೊಳಗಾಗಿವೆ. ಇದರ ದುರಸ್ತಿ ಮತ್ತು ಪುನಶ್ಚೇತನಕ್ಕಾಗಿ ರೂ. 1,16,803 ಖರ್ಚನ್ನು ಅಂದಾಜಿಸಲಾಗಿದೆ ಎಂದು ಉತ್ತರಿಸಿರುತ್ತಾರೆ.[54] ಈ ರೀತಿಯಾಗಿ ಭೂಕಂಪಕ್ಕೆ ಒಳಗಾದ ಜನರಿಗೆ ಪರಿಹಾರ ಕೊಡಿಸುವಲ್ಲಿ ಮತ್ತು ಪ್ರಕೃತಿವಿಕೋಪಗಳ ಸಂದರ್ಭದಲ್ಲಿ ಪರಿಹಾರೋಪಾಯ ಕಾರ್ಯಗಳನ್ನು ತೊಂದರೆಗಳೊಳಗಾದ ಜನರುಗಳಿಗೆ ತಲುಪಿಸುವಲ್ಲಿ ಜಿ.ಮಾದೇಗೌಡರ ಚಿಂತನೆ ಯಶಸ್ವಿಯಾಯಿತೆಂದು ಸಂಶೋಧನೆಯಿಂದ ಅರಿಯಲಾಗಿದೆ.

ಜಿ.ಮಾದೇಗೌಡರು ಕೈಗಾರಿಕಾ ಸಚಿವರಾಗಿದ್ದ ಎಸ್.ಎಂ.ಕೃಷ್ಣರವರಿಗೆ ಹಾಸನದಲ್ಲಿರುವ ಮೈಸೂರು ಇಂಪ್ಲಿಮೆಂಟ್ ಫ್ಯಾಕ್ಟರಿಯ ಬಗ್ಗೆ ಸದನದಲ್ಲಿ ಪ್ರಶ್ನಿಸಿದರು. ಈ ಫ್ಯಾಕ್ಟರಿ ವ್ಯವಸಾಯೋಪಕರಣ ತಯಾರಿಕೆಯಲ್ಲಿ ನಷ್ಟ ಹೊಂದಿರುವುದಾಗಿ ತಿಳಿಸಿದರು. ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್‌ಗೆ ಕೇಂದ್ರ ಸರ್ಕಾರದವರು ವ್ಯವಸಾಯೋಪಕರಣ ತಯಾರಿಸಲು ಗ್ರಾಂಟ್ ಹಾಗೂ ಲೈಸೆನ್ಸ್ ಕೊಟ್ಟಿದ್ದರು ಇನ್ನೂ ಸಹ ಪ್ರಾರಂಭ ಮಾಡದಿರುವುದಕ್ಕೆ ಕಾರಣವೇನು ಎಂಬ ಬಗ್ಗೆ ಉತ್ತರಿಸುವಂತೆ ಕೈಗಾರಿಕಾ ಸಚಿವರನ್ನು ಕೇಳಿದರು. ಇದಕ್ಕೆ ಸಚಿವರು ಉತ್ತರಿಸುತ್ತಾ ಈ ಮೈಸೂರು ಇಂಪ್ಲಿಮೆಂಟ್ ಕಾರ್ಖಾನೆಯನ್ನು ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್‌ಗೆ ಕೇಂದ್ರ ಸರ್ಕಾರದವರು ವ್ಯವಸಾಯ ಉಪಕರಣವನ್ನು ತಯಾರು ಮಾಡಲು ಕೊಟ್ಟರೆ

ವ್ಯವಸಾಯವನ್ನೆ ಅವಲಂಬಿಸಿರತಕ್ಕಂಥ ಈ ಉದ್ಯಮದವರಿಂದ ಹೆಚ್ಚು ಕೋ ಆರ್ಜಿನೇಷನ್ ಆಗಿರುತ್ತದೆಂದು ಉತ್ತರಿಸಿರುತ್ತಾರೆ.[48] ಈ ರೀತಿಯಾಗಿ ವ್ಯವಸಾಯ ಉಪಕರಣಗಳು ರೈತರಿಗೆ ಅವಶ್ಯಕವಾಗಿದ್ದು, ಸಕಾಲಕ್ಕೆ ಒದಗಿಸಬೇಕೆಂದು ಮನವರಿಕೆ ಮಾಡಿದರು. ಅಲ್ಲದೆ ಹಾಸನದಲ್ಲಿರುವ ಮೈಸೂರು ಇಂಪ್ಲಿಮೆಂಟ್ ಫ್ಯಾಕ್ಟರಿಯು ಕಾರ್ಯರೂಪದಲ್ಲಿರಲಿ ಅದಕ್ಕೆ ಅಡಚಣೆಯಾಗಿರುವ ಸಮಸ್ಯೆಗಳನ್ನು ಪರಿಹರಿಸುವ ಬಗ್ಗೆ ಸಲಹೆಗಳನ್ನು ನೀಡಿದರು. ಇದು ಜಿ.ಮಾದೇಗೌಡರು ರೈತರಿಗೆ ಅಗತ್ಯವಾದ ವ್ಯವಸಾಯೋಪಕರಣಗಳ ಒದಗಿಸುವ ಬಗ್ಗೆ ಹೊಂದಿದ ಅಪಾರ ಕಾಳಜಿ ಮತ್ತು ಚಿಂತನೆಯಾಗಿದೆ. 1978 ರ ವಿಧಾನಸಭಾ ಅಧಿವೇಶನದಲ್ಲಿ ಜಿ.ಮಾದೇಗೌಡರು ಕಬ್ಬು ಬೆಳೆಯುವ ರೈತರ ಮೇಲೆ ನೀರಿನ ಬಳಕೆ ದರ ಜಾಸ್ತಿ ಮಾಡಿರುವುದನ್ನು ವಿರೋಧಿಸಿದ್ದರು. ಇದರಿಂದ ಕಬ್ಬು ಬೆಳೆಯುವ ರೈತರಿಗೆ ಆಘಾತಕಾರಿಯಾಗಿದೆ ಎಂದರು. ಮುಖ್ಯಮಂತ್ರಿಗಳು ಇದನ್ನು ಪುನರ್ ಪರಿಶೀಲನೆ ಮಾಡುತ್ತೇನೆಂದು ಭರವಸೆ ಕೊಟ್ಟಿದ್ದರು. ನೀರಾವರಿ ಇಲಾಖೆಯವರು ನೋಟೀಫಿಕೇಷನ್ ಕಳುಹಿಸುತ್ತಿದ್ದಾರೆ. ಅಧಿಕಾರಿಗಳು ಮುಖ್ಯಮಂತ್ರಿಗಳ ಭರವಸೆಯನ್ನು ಪರಿಗಣಿಸುತ್ತಿಲ್ಲ. ಈ ನೋಟೀಫಿಕೇಶನ ಕಾನೂನಾಗಬಾರದು. ಅಧಿಕಾರಿಗಳು ವಸೂಲಾತಿಗೆ ಮುಂದಾಗಿ ರೈತರು ಹೆಚ್ಚಿನ ಕಿರುಕುಳಕ್ಕೆ ಒಳಗಾಗಿದ್ದಾರೆ. ಆದ್ದರಿಂದ ನೀರಿನ ದರದ ಬಗ್ಗೆ ಒಂದು ಯೋಗ್ಯ ತೀರ್ಮಾನ ಮಾಡಿ ನೋಟಿಫಿಕೇಸನ್‌ನನ್ನು ಅಂತಿಮವಾಗಿ ಹೊರಡಿಸುವುದನ್ನೂ ತಡೆಯಬೇಕೆಂದು ತೀವ್ರವಾಗಿ ಪ್ರಸ್ತಾಪಿಸಿರುವುದು ಶ್ಲಾಘನೀಯವಾಗಿದೆ.[56] ಈ ಮೂಲಕ ಕಬ್ಬನ್ನು ಬೆಳೆಯುವ ರೈತರಿಗೆ ಮಾರಾಕವಾಗುತ್ತಿದ್ದ ನೋಟೀಫಿಕೇಶನನ್ನು ತಡೆಯುವಲ್ಲಿ ಜಿ.ಮಾದೇಗೌಡರ ಪಾತ್ರ ಹಿರಿದಾದುದು.

**ನಿರುದ್ಯೋಗ ಸಮಸ್ಯೆ ಬಗ್ಗೆ ಚರ್ಚೆ ಮತ್ತು ವಿಚಾರಧಾರೆಗಳು**

ಗುರುದೇವರಹಳ್ಳಿ ಮಾದೇಗೌಡರು 1979ರ ಜನವರಿ 23 ರಂದು ವಿಧಾನಸಭಾ ಅಧಿವೇಶನದಲ್ಲಿ ನಿರುದ್ಯೋಗ ಸಮಸ್ಯೆ ಕುರಿತು ಈ ಕೆಳಗಿನಂತೆ ಚರ್ಚಿಸಿದ್ದಾರೆ. ಕಾಲಕಾಲಕ್ಕೆ ನಮ್ಮ ರಾಜ್ಯದಲ್ಲಿ ನಿರುದ್ಯೋಗ ಸಮಸ್ಯೆಯನ್ನು ಬಗೆಹರಿಸಲಾಗುತ್ತಿಲ್ಲವೆಂದು, ಈ ವೇಳೆ ರಾಜ್ಯದಲ್ಲಿ ಲಕ್ಷ ಲಕ್ಷ ನಿರುದ್ಯೋಗಿಗಳು ಹೆಚ್ಚಾಗುತ್ತಿದ್ದು, ಎಷ್ಟೋ ಜನರಿಗೆ ಆಸ್ತಿ–ಪಾಸ್ತಿ ಇಲ್ಲದೆ, ಗಳಿಸಿರತಕ್ಕ ವಿದ್ಯೆಯೇ ಆಸ್ತಿ ಎಂದು ಕಳೆದ 10 ವರ್ಷಗಳಿಂದ ಕಾಯುತ್ತಾ ಇದ್ದು ನಿರ್ಗತಿಕರಾಗಿದ್ದಾರೆ. ಇಂಥವರಿಗಾದರೂ ವಿಶೇಷ ಸೌಲಭ್ಯ ನೀಡುವ ಯೋಜನೆ ಸರ್ಕಾರದಲ್ಲಿ ಇದೆಯೇ ಎಂದು ಪ್ರಸ್ತಾಪಿಸಿದಾಗ, ಅಂದಿನ ಮುಖ್ಯಮಂತ್ರಿ ಗಳಾಗಿದ್ದ ಡಿ.ದೇವರಾಜ ಅರಸ್‌ರವರು ಉತ್ತರಿಸುತ್ತಾ ನಿರುದ್ಯೋಗ ಸಮಸ್ಯೆ ನಮ್ಮ ಕರ್ನಾಟಕಕ್ಕೆ ಅಷ್ಟೇ ಮಾತ್ರ ಸೀಮಿತವಾಗಿಲ್ಲ. ಎಲ್ಲಾ ರಾಜ್ಯಗಳಲ್ಲೂ ಇದೆ ಮತ್ತು ಬೆಳೆಯುತ್ತಲೇ ಇದೆ. ಕೇಂದ್ರ ಸರ್ಕಾರದವರು ಹತ್ತು ವರ್ಷಗಳಲ್ಲಿ ಈ ಸಮಸ್ಯೆಯನ್ನು

ಮುಗಿಸುತ್ತೇವೆಂದು ಹೇಳಿಕೆ ಕೊಟ್ಟಿರುತ್ತಾರೆ. ಹೀಗಾಗಿ ಬಹುಶಃ ಇನ್ನೂ 10ವರ್ಷದಲ್ಲಿ ಈ ನಿರುದ್ಯೋಗ ಸಮಸ್ಯೆ ಮುಗಿದ್ದು ಹೋಗಬಹುದೆಂದು ಉಡಾಫೆ ಉತ್ತರ ನೀಡಿದರು. ಇದಕ್ಕೆ ಪ್ರತಿಕ್ರಿಯೆಯಾಗಿ ನೇರನುಡಿ, ನಿಷ್ಠುರ ಧೀಮಂತಿಕೆಯ ನಾಯಕರಾದ ಜಿ.ಮಾದೇಗೌಡರು ಸಭಾಧ್ಯಕ್ಷರಿಗೆ ದೂರನ್ನು ನೀಡುತ್ತಾ ಮುಖ್ಯಮಂತ್ರಿಗಳು ವ್ಯಂಗ್ಯವಾಗಿ ಉತ್ತರ ಕೊಟ್ಟಿದ್ದಾರೆಂದು ಭಾವಿಸಿದ್ದೇನೆ. ಮುಖ್ಯಮಂತ್ರಿಗಳು ಮತ್ತು ಆ ಕಡೆಯವರು ಮಾದರಿ ಮೈಸೂರಿನ ಮಾದರಿ ಕರ್ನಾಟಕದ ಜವಾಬ್ದಾರಿ ಸ್ಥಾನದಲ್ಲಿದ್ದಾರೆ ಎಂದು ತಿಳಿದುಕೊಂಡಿದ್ದೇನೆ. ಕೇಂದ್ರ ಸರ್ಕಾರವನ್ನು ವ್ಯಂಗ್ಯವಾಗಿ ನೋಡತಕ್ಕ ರೀತಿಯಲ್ಲಿ ಉತ್ತರ ಕೊಡುವುದು ಸರಿಯೇ ಎಂದು ಪ್ರಶ್ನಿಸಿದ್ದರು.[57] 1979ರ ಜನವರಿ 23ರಂದು ಕೇಂದ್ರ ಲೋಕಸಭೆಯಿಂದ ಇಂದಿರಾಗಾಂಧಿಯವರನ್ನು ಉಚ್ಚಾಟನೆಗೊಳಿಸಲ್ಪಟ್ಟಿದು, ಜೈಲುವಾಸ ತೀರ್ಪಿನಿಂದ ಅವರ ಅನುಯಾಯಿಗಳು ಹಿಂದೆಂದೂ ಕಾಣದಂಥ ಮತ್ತು ಉಗ್ರವಾದ ಹಿಂಸಾತ್ಮಕ ಅಲೆಗಳು, ಅಗ್ನಿಸ್ಪರ್ಶ, ಗೂಂಡಾಗಿರಿ, ವಿಧ್ವಾಂಸಕ ಕೃತ್ಯಗಳು ಮತ್ತು ಲೂಟಿಗಳು ಸಾರ್ವಜನಿಕ ಮತ್ತು ಖಾಸಗಿ ಕಛೇರಿಗಳಿಗೆ, ಜನಸಾಮಾನ್ಯರಿಗೆ, ನಾಗರೀಕರಿಗೆ ತೊಂದರೆ ಉಂಟಾಗುತ್ತಿದ್ದು, ನಮ್ಮ ರಾಜ್ಯದಲ್ಲೂ ಈ ಕೃತ್ಯಗಳು ಸಾಮಾನ್ಯವಾಗಿದ್ದವು. ಡಿಸೆಂಬರ್‌ನ 19, 20, ಈ ಎರಡು ದಿನಗಳು ಬಹಳ ಗಂಡಾಂತರಕಾರಿ ಘಟನೆಗಳು ಸಂಭವಿಸಿದವು. ಕೆಲವೆಡೆ ಲೂಟಿ, ದೊಂಬಿ, ಕೊಲೆ, ಸುಲಿಗೆಗಳು ನಡೆದವು, ಇದರಿಂದ ಆಸ್ತಿ–ಪಾಸ್ತಿ, ಜೀವಹಾನಿ ಸಂಭವಿಸಿದರೂ ಕಾನೂನು–ಸುವ್ಯವಸ್ಥೆ ಬಿಗಿಗೊಳಿಸಲು ಪೊಲೀಸ್ ಇಲಾಖೆ ಮುಂದಾಗಿಲಿಲ್ಲ. ಹೀಗಾಗಿ ಮುಖ್ಯಮಂತ್ರಿಗಳು ಯಾವುದೇ ಮುನ್ನೆಚ್ಚರಿಕೆ ಕ್ರಮಗಳನ್ನು ಗೃಹ ಇಲಾಖೆಗೆ ಹಾಗೂ ರಾಜ್ಯ ಪೊಲೀಸ್ ವ್ಯವಸ್ಥೆಗೆ ನೀಡಲಿಲ್ಲವೆಂದು ಚರ್ಚಿಸಿರುತ್ತಾರೆ. ಪೊಲೀಸ್ ವ್ಯವಸ್ಥೆ ನಿಶ್ಚಲನೆಯಿಂದಿದ್ದೆ ಇದರ ಬಗ್ಗೆ ನ್ಯಾಯಾಂಗ ತನಿಖೆ ಆಗಲೇಬೇಕೆಂದು ಪಟ್ಟು ಹಿಡಿದರು. ಇದಕ್ಕೆ ಮುಖ್ಯಮಂತ್ರಿಗಳು ಒಪ್ಪದೇ ಇದ್ದಾಗ ಜಿ.ಮಾದೇಗೌಡರು ಬ್ರಿಟೀಷರ ಕಾಲದ ಆಳ್ವಿಕೆಯೂ ಕೂಡ ನ್ಯಾಯಾಂಗ ತನಿಖೆ ಮಾಡಿ ನೊಂದ ಜನಗಳಿಗೆ ಪರಿಹಾರವನ್ನು ಕೊಟ್ಟಿದ್ದಾರೆ. ಅಲ್ಲದೆ ಬ್ರಿಟೀಷರ ಕಾಲದಲ್ಲಿ ಕಾನೂನುಭಂಗ ಚಳುವಳಿ ಮಾಡಿದ ಸಂದರ್ಭದಲ್ಲಿ ಆದ ಗಲಭೆಗಳಲ್ಲಿ ನೊಂದ ಜನರಿಗೆ ಪರಿಹಾರವನ್ನು ಕೊಡಬೇಕೆಂದು ಮಹಾತ್ಮ ಗಾಂಧೀಜಿಯವರೂ ಹೇಳಿದಾಗ ಅಂಥ ನೊಂದ ಜನರಿಗೆ ಪರಿಹಾರವನ್ನು ಕೊಡಬೇಕೆಂದು ಮಹಾತ್ಮಗಾಂಧೀಜಿಯವರು ಹೇಳಿದಾಗ ಅಂತ ಇಂಗ್ಲೀಷರೂ ಕೂಡ ಮುಂದಾದರು. ನಾವು ಪ್ರಜಾಪ್ರಭುತ್ವದಲ್ಲಿದ್ದುಕೊಂಡು ಇಂಥ ಗಲಭೆಗಳಾದಾಗ ನ್ಯಾಯಾಂಗ ತನಿಖೆ ಮಾಡಿ ನೊಂದ ಜನರಿಗೆ ಪರಿಹಾರ ಕೊಡದೇ ಇರುವುದು ಸರಿಯಲ್ಲ. ಇದನ್ನು ನಾವು ಒಂದು ತತ್ವದ ಆಧಾರದ ಮೇಲೆ ಕೇಳುತ್ತಿದ್ದೇವೆ. ಹಿಂದೆ ಒಂದು ಸಾರಿ ಮಂಡ್ಯದಲ್ಲಿ ಗಲಾಟೆ ಆದಾಗ ಇದೇ ಸರ್ಕಾರ ಅಲ್ಲಿನ ನೊಂದ ಜನಗಳಿಗೆ ಪರಿಹಾರವನ್ನು ಕೊಟ್ಟಿದ್ದಾರೆ. ಲಾಲ್ ಬಹದ್ದೂರ್ ಶಾಸ್ತ್ರೀಯವರು ರೈಲ್ವೆ ಸಚಿವರಾಗಿದಾಗ

ಎಲ್ಲೋ ಒಂದು ಕಡೆ ರೈಲು ಬಿದ್ದು ಹೋಯಿತ್ತೆಂದು ತಮ್ಮ ರಾಜೀನಾಮೆಯನ್ನು ಕೊಟ್ಟರು ಅದು ಸತ್ಪುರುಷರ ಲಕ್ಷಣವೆಂದು, ಹೇಳಿದ್ದಾರೆ. ನೀವು ಕೂಡ ಕೆಲ ಕೆಲಸಗಳಲ್ಲಿ ಕಾರ್ಯಯೋಜನೆಗಳನ್ನು ಇತರರಿಗಿಂತ ಹಾಗೂ ಇತರೆ ರಾಜ್ಯಗಳಿಗಿಂತ ಮುಂಚಿತವಾಗಿ ಮಾಡಿ ಮಾದರಿಯಾಗಿರುತ್ತೀರಿ ಎಂದು ಮಾರ್ಮಿಕವಾಗಿ ನುಡಿದಿರುತ್ತಾರೆ. ಈ ವಿಚಾರದಲ್ಲಿ ನ್ಯಾಯಾಂಗ ತನಿಖೆಯಾಗಿ ನೊಂದವರಿಗೆ ಪರಿಹಾರ ದೊರೆಯಿತು.[58] ಹೀಗೆ ಜಿ.ಮಾದೇಗೌಡರ ದಿಟ್ಟ ಆಲೋಚನೆಯಿಂದಾಗಿ ಹೋರಾಟ ನೆಡೆಸಿರುವುದು ಸಂಶೋಧನೆಯಿಂದ ಅವಲೋಕಿಸಲಾಗಿದೆ.

ಜಿ.ಮಾದೇಗೌಡರು ಅಂದಿನ ರಾಜ್ಯ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರಾದ ಆರ್.ಗುಂಡೂರಾವ್ ರವರನ್ನು ಉದ್ದೇಶಿಸಿ, ರಾಜ್ಯದ ಖಾಸಗಿ ಪ್ರಯಾಣಿಕರ ಸಾರಿಗೆ ಸೇವೆಯನ್ನು ರಾಷ್ಟ್ರೀಕರಣಗೊಳಿಸುವಂತೆ ಚರ್ಚಿಸಿರುತ್ತಾರೆ. ಅದನ್ನು ಈಗಾಗಲೇ ರಾಷ್ಟ್ರೀಕರಣ ಮಾಡಲಾಗದೆಂದು ಉತ್ತರಿಸಿದರು. ಈ ಸಂದರ್ಭದಲ್ಲಿ ಜಿ.ಮಾದೇಗೌಡರು ಸಲಹೆ ನೀಡುತ್ತಾ, ಎಲ್ಲಾ ಜಿಲ್ಲೆಗಳಿಗೂ ರಸ್ತೆ ಸಾರಿಗೆ ಸಂಸ್ಥೆಯನ್ನು ಉತ್ತಮಪಡಿಸಲು ರಾಷ್ಟ್ರೀಕರಣಗೊಳಿಸಬೇಕೆಂದು ಸಲಹೆ ನೀಡಿದರು. ರಸ್ತೆ ಸಾರಿಗೆ ದೇಶದ ಅಭಿವೃದ್ಧಿಯ ಪ್ರತೀಕವಾಗಿದೆ ಎಂಬುದಾಗಿ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ.

**ಶ್ರೀ ಚಾಮುಂಡೇಶ್ವರಿ ಸಕ್ಕರೆಯ ಕಾರ್ಖಾನೆಯು ರೈತರಿಗೆ ಬಾಕಿ ಹಣ ಪಾವತಿಸದಿರುವುದರ ಬಗ್ಗೆ ಚರ್ಚೆ**

ಜಿ.ಮಾದೇಗೌಡರು, ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೋಕು, ಕೆ.ಎಂ.ದೊಡ್ಡಿಯಲ್ಲಿರುವ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯು ಬಾಕಿ ಹಾಣವನ್ನು ರೈತರಿಗೆ ಪಾವತಿಸಿಲ್ಲದ ಬಗ್ಗೆ ಕೈಗಾರಿಕಾ ಸಚಿವರಾದ ಶ್ರೀ ಅಜೀವ್ ಶೇಠ್‌ರನ್ನು ಇದರ ಬಗ್ಗೆ ಗಮನಹರಿಸುವಂತೆ ಪ್ರಸ್ತಾಪಿಸಿರುತ್ತಾರೆ, ಕಬ್ಬು ಪೂರೈಕೆಗೆ ಸಂಬಂಧಿಸಿದಂತೆ ಸರ್ಕಾರದ ಸೂಚನೆಯಂತೆ ಈ ಕಾರ್ಖಾನೆಯ ಮ್ಯಾನೇಜ್‌ಮೆಂಟ್‌ನವರು ರೈತರಿಗೆ ಸುಮಾರು ಒಂದು ಕೋಟಿ ರೂಪಾಯಿಗಳನ್ನು ನೀಡಬೇಕಾಗಿರುತ್ತದೆ. ಈ ಬಗ್ಗೆ ಅರಿವಿಗೆ ಬಂದಿದೆಯೇ, ಸರ್ಕಾರ ಈ ಬಗ್ಗೆ ಕ್ರಮಕೈಗೊಳ್ಳುವುದು ಅಗತ್ಯವಾಗಿದೆ ಎಂದು ಪ್ರಸ್ತಾಪಿಸಿರುತ್ತಾರೆ.[59] ಎರಡು ವರ್ಷದ ಹಿಂದೆ ಈ ಕಂಪನಿಗೆ ರೈತರು ಕಬ್ಬನ್ನು ಪೂರೈಕೆ ಮಾಡಿದ್ದರೋ ಅವರ ಹಣವನ್ನು ಸಂಪೂರ್ಣವಾಗಿ ಕೊಡಿಸುತ್ತೇವೆನ್ನುವ ಭರವಸೆಯನ್ನು ಮುಖ್ಯಮಂತ್ರಿಗಳು ಕೊಟ್ಟಿದ್ದರು. ಅಲ್ಲದೆ ರೈತರ ಬಾಕಿ ಹಣವನ್ನು ಪಾವತಿ ಮಾಡದ ಬಗ್ಗೆ ದಾವೆ ಹೂಡಿ ವಕೀಲರಿಂದ ಕಾರ್ಖಾನೆಗೆ ನೋಟೀಸ್ ಕೊಡಿಸಿದ್ದಾರೆ. ಆದರೂ ಪಾವತಿಯಾಗಿಲ್ಲ. ಅಲ್ಲದೆ ಈ ಕಾರ್ಖಾನೆಯ ಅವ್ಯವಸ್ಥೆಯಿಂದಾಗಿ ರೈತರ ಹಿತ ಉಳಿದಿಲ್ಲ. 12 ತಿಂಗಳ ಕಬ್ಬಿಗೆ ಎರಡು ವರ್ಷವಾದರೂ ಇವರು ಪರ್ಮಿಟ್‌ಕೊಟ್ಟಿಲ್ಲ. ಕೊಟ್ಟರೂ ಕಬ್ಬಿಗೆ ಒಂದು ವರ್ಷವಾದರೂ ಹಣ ಪಾವತಿ

ಆಗುವುದಿಲ್ಲ. ಕಾರ್ಖಾನೆಯವರ ವರದಿಯನ್ನು ನೀವು ಓದಿಕೊಂಡು ಬಾಕಿ ಕಡಿಮೆ ಇದೆ ಎಂದು ಹೇಳುತ್ತಿದ್ದೀರಿ. ಸಚಿವರಾದ ನೀವೇ ಸಕಾಲಕ್ಕೆ ಹಣ ಪಾವತಿ ಆಗುವಂತೆ ಮತ್ತು ಕಬ್ಬಗೆ ಸರಿಯಾದ ಅವಧಿಗೆ ಪರ್ಮಿಷನ್ ನೀಡುವ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ ಇಲ್ಲದೇ ಹೋದರೆ, ಕೇಂದ್ರ ಸರ್ಕಾರದವರು ಕ್ರಮತೆಗೆದುಕೊಳ್ಳುವಂತೆ ಶಿಫಾರಸ್ಸು ಮಾಡಬೇಕು ಎಂದು ಪ್ರಶ್ನಿಸಿರುತ್ತಾರೆ.

ಕೈಗಾರಿಕಾ ಸಚಿವರಿಗೆ ನಿಜಾಂಶವು ವ್ಯಕ್ತವಾಗಲು ತಾವು ತಮ್ಮ ಅಧಿಕಾರಿಗಳನ್ನು ಕಳುಹಿಸಿ ವೆರಿಫೈ ಮಾಡುವುದಕ್ಕೆ ಅಧಿಕಾರವಿರುತ್ತದೆ. ಅದನ್ನು ಮಾಡಲೇಬೇಕು ಕಾರ್ಖಾನೆ ಚೆನ್ನಾಗಿ ನಡೆಯುತ್ತಿಲ್ಲ ಈ ಕಾರ್ಖಾನೆಯ ಬಂಡವಾಳ ಷಾಹಿಯಿಂದ ರೈತರ ಶೋಷಣೆಯಾಗುತ್ತಿದೆ. ಇವತ್ತು ಈ ಖಾಸಗಿ ಫ್ಯಾಕ್ಟರಿಯನ್ನು ಸರ್ಕಾರ ತನ್ನ ಹಿಡಿತಕ್ಕೆ ಪಡೆದು ರಾಷ್ಟ್ರೀಕರಣ ಮಾಡಬೇಕು ಎಂದು ಸಲಹೆಯನ್ನು ಜಿ.ಮಾದೇಗೌಡರು ನೀಡಿರುತ್ತಾರೆ. ಅಲ್ಲದೆ ಈ ಬಂಡವಾಳಶಾಹಿ ಹೂಡಿರುವ ಹಣವನ್ನು ನಾವು ರೈತರಿಂದ ವಸೂಲಿ ಮಾಡಿ ಕೊಡುತ್ತೇವೆ. ಇದನ್ನು ಕೋ ಆಪರೇಟಿವ್ ಸೆಕ್ಟರ್‌ಗೆ ಚೇಂಜ್ ಮಾಡಿ ಕೊಡುತ್ತೀರಾ ಎಂದು ಸಚಿವರ ಮತ್ತು ಸರ್ಕಾರದವರನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡಿದ್ದಾರೆ. [60] ಹೀಗೆ ರೈತರ ಬಗೆಗೆ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿರುವುದು ಇಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಗುರುದೇವರಹಳ್ಳಿ ಮಾದೇಗೌಡರು ಕಾಳಿನದಿ ಹೈಡ್ರೋಎಲೆಕ್ಟ್ರಿಕ್ ಯೋಜನೆಯ ಮೊದಲ ಹಂತದ ಪ್ರಗತಿಯ ಬಗ್ಗೆ ಪ್ರಶ್ನಿಸಿದರು ಹಾಗೂ ವಿವಿಧ ಘಟಕಗಳಲ್ಲಿ ಅಂದರೆ ಬೊಮ್ಮನಹಳ್ಳಿ ನೀರು ಎತ್ತಿಕೊಳ್ಳುವ ಅಣೆಕಟ್ಟೆ, ಹೆಡ್‌ರೆಸ್ ಟರ್ನಲ್, ಸರ್ಜ್ ಟ್ಯಾಂಕ್, ಫ್ರಜರ್ ಶಿಫ್ಟ್ ಮತ್ತು ನಾಗ್‌ಜರಿ ಪವರ್ ಹೌಸ್ ಪೂರ್ಣಗೊಳಿಸಬೇಕೆಂದು ಕೋರಿದರು. ಇದರ ಮೊದಲ ಹಂತದಲ್ಲಿ ಯೂನಿಟ್ಸ್ 135 ಎಂ.ಡಬ್ಲ್ಯೂ ನಾಗಾರ್ಜುನ ಪವರ್ ಹೌಸ್ ಯೋಜನೆ ಕಾರ್ಯಾರಂಭ ಆರಂಭಿಸಬೇಕೆಂದು ಚರ್ಚಿಸಿದ್ದರು.

**ಪಾನ ವಿರೋಧದ ಬಗ್ಗೆ ಚರ್ಚೆ**

1970–80ರ ಕಾಲಘಟ್ಟದಲ್ಲಿ ಜಿ.ಮಾದೇಗೌಡರು ಸಾಮಾಜಿಕ ಕೆಡುಕಿನ ಸಂಕೇತವಾದ ಮದ್ಯಪಾನ ಬಗೆಗೆ ತಳೆದ ಧೋರಣೆಯನ್ನು ನಾವು ಅವರ ವಿಧಾನಸಭಾ ನಡವಳಿಗಳಲ್ಲಿ ಪ್ರಸ್ತಾಪಿತ ಚರ್ಚೆಯಲ್ಲಿ ಕಾಣಬಹುದು. ಇವರು ಅಂದಿನ ಕಾರ್ಮಿಕ ಮತ್ತು ಅಬಕಾರಿ ಸಚಿವರಾಗಿದ್ದ ಆರ್.ಎಸ್. ಪಾಟೀಲ್‌ರನ್ನು ಪಾನ ನಿರೋಧ ಬಗೆಗೆ ರಾಜ್ಯ ಸರ್ಕಾರದ ಕಾರ್ಯನೀತಿಯ ವಿವರ ಕೇಳಿದಾಗ ಸಂಪೂರ್ಣವಾಗಿ ಪಾನ ನಿರೋಧ ಸಾಧ್ಯವಿಲ್ಲವೆಂದು ಸಚಿವರು ಹೇಳಿದಾಗ ಜಿ.ಮಾದೇಗೌಡರು ತಮ್ಮ ಚಿಂತನೆಯನ್ನು ಸದನದಲ್ಲಿ ಈ ರೀತಿಯಾಗಿ ವ್ಯಕ್ತಪಡಿಸಿದರು. ಪಾನ ನಿರೋಧಿಸುವಲ್ಲಿ ದೃಷ್ಟಿಕೋನಗಳನ್ನು ಮನಃಪೂರಕವಾಗಿ ತ್ಯಜಿಸುವ ಶಿಕ್ಷಣವನ್ನು ನೀಡಬೇಕು. ಸ್ವಯಂ

ಪ್ರೇರಿತ ಮಾನದಂಡಗಳನ್ನು ರೂಪಿಸಬೇಕು. ಶಾಸನಬದ್ಧ ಕಾನೂನು ಮತ್ತು ನಿಬಂಧನೆಗಳ ಮೂಲಕ ಸಮಂಜಸ ವಾತಾವರಣವನ್ನು ಸೃಷ್ಟಿಸಬೇಕು. ಈ ಸಂದೇಶವನ್ನು ವೈಯಕ್ತಿಕವಾಗಿ ರಾಜ್ಯದಲ್ಲಿ ಎಲ್ಲಾ ಹಳ್ಳಿಗಳಿಗೂ ಕೊಂಡೊಯ್ಯುವುದಾಗಿರುತ್ತದೆ. ಸಮಾಜವನ್ನು ಮತ್ತಷ್ಟು ಶಿಕ್ಷಿತವನ್ನಾಗಿ ಮಾಡುತ್ತಾ ಕುಡಿತ ಕಡಿಮೆ ಮಾಡುವುದು, ಸಾಮಾಜಿಕ ಮೌಲ್ಯಗಳನ್ನು ಬೆಳೆಸುವುದು ಅವಶ್ಯಕವಾಗಿದೆ. ಇದಕ್ಕಾಗಿ ಆತ್ಮ ನಿಗ್ರಹ ಮಂಡಳಿ ಸದಾ ಕಾಲ ಕಾರ್ಯಾಚರಣೆಯಲ್ಲಿರುವಂತೆ ನೋಡಿಕೊಳ್ಳಬೇಕು. 'ಪಾನ ನಿರೋಧ'ವನ್ನುಪ್ರಾಥಮಿಕ ಹಂತವಾಗಿ ಸರ್ಕಾರವು ಪ್ರತಿ ಕ್ಯಾಲೆಂಡರ್ ತಿಂಗಳ ಆರಂಭದ ದಿನ ಅಂದರೆ 1ನೇ ದಿನವನ್ನು ಪಾನ ನಿರೋಧ ದಿನವನ್ನಾಗಿ ಘೋಷಿಸಬೇಕು. ಮದ್ಯಪಾನ ಬೆಲೆಯನ್ನು ಅಧಿಕಗೊಳಿಸಬೇಕು ಕಾರ್ಮಿಕರ ಕಾಲೋನಿ ಬಳಿ ಮತ್ತು ಶಿಕ್ಷಣ ಸಂಸ್ಥೆಗಳ ಬಳಿ ಮದ್ಯಪಾನ ಅಂಗಡಿಗಳನ್ನು ತೆರೆಯದಿರುವಂತೆ ಅನುಮತಿ ನಿರಾಕರಿಸುವುದು ಇತ್ಯಾದಿ ಯೋಜನೆಗಳನ್ನು ಕಟ್ಟುನಿಟ್ಟಾಗಿ ಅನುಷ್ಠಾನಕ್ಕೆ ತರಬೇಕು. ಪಾನಮುಕ್ತ ರಾಜ್ಯವನ್ನು ನಿರ್ಮಿಸುವ ಮೂಲಕ ಗಾಂಧೀಜಿಯವರ ಕನಸನ್ನು ಈಡೇರಿಸುವುದು ಜಿ.ಮಾದೇಗೌಡರ ಚಿಂತನೆಯಾಗಿದ್ದು. ಆದರೆ ಇಂದಿಗೂ ಸಹ ಪಾನನಿರೋಧ ಕಾಯ್ದೆ ಅನುಷ್ಠಾನಕ್ಕೆ ಬರಲು ಸಾಧ್ಯವಾಗಿಲ್ಲ.[61] ಒಂದು ಸಮಾಜದ ಸ್ವಾಸ್ಥವನ್ನು ಕಾಪಾಡುವಲ್ಲಿ ಸರ್ಕಾರವು ಕಾಯ್ದುಕೊಳ್ಳಬೇಕಾದ ನಿರ್ಮಿತ ಅಂಶಗಳನ್ನು ಮತ್ತು ಕಾನೂನುಗಳನ್ನು ಮನಗಾಣಿಸಬೇಕು. ಇಂತಹ ವಿಚಾರಗಳು ಜಿ.ಮಾದೇಗೌಡರ ಯೋಚನಾ ಲಹರಿ ಉತ್ತಮ ಸಮಾಜದ ಕಳಕಳಿಯನ್ನು ಹೊಂದಿದ್ದರು ಎಂಬುದು ಕಂಡುಬರುತ್ತದೆ.

**ನದಿ ಬಯಲಿನ ಜಮೀನನ್ನು ಅತಿಕ್ರಮಿಸಿರುವ ಬಗ್ಗೆ ಚರ್ಚೆ**

ಗ್ರಾಮೀಣ ಪ್ರದೇಶಗಳಲ್ಲಿನ ನಿಸರ್ಗದತ್ತ ನದಿ ಬಯಲಿನ ಜಮೀನನ್ನು ಅತಿಕ್ರಮಿಸಿರುವ ಬಗ್ಗೆ ಅಂದಿನ ಮುಖ್ಯಮಂತ್ರಿಗಳಲ್ಲಿ ಪ್ರಸ್ತಾಪಿಸಿ ಅದನ್ನು ತಡೆಹಿಡಿದು ಸಾರ್ವತ್ರಿಕ ಉಪಯೋಗಕ್ಕೆ ಗ್ರಾಮಗಳ ಜನತೆಗೆ ಜಿ.ಮಾದೇಗೌಡರು ಕಾರಣರಾದರು. ವಿಶ್ವೇಶ್ವರಯ್ಯ ನಾಲೆಯ ಕಾಲುವೆಯು ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೋಕು ಗುರುದೇವರಹಳ್ಳಿ ಬಳಿ ಇದ್ದು, ಇಲ್ಲಿ ವಿ.ಸಿ.ನಾಲೆಗೆ 34 ಮೈಲು ಅಣೆಕಟ್ಟೆ ವಿಸ್ತರಿಸಿ ಅಣೆಕಟ್ಟೆಯಲ್ಲಿ ಹೆಚ್ಚಾಗಿ ಸಂಗ್ರಹಿತ ನೀರು ಹರಿದು ಇದೊಂದು ನೈಸರ್ಗಿಕ ಕಾಲುವೆಯಾಗಿ ನದಿಬಯಲಾಗಿ ರೂಪುಗೊಂಡಿದೆ. ಈ ನದಿಬಯಲನ್ನು ಮುಚ್ಚಿಹಾಕಿ ಸ್ಥಳೀಯ ಜಮೀನ್ದಾರರು ಅತಿಕ್ರಮಿಸಿರುತ್ತಾರೆ. ಸರ್ವೆ ಇಲಾಖೆ ಕೂಡ ಇದನ್ನು ಖರಾಬು ಭೂಮಿ ಎಂದು ಪರಿಗಣಿಸಿದ್ದು ಜಮೀನ್ದಾರರು ಇದನ್ನು ಅತಿಕ್ರಮಿಸಿರುವುದನ್ನು ಸ್ಪಷ್ಟಪಡಿಸಿರುತ್ತಾರೆ.[62] ಈ ರೀತಿಯ ಹೆಚ್ಚಿನ ನಷ್ಟವು ಸಾರ್ವಜನಿಕ ಆಸ್ತಿ-ಪಾಸ್ತಿಗೆ ಆಗಿರುತ್ತದೆಂಬುದನ್ನು ತಮ್ಮ ಗಮನಕ್ಕೆ ತರಲಾಗಿದೆ. ಈ ಬಯಲನ್ನು ಸಾರ್ವಜನಿಕ

ಮತ್ತು ಖಾಸಗಿ ಆಸ್ತಿಯಾಗಿ ಸರ್ಕಾರವು ಪರಿಗಣಿಸಬೇಕು ಇದರ ನಷ್ಟವನ್ನು ಸಂಬಂಧಪಟ್ಟವರು ತುಂಬಿಕೊಡಬೇಕಾಗುತ್ತದೆ. ಸರ್ಕಾರವು ಜಮೀನ್ದಾರ ಮೇಲೆ ಕ್ರಮಕೈಗೊಳ್ಳಬೇಕೆಂದು ತಿಳಿಸಿದರು.

**ಆಡಳಿತದಲ್ಲಿ ಪಾರದರ್ಶಕತೆ ಜಾರಿಗೆ ಚರ್ಚೆ**

ಜಿ.ಮಾದೇಗೌಡರು 1987 ಫೆಬ್ರವರಿ 10 ರಂದು ಸದನದಲ್ಲಿ ನಿಲುವಳಿ ಸೂಚನೆ ಪಡೆದು ಪ್ರಸ್ತಾಪಿಸುತ್ತಾ ಜಿಲ್ಲಾ ಪರಿಷತ್ತು ಹಾಗೂ ಮಂಡಲ್ ಪಂಚಾಯಿತಿ ಚುನಾವಣೆಗಳು ಯಾವ ರೀತಿ ನಡೆಯುತ್ತವೆ ಎಂದು ಪ್ರಸ್ತಾಪಿಸಿ ತಮ್ಮ ಮಂಡ್ಯ ಜಿಲ್ಲಾ ಡಿವಿಜನ್ನಿನ ಐ.ಎ.ಎಸ್. ಅಧಿಕಾರಿಯಾದ ಡಿವಿಜನಲ್ ಕಮೀಷನರ್‌ರವರು ನಾನೊಬ್ಬ ವಿಧಾನಸಭಾ ಸದಸ್ಯ ಎಂಬುದನ್ನು ತಿಳಿದಿದ್ದರೂ ಆ ಡಿವಿಜನಲ್ ಕಮೀಷನರ್ ಹೀಗೆ ಉತ್ತರಿಸುತ್ತಾರೆ. ವಿಧಾನಸೌಧದ ಕಾರ್ಯದಶಿಯವರನ್ನು ಫೋನ್ ಮೂಲಕ ಕೇಳಿ ನಂತರ ಓಟರ್ ಲಿಸ್ಟ್ ಕೊಡಬೇಕೆ, ಬೇಡವೆ ಎಂದು ಕೇಳಿದ ನಂತರ ಕೊಡುತ್ತೇನೆ ಎನ್ನುತ್ತಾರೆ. ಈ ಮಾತಿಗೆ ಜಿ.ಮಾದೇಗೌಡರು ಈ ರೀತಿ ಪ್ರತಿಕ್ರಿಯಿಸಿರುತ್ತಾರೆ.[63] ಈ ದೇಶವನ್ನು ಜನಪ್ರತಿನಿಧಿಗಳು ಆಳುತ್ತಿದ್ದಾರೆಯೇ ಅಥವಾ ಅಧಿಕಾರಿವರ್ಗದ ಹಿಡಿತದಲಿಲ್ಲ ಎನ್ನುತ್ತಾ, ಇವೊತ್ತು ಅಧಿಕಾರ ವಿಧಾನಸೌಧದಲ್ಲಿ ಇರಬಾರದು ಅದು ಜನ ಸಾಮಾನ್ಯರ ಬಳಿ ಇರಬೇಕು ಎಂಬ ಆಶಯವನ್ನು ಅವರು ವ್ಯಕ್ತಪಡಿಸಿದರು. ಇದನ್ನು ನಮ್ಮ ಅಧಿಕಾರಿಗಳು ಎಷ್ಟರ ಮಟ್ಟಿಗೆ ಜಾರಿಗೆ ತರುತ್ತಾರೆ, ನೋಡೋಣ ಜನಸಾಮಾನ್ಯರಿಗೆ ಓಟರ್‌ಲಿಸ್ಟ್ ಒಂದು ಪಬ್ಲಿಕ್ ಡಾಕ್ಯುಮೆಂಟ್ ಇದ್ದ ಹಾಗೆ ಎಂಬುದನ್ನು ಅರಿಯಲು ಈ ಪ್ರಸ್ತಾಪಿತ ವಿಚಾರವು ಸಾರ್ವಜನಿಕರನ್ನು ಜಾಗೃತಗೊಳಿಸುತ್ತದೆ. ಜಿ.ಮಾದೇಗೌಡರು ಅಧಿಕಾರಿಗಳ ವರ್ತನೆ ಪ್ರಜಾಭುತ್ವಕ್ಕೆ ಶೋಭೆ ತರುದಿಲ್ಲವೆಂಬುದನ್ನು ಪ್ರಸ್ತಾಪಿಸಿರುತ್ತಾರೆ.

**ಚುನಾವಣೆ ವಿಚಾರಕ್ಕೆ ಸಂಬಂಧಿಸಿದಂತೆ ನಿಲುವಳಿ ಸೂಚನೆ ಬಗ್ಗೆ ಚರ್ಚೆ**

10ನೇ ಫೆಬ್ರವರಿ 1987 ರಂದು ಸದನದಲ್ಲಿ ಜಿ.ಮಾದೇಗೌಡರು ಅಂದಿನ ಮುಖ್ಯಮಂತ್ರಿಗಳಾಗಿದ್ದ ರಾಮಕೃಷ್ಣಹೆಗಡೆಯವರೊಂದಿಗೆ ಚುನಾವಣೆಗಳ ಬಗ್ಗೆ ಈ ಕೆಳಗಿನಂತೆ ಚರ್ಚಿಸಿದ್ದಾರೆ. ಚುನಾವಣೆಗಳ ಬಗ್ಗೆ ನಾವು ಕೊಟ್ಟಿರುವಂತಹ ನಿಲುವಳಿ ಸೂಚನೆ ಮುಖ್ಯವಾದದ್ದು ಮತ್ತು ಗಂಭೀರವಾದ ವಿಷಯ ಎಂದು ಮುಖ್ಯಮಂತ್ರಿಗಳು ಒಪ್ಪಿಕೊಳ್ಳುತ್ತಾರೆ ಎಂದು ಭಾವಿಸಿದ್ದೇವೆ ಎಂದಿದ್ದಾರೆ. ಜಿಲ್ಲಾಪಂಚಾಯಿತಿ ಹಾಗೂ ಮಂಡಲಪಂಚಾಯಿತಿ ಚುನಾವಣೆಗಳು ಯಾವ ರೀತಿ ನಡೆದಿವೆ ಹಾಗೂ ನಡೆಯುತ್ತವೆ ಎಂಬ ವಿಚಾರ ದೇಶದ ಕೋಟಿಕೋಟಿ ಜನರಿಗೆ ತಿಳಿದಿರುವ ವಿಚಾರವಾಗಿದೆ. ಇದರ ಬಗ್ಗೆ ಹೆಚ್ಚಾಗಿ ಪ್ರಸ್ತಾಪಮಾಡುವುದಕ್ಕೆ ಅನೇಕ ಅಂಶಗಳಿವೆ. ಇದರ ಜೊತೆಗೆ ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರ ಸ್ಥಾನಕ್ಕೆ ಚುನಾವಣೆಯನ್ನು ಮಂಡ್ಯ

ಜಿಲ್ಲೆಯಲ್ಲಿ 22ನೇ ತಾರೀಖು ನಡೆಸಬೇಕು ಎಂದಿದ್ದಾರೆ. ಜಿಲ್ಲಾ ಪರಿಷತ್ ಹಾಗೂ ಮಂಡಲ್ ಪಂಚಾಯಿತಿ ಆಕ್ಟ್‌ನ 129ನೇ ಸೆಕ್ಷನ್‌ನಲ್ಲಿ ಯಾರು ಓಟುಗಳನ್ನು ಹಾಕಬೇಕು ಎಂಬ ವಿಷಯ ಪ್ರಸ್ತಾಪ ಆಗಿದೆ. ಅಂದರೆ ಲೋಕಸಭಾ ಸದಸ್ಯರು, ವಿಧಾನಸಭಾ ಸದಸ್ಯರು, ವಿಧಾನಪರಿಷತ್ ಸದಸ್ಯರು ಇವರುಗಳು ಓಟುದಾರರು ಎಂಬುದಾಗಿ ಈ ಮೇಲಿನ ಆಕ್ಟ್‌ನ 129ನೇ ಸೆಕ್ಷ್‌ನಲ್ಲಿ ಪ್ರಸ್ತಾಪಿಸಿದೆ.[64] ಆದರೆ ನಮ್ಮ ಜಿಲ್ಲೆಯವರು ಅಂದರೆ ಮಂಡ್ಯ ಜಿಲ್ಲೆಯಲ್ಲಿ ಚುನಾಯಿತರಾಗಿರುವ ನಾಲ್ಕು ಜನ ವಿಧಾನ ಪರಿಷತ್‌ನ ಸದಸ್ಯರುಗಳು ಇದ್ದಾರೆ. ಚುನಾವಣೆ ಕೇವಲ 10 ರಿಂದ 11 ದಿವಸಗಳಲ್ಲಿ ನಡೆಯಬೇಕಾಗಿದೆ. ಆದರೆ ಈ ಚುನಾವಣೆಯಲ್ಲಿ ವಿಧಾನ ಪರಿಷತಿನ ಸದಸ್ಯರು ಓಟುಗಳನ್ನು ಹಾಕಬಹುದೇ ಇಲ್ಲವೇ ಎಂಬುದು ಗೋತ್ತಿಲ್ಲ. ಓಟುದಾರರ ಪಟ್ಟಿಯನ್ನು ಬಹಳ ಗೌಪ್ಯವಾಗಿ ಇಡಲಾಗಿದೆ. ಈ ವಿಚಾರಕ್ಕೆ ಸಂಬಂಧಸಿದಂತೆ ವಿಭಾಗಾಧಿಕಾರಿಗಳಿಗೆ ಕಾಗದ ಬರೆದು 22ನೇ ತಾರೀಖು ನಡೆಯುವ ಜಿಲ್ಲಾ ಪರಿಷತಿನ ಚುನಾವಣೆಯಲ್ಲಿ ಓಟುದಾರರು ಯಾರೆಂದು ಇದರ ಬಗ್ಗೆ ಮಾಹಿತಿಯನ್ನು ನೀಡಬೇಕು ಎಂಬುದಾಗಿ ಕೇಳಿಕೊಂಡೆ ಆದರೆ ಅಧಿಕಾರಿಗಳು ನಡೆದುಕೊಂಡ ರೀತಿ ಸರಿಯಾದುದ್ದು ಅಲ್ಲ. ಮುಖ್ಯಮಂತ್ರಿಗಳಾಗಿ ನಿಮ್ಮ ಗುರಿ ಉದ್ದೇಶ ನನಗೆ ಅರ್ಥ ಆಗುತ್ತದೆ. ಈ ರಾಜ್ಯವನ್ನು ರಾಮರಾಜ್ಯ ಮಾಡಬೇಕು ಜೊತೆಗೆ ಮೌಲ್ಯಾಧಾರಿತ ರಾಜಕಾರಣ ಮಾಡಬೇಕು ಎಂಬುದು ನಿಮ್ಮ ಆಶಯ ಆಗಿದೆ. ಈ ವಿಚಾರ ನನಗೆ ಸಂತೋಷ ಎನ್ನಿಸುತ್ತದೆ. ಆದರೆ ನಿಮ್ಮ ರಾಮರಾಜ್ಯದ ಕನಸನು ನೆನಸು ಮಾಡುವ ನಿಟ್ಟಿನಲ್ಲಿ ಜನಗಳ ಹತ್ತಿರಕ್ಕೆ ಅಧಿಕಾರವನ್ನು ಅಧಿಕಾರಿಗಳು ತೆಗೆದುಕೊಂಡು ಹೋಗುತ್ತಾರೆಯೇ ಎಂಬುದರ ಬಗ್ಗೆ ಗಮನಿಸಬೇಕಾದ ಅಂಶವಾಗಿದೆ. ಈ ಕಾರಣದಿಂದ ನಾನು ನಿಮ್ಮ ಗಮನಕ್ಕೆ ತರುತ್ತಿದ್ದೇನೆ. ನಾನೊಬ್ಬ ವಿಧಾನಸಭಾ ಸದಸ್ಯ. ಒಬ್ಬ ಐ.ಎ.ಎಸ್. ಅಧಿಕಾರಿಯಾದ ಡಿವಿಜನಲ್ ಕಮೀಷನರ್‌ನ್ನು ಸಂಬಂಧಪಟ್ಟಂತಹ ಒಂದು ಓಟರ್ ಲೀಸ್ಟ್ ಕೊಡಿ ಎಂದು ಕೇಳಿಕೊಂಡೇ ಆದರೆ ಆ ಅಧಿಕಾರಿ ವಿಧಾನಸೌಧದ ಕಾರ್ಯದರ್ಶಿಗೆ ಪೋನ್‌ಮಾಡಿ ಕೇಳುತ್ತೇನೆ. ಓಟರ್ ಲೀಸ್ಟ್ ಕೊಡಬೇಕೆ ಬೇಡವೇ ಎಂಬುದನ್ನು ತದನಂತರ ತೀರ್ಮಾನಿಸುತ್ತೇವೆ ಎಂಬುದಾಗಿ ಹೇಳಿದ್ದಾರೆ. ಅಂದರೆ ದೇಶದ ಆಡಳಿತವನ್ನು ಯಾರು ನಡೆಸುತ್ತಿದ್ದಾರೆ ಎಂಬುದನ್ನು ಮುಖ್ಯಮಂತ್ರಿಗಳು ಯೋಚನೆ ಮಾಡಬೇಕಾಗಿದೆ. ನಿಮ್ಮ ಉದ್ದೇಶ ಅಧಿಕಾರ ವಿಧಾನಸೌಧದಲ್ಲಿ ಇರಬಾರದು ಅದು ಜನರಲ್ಲಿ ಹೋಗಬೇಕೆಂದು ಆಸೆಯನ್ನು ಹೊಂದಿದ್ದೀರಿ ಆದರೆ ಇದಕ್ಕೆ ಅಧಿಕಾರಿಗಳು ಸಹಕರಿಸುತ್ತಿಲ್ಲ ಎಂಬುದೇ ಬೇಸರದ ಸಂಗತಿ ಅಧಿಕಾರಿಗಳು ಅರ್ಥಮಾಡಿಕೊಳ್ಳಬೇಕು ಓಟರ್ ಲೀಸ್ಟ್ ಪಬ್ಲಿಕ್ ಡಾಕ್ಯೂಮೆಂಟ್ ಇದ್ದಹಾಗೆ ಇದನ್ನು ಜನರಿಗೆ ತಲುಪಿಸಬೇಕಾದದ್ದು ನಿಮ್ಮ ಜವಾಬ್ದಾರಿ. ಈ ರೀತಿ ನಡೆದುಕೊಳ್ಳುವುದು ಪ್ರಜಾಪ್ರಭುತ್ವದಲ್ಲಿ ಶೋಭೆತರುವಂಥದಲ್ಲ ಎಂಬುದಾಗಿ ಅಧಿಕಾರಿಗಳಿಗೆ ಹೇಳಿದ್ದೇನೆ. ಒಬ್ಬ ವಿಧಾನ ಸಭಾ ಸದಸ್ಯರಿಗೆ ಸರಿಯಾದ ರೀತಿಯಲ್ಲಿ

ಗೌರವ ನೀಡುವುದನ್ನು ಕಲಿಯಬೇಕಾಗುತ್ತದೆ ಎಂಬುದಾಗಿ ಅಧಿಕಾರಿಗಳಿಗೆ ಸಲಹೆಯನ್ನು ಜಿ.ಮಾದೇಗೌಡರು ನೀಡಿದ್ದಾರೆ.[65] ಜಿಲ್ಲಾ ಪಂಚಾಯಿತಿ ಹಾಗೂ ಮಂಡಲ ಪಂಚಾಯಿತಿ ಚುನಾವಣೆಗಳು ನಡೆದಿವೆ. ಈ ಚುನಾವಣೆಗಳಲ್ಲಿ ಸರ್ಕಾರದ ಅಧಿಕಾರಿಗಳು ಚುನಾವಣೆ ಪ್ರಚಾರ ನಡೆಸಿದ್ದಾರೆ. ನಾನು ಈ ಮೇಲೆ ಪ್ರಸ್ತಾಪಿಸಿರುವ ಎಲ್ಲಾ ಅಂಶಗಳಿಗೂ ಇಂದು ಒಂದು ಸಾಕ್ಷಿಯಾಗುತ್ತದೆ ಹಾಗೂ ಕಾನೂನಿನ ಪ್ರಕಾರ ಚುನಾವಣೆಗಳು ನಡೆದಿಲ್ಲ ಎಂಬುದು ಅರ್ಥವಾಗುತ್ತದೆ. ಓಟರ್ ಲೀಸ್ಟ್ ಇಲ್ಲದೇ ಚುನಾವಣೆಯನ್ನು ನಡೆಸುವುದಕ್ಕೆ ಸಾಧ್ಯವಿಲ್ಲ ಆದ್ದರಿಂದ ನಮ್ಮ ಜಿಲ್ಲೆಯಲ್ಲಿ ನಾಲ್ಕು ಜನ ವಿಧಾನ ಪರಿಷತ್ತಿನ ಸದಸ್ಯರಿಗೆ ಓಟು ಮಾಡುವಂತಹ ಅಧಿಕಾರ ಸಿಕ್ಕಿದರೆ ಮಂಡ್ಯ ಜಿಲ್ಲೆಯಲ್ಲಿ ನಮ್ಮ ಪಕ್ಷದವರು ಅಧಿಕಾರವನ್ನು ಪಡೆದುಕೊಳ್ಳುವುದಕ್ಕೆ ಅವಕಾಶ ಇದೆ. ಪಾಟೀಲರು ಹೇಳಿದ್ದಾಗ ಸಕ್ಷನ್ 129ರ ಪ್ರಕಾರ ಕಾನೂನುಬದ್ಧವಾಗಿ ಚುನಾವಣೆ ನಡೆದರೆ ನಮ್ಮ ಪಕ್ಷದವರು ಅಧಿಕಾರಕ್ಕೆ ಬರುತ್ತಾರೆ. ಅಧಿಕಾರದಲ್ಲಿ ಇರುವಂತಹ ಆಡಳಿತಪಕ್ಷಗಳು ಚುನಾವಣೆಯಲ್ಲಿ ಅಕ್ರಮ ನಡೆಸದೇ ಸರಿಯಾದ ರೀತಿಯಲ್ಲಿ ಚುನಾವಣೆ ನಡೆಸಬೇಕಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ಚುನಾವಣೆಗಳು ಸರಿಯಾದ ರೀತಿಯಲ್ಲಿ ನಡೆಯಬೇಕು ಎಂಬುದನ್ನು ಸದನದಲ್ಲಿ ದೀರ್ಘವಾಗಿ ಚರ್ಚಿಸಿ ಚುನಾವಣೆಗಳಲ್ಲಿ ನಿಲುವಳಿ ಸೂಚನೆ ತರಬೇಕೆಂದರು ಜಿ.ಮಾದೇಗೌಡರು ನಿಲುವು ಆಗಿತ್ತು.

**ರೈತರ ಹಕ್ಕುಬಾಧ್ಯತಾ ಸೂಚನೆಗಳ ಬಗ್ಗೆ ಚರ್ಚೆ**

ಜಿ.ಮಾದೇಗೌಡರು ಹಾಗೂ ಮದ್ದೂರು ತಾಲ್ಲೂಕಿನ ಕಾಳಮುದ್ದನದೊಡ್ಡಿ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರು ಸರ್ಕಾರದೊಡನೆ, ರಾಜ್ಯ ಹಣಕಾಸು ನಿಗಮ, ರಾಜ್ಯ ಕೈಗಾರಿಕಾ ಬಂಡವಾಳ ನಿಗಮ ಇವರೊಂದಿಗೆ ಖರೀದಿ ಷೇರುಗಳನ್ನು ಖರೀದಿಸಲು ಪ್ರಯತ್ನಿಸಿರುವುದನ್ನು ಪ್ರಶ್ನಿಸಿದರು. ಕಂಪೆನಿಯ ಅಧ್ಯಕ್ಷರಾಗಿರುವ ಮಹಾಲಿಂಗಂರವರು 13% ಕೇಂದ್ರ ಸರ್ಕಾರದ ಫೈನಾನ್ಸ್‌ಷಿಯಲ್ ಇನ್ಸ್‌ಸ್ಟಿಟ್ಯೂಷನ್ಸ್‌ನಿಂದ 25%, ಸ್ಟೇಟ್ ಫೈನಾಷಿಯಲ್ 10%, ರೈತರು ಷೇರು 42% ಇದ್ದು ಈ ಷೇರುಗಳನ್ನು ಮಾರಿಕೊಳ್ಳುತ್ತಿರುವುದಾಗಿ ಹೇಳುತ್ತಿದ್ದಾರೆ. ಈ ಕಾರ್ಖಾನೆ ಆಡಳಿತ ಬಂಡವಾಳ ಶಾಹಿಗಳಿಗೆ ಸೇರುತ್ತದೆ. ಕ್ಷೇತ್ರದ ಜನತೆ ಹೆಚ್ಚಾಗಿ ರೈತರಾಗಿದ್ದು, ರೈತರ ಪರಿಸ್ಥಿತಿಯನ್ನು ಅರಿತು, ಈ ಕಾರ್ಖಾನೆಯಲ್ಲಿ ಸರ್ಕಾರ ಹಾಗೂ ರೈತರ ಷೇರು ಹೆಚ್ಚಾಗಿದ್ದು ಇದರ ಆಡಳಿತವನ್ನು ರೈತರ ವಶಕ್ಕೆ ಒಪ್ಪಿಸಬೇಕು[66] ಎಂಬುದು ಗೌಡರ ನಿಲುವಾಗಿತ್ತು.

ಕೈಗಾರಿಕಾ ಸಚಿವರಾದ ಜೆ.ಹೆಚ್.ಪಟೇಲರ ಮನವಿಮಾಡುತ್ತಾ, ಸಚಿವರನ್ನು ನೀವು ಸಮಾಜವಾದಿಗಳು, ಮೇಲಾಗಿ ರೈತ ಕುಟುಂಬದವರು ರೈತರ ಷೇರುಗಳನ್ನು ಅತಿ ಕಡಿಮೆ ಬೆಲೆಗೆ ಪಡೆದು ಈಗ ಸರ್ಕಾರದ ಷೇರುಗಳನ್ನು ಕೊಂಡುಕೊಳ್ಳಲು ಮುಂದಾಗಿರುವ ಕ್ರಮಗಳನ್ನು ತಪ್ಪಿಸಬೇಕು. ಈ ಬಗ್ಗೆ ಈಗಾಗಲೇ ರೈತರ ಬಂಡವಾಳ

ಜಾಸ್ತಿ ಇಲ್ಲದಿದ್ದರೂ ಬಂಡವಾಳ ಶಾಹಿಗಳಿಗೆ ಮಾರುವುದಿಲ್ಲವೆಂದು ಸದನದಲ್ಲಿ ಆಶ್ವಾಸನೆ ನೀಡಿರುತ್ತೀರಿ. ಹೀಗಾಗಿ ಬಂಡವಾಳಶಾಹಿಗಳ ಬಲೆಗೆ ತತ್ವ, ನಿಷ್ಠೆಗಳ ಬಲಿಯಾಗಕೂಡದು ಎಂದು ಜ್ಞಾಪನೆ ಮಾಡುತ್ತಾ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ವಿಚಾರಕ್ಕೆ ಸಂಬಂಧಿಸಿದಂತೆ ಆಸಕ್ತಿ ವಹಿಸುತ್ತಿಲ್ಲ. ಹೀಗಾಗಿ ಸುಮಾರು 350-400 ಜನ ರೈತರಹಿತ ಮಣ್ಣುಪಾಲಾಗುತ್ತಿದೆ. ಕೆಲ ರೈತರು ಸಿಡಿದೆದ್ದು ರಾಜ್ಯದ ಶ್ರೇಷ್ಠ ನ್ಯಾಯಾಲಯದಲ್ಲಿ ದಾವೆ ಹೂಡಿರುತ್ತಾರೆ. ರೈತರ ಷೇರುಗಳನ್ನು ಕಡಿಮೆ ಬೆಲೆಗೆ ಕೊಂಡು ಕಾರ್ಖಾನೆ ಅಧ್ಯಕ್ಷರು ಮೆಜಾರಿಟಿ ಷೇರುಗಳನ್ನು ಮಾರಿಕೊಂಡು ಆಡಳಿತವನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಸರ್ಕಾರದ ಪ್ರಭಾವದಿಂದ ರೈತರ ಶೋಷಣೆ ಆಗುತ್ತದೆ ಎಂದಿರುತ್ತಾರೆ.[67]

1974ರ ಸುಪ್ರಿಂಕೋರ್ಟ್ ನಿಯಮಾವಳಿಯಂತೆ ಇದು ಸಾರ್ವಜನಿಕ ಸಂಸ್ಥೆ ದೇಶದ ಆಸ್ತಿ ಇದನ್ನು ಮಾರಾಟ ಮಾಡುವಂತಿಲ್ಲ. ಅದರಂತೆ ಈ ನಿಯಮಗಳು ಇಲ್ಲಿ ಪಾಲನೆ ಆಗಿಲ್ಲ. ಇದನ್ನು ಮಾರಾಟ ಮಾಡಬೇಕಾದರೆ, ಸರ್ಕಾರದ ಷೇರು ಎಷ್ಟು, ಎಷ್ಟಕ್ಕೆ ಮಾರಿದ್ದರು. ಈ ಬಗ್ಗೆ ಎಂಡಾಸ್‌ಮೆಂಟ್ ಕೊಟ್ಟಿರುವುದೂ ಇಲ್ಲ. ಎಷ್ಟು ಷೇರು ಇತ್ತು. ಒಂದು ಷೇರಿನ ಮೌಲ್ಯ ಎಷ್ಟು, ಎಷ್ಟು ಹಣಕ್ಕೆ ಮಾರಿದ್ದೀರಿ ಎಂದು ಕೇಳಿದರು. ಇದರಲ್ಲಿ ತತ್ವ ಇದ್ದು, ಸುಪ್ರೀಂಕೋರ್ಟ್ ನಿರ್ಧಾರವೂ ಮುಖ್ಯ. ದಿನಪತ್ರಿಕೆಯಲ್ಲಿ ಜಾಹೀರಾತು ನೀಡಿ ಸಾರ್ವತ್ರಿಕರಣಗೊಳಿಸಿ ಯಾರು ಹೆಚ್ಚಿನ ಮೊತ್ತಕ್ಕೆ ಷೇರು ಖರೀದಿಸುತ್ತಾರೆಯೋ ಅವರಿಗೆ ನೀಡಬೇಕಾಗಿರುತ್ತದೆ. ಇಲ್ಲದಿದ್ದಲ್ಲಿ ಇದು ಕಾನೂನು ಬಾಹಿರ ಎಂದು ಸುಪ್ರೀಂಕೋರ್ಟ್ ಆದೇಶ ನೀಡಿದೆ. ಈ ವಿಚಾರವನ್ನು ಹಕ್ಕುಬಾಧ್ಯತಾ ಸಮಿತಿಗೆ ಕಳುಹಿಸಲು ಅರ್ಹವಾಗಿದೆ ಎಂದರು. ಕೈಗಾರಿಕಾ ಸಚಿವರು ಹಾಗೂ ಕಾರ್ಖಾನೆ ಅಧ್ಯಕ್ಷರು ಜಿ.ಮಾದೇಗೌಡರಿಗೆ ಉತ್ತರಿಸುತ್ತಾ, ರಾಜ್ಯ ಸರ್ಕಾರದ ಷೇರುಗಳನ್ನು ಕೊಂಡುಕೊಳ್ಳಲು ಪರಿಶೀಲಿಸುತ್ತಿರುವುದು ನಿಜವಲ್ಲ. ಈ ಕಾರ್ಖಾನೆಯು ಕೋ-ಆಪರೇಟಿವ್ ಸಂಸ್ಥೆ ಅಲ್ಲವೆಂದು, ಇದೊಂದು ಜಾಯಿಂಟ್ ಸೆಕ್ಟರ್ ಕಂಪೆನಿಯೆಂದು ಹೇಳುತ್ತಾ ರೈತರೆ ನೇರವಾಗಿ ಷೇರು ಮಾರಾಟವನ್ನು ಖುದ್ದಾಗಿ ಕಂಪೆನಿ ಆಡಳಿತ ಅಧ್ಯಕ್ಷರಿಗೆ ಮಾರುತ್ತಿದ್ದಾರೆಂದು ಇದರಲ್ಲಿ ಯಾವುದೇ ದುರುದ್ದೇಶವಿಲ್ಲ ವೆಂದು ಉತ್ತರಿಸುತ್ತಾ, ಈ ಸಕ್ಕರೆ ಕಾರ್ಖಾನೆ ಬಹಳ ತೊಂದರೆಯಲ್ಲಿತ್ತು. ಹೀಗಾಗಿ ಕೆ.ಎಸ್.ಐ.ಡಿ.ಸಿ. ದಿವಾಳಿ ತಡೆಗಟ್ಟಲು ರೈತರಿಗೆ ಅನುಕೂಲವಾಗಲೆಂದು ರೈತರ ಹಿತ ಕಾಪಾಡಲು ಮಾದೇಗೌಡರೇ ಮುಂದಾಗಲಿ ಎಂದು ಉತ್ತರ ನೀಡಿರುತ್ತಾರೆ. ಜಿ.ಮಾದೇಗೌಡರು ಸರ್ಕಾರದ ಷೇರು ಇರುವ ಕಾರ್ಖಾನೆ ಮಾರಾಟ ಮಾಡುವಾಗ ಷೇರುನ್ನು ಪ್ರಿಮಿಲೇಜ್ ಆಗುತ್ತದೆ. ಇಲ್ಲಿ ಪ್ರಿವಿಲೇಜ್ ಕಮಿಟಿಕಾರ್ಯವೇನು ಎಂದು ಪ್ರಶ್ನಿಸಿರುತ್ತಾರೆ. ಆದರೆ ಸಚಿವರು ಇದು ಬ್ರೀಚ್ ಆಫ್ ಪ್ರಿವಿಲೇಜ್ ಆಗುವುದಿಲ್ಲ ಎನ್ನುತ್ತಾರೆ. 1988 ರಲ್ಲಿ ಜಿ.ಮಾದೇಗೌಡರು ಹಕ್ಕುಬಾಧ್ಯತಾ ಸೂಚನೆಯ ಪ್ರಸ್ತಾಪಗಳನ್ನು

ನಿರಾಕರಿಸಲಾಗುತ್ತದೆ.[68] ನಂತರ ಷೇರುಗಳನ್ನು ಸ್ಥಳೀಯ ಆಡಳಿತಕ್ಕೆ ಒಳಪಡುವುದನ್ನು ಮನಗಾಣಬಹುದು. ಇದರ ಜೊತೆಗೆ ನೀರಾವರಿ ಯೋಜನೆಗಳ ಬಗ್ಗೆ ಪ್ರಸ್ತಾಪಿಸಿದರು. ಹಾರಂಗಿ ಮತ್ತು ಹೇಮಾವತಿ ಜಲಾಶಯಗಳಿಂದ 5 ಟಿ.ಎಂ.ಸಿ. ನೀರನ್ನು ಕೆ.ಆರ್.ಎಸ್. ಅಚ್ಚುಕಟ್ಟು ಪ್ರದೇಶದ ಕಬ್ಬಿನ ಬೆಳೆಗೆ ಬಿಡುಗಡೆ ಮಾಡುವ ಬಗ್ಗೆ ಮಾತನಾಡುತ್ತಾ ಜಿ.ಮಾದೇಗೌಡರು ನೀರಾವರಿ ಮಂತ್ರಿಗಳನ್ನು ಸದನದಲ್ಲಿ ಗಮನ ಸೆಳೆದ ನಂತರ ಮತಕ್ಕೆ ಹಾಕಲು ತಿಳಿಸುತ್ತಾರೆ. ಹೀಗೆ ಕರ್ನಾಟಕ ರಾಜ್ಯದಲ್ಲಿ ಆದಷ್ಟು ಭಾಗಗಳನ್ನು ನೀರಾವರಿಗೆ ಒಳಪಡಿಸಬೇಕು. ಮದ್ರಾಸ್ ರಾಜ್ಯದಲ್ಲಿ ನೀರಾವರಿಗೆ ಹೆಚ್ಚು ಆದ್ಯತೆ ಇದ್ದು ನಂತರ ರಸ್ತೆ ರಿಪೇರಿ, ಶಾಲೆ ನಿರ್ಮಾಣ ಮಾಡುತ್ತದೆ. ಕಾವೇರಿ ನೀರು ಪ್ರಾಜೆಕ್ಟ್‌ನಿಂದಾಗಿ ಹೆಚ್ಚು ನೀರಾವರಿ ಪ್ರದೇಶಗಳು ಹೊಂದಿದ್ದಾರೆ. ಈ ಪ್ರಾಜೆಕ್ಟ್‌ಗೆ ಹೆಚ್ಚು ಹಣ ಹಾಕಿ ಪೂರ್ಣಗೊಳಿಸಬೇಕೆಂದು ಮುಖ್ಯಮಂತ್ರಿಗಳಿಗೆ ಬೇಡಿಕೆ ಸಲ್ಲಿಸಿರುತ್ತಾರೆ.[69] ಶಾಲಾ ಕಟ್ಟಡ ಇಲ್ಲದಿದ್ದಲ್ಲಿ ಮರದ ಕೆಳಗೆ ಪಾಠ ಹೇಳಿಕೊಡಬಹುದು. ಹೀಗಾಗಿ ನೀರಾವರಿಗೆ ಆದ್ಯತೆ ನೀಡಿ ಎಂದು ದಿನಾಂಕ 19 ಜುಲೈ 1979 ರಲ್ಲಿ ಪ್ರಸ್ತಾಪಿಸಿರುತ್ತಾರೆ. ಜಿ.ಮಾದೇಗೌಡರ ನೇರ ನಡೆ ನುಡಿಗೆ ನಿಷ್ಠುರ ನಿಸ್ವಾರ್ಥ ವ್ಯಕ್ತಿತ್ವ.

1978 ಜುಲೈ 28 ರಲ್ಲಿ ಕಂದಾಯ ಸಚಿವರಾಗಿದ್ದ ಬಿ.ಬಸವಲಿಂಗಪ್ಪರವರಿಗೆ ತಿಳಿಸುತ್ತಾ ಭೂ ರಹಿತರಿಗೆ ಸಾಗುವಳಿ ಜಮೀನನ್ನು ಆಯಾಯಾ ಜಿಲ್ಲೆ ಮತ್ತು ತಾಲ್ಲೂಕಿನ ತಹಶೀಲ್ದಾರರು ಹಂಚಿಕೆ ಮಾಡುತ್ತಾರೆ. ಆದರೆ ಇದರಲ್ಲಿ ಮಂತ್ರಿಗಳ ನೇರ ಹಸ್ತಕ್ಷೇಪ ಮಾಡಬಾರದು ಮಂತ್ರಿಗಳು ತಮಗೆ ಬೇಕಾದವರಿಗೆ ಕೊಡಿ ಎಂದು ಅಧಿಕಾರಿಗಳಿಗೆ ಸೂಚನೆ ಕೊಟ್ಟರೆ ಹೇಗೆ ಎನ್ನುತ್ತಾರೆ. ನಡೆದಿರುವ ಅಪಾರ ಅಕ್ರಮಗಳನ್ನು ಬಯಲಿಗೆಳೆಯುತ್ತಾರೆ. ಈ ಅಕ್ರಮಗಳನ್ನು ತಡೆಗಟ್ಟಲು ಏನು ಮಾಡಬೇಕು, ಏನಾದರೂ ನಿರ್ದೇಶನ ಕೊಟ್ಟಿದ್ದೀರಾ ಇಂತಹ ಚಾಳಿ ನಿಲ್ಲಿಸಬೇಕು. ಕಾನೂನನ್ನು ಪಾಲಿಸದ ಅಧಿಕಾರಿಗಳಿಗೆ ಆದೇಶ ನೀಡಬೇಕೆಂದು ಜಿ.ಮಾದೇಗೌಡರು ಸರ್ಕಾರವನ್ನು ಎಚ್ಚರಿಸಿದರು.[70] ಸಾಗುವಳಿ ಜಮೀನನ್ನು ಬಡವರಿಗೆ ಕೊಡಬೇಕೆಂದು ತಿಳಿಸಿದರು.

**ಲೋಕೋಪಯೋಗಿ ಇಲಾಖೆಯ ಕಾರ್ಯಕ್ರಮಗಳ ಬಗ್ಗೆ ಚರ್ಚೆ**

ಜಿ.ಮಾದೇಗೌಡರು ದೇಶದ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ರಸ್ತೆಗಳ ಸಂಪರ್ಕ ಅಭಿವೃದ್ಧಿಗೆ ಹೆಚ್ಚಿನ ಪ್ರಮಾಣದಲ್ಲಿ ಆದ್ಯತೆ ನೀಡಬೇಕೆಂದಿದ್ದಾರೆ. ಅದರಲ್ಲೂ ರೈತನು ತಾನು ಬೆಳೆದ ಆಹಾರ ಪದಾರ್ಥಗಳನ್ನು ಸಾಗಿಸುವುದಕ್ಕೆ ರಸ್ತೆ ಸಂಪರ್ಕ ಬಹಳ ಅತಾವಶ್ಯಕ ಹೀಗಾಗಿ ಕಳೆದ ಹತ್ತು ವರ್ಷಗಳಿಂದ ಈ ಕೆಲಸಕ್ಕೆ ನಾವು ಏನೇನು ಖರ್ಚು ಮಾಡಿಲ್ಲವೆಂದಿರುತ್ತಾರೆ. ಅಲ್ಲದೆ ಈ ಉದ್ದೇಶದ ಖರ್ಚಿನ ಮೊತ್ತ ಪ್ರತಿವರ್ಷ ಕೂಡ ಕಡಿಮೆ ಆಗುತ್ತದೆ. ಮೇಲಾಗಿ ಕಬ್ಬು ಬೆಳೆಯುವ ಪ್ರದೇಶಗಳಲ್ಲಿ ರಸ್ತೆಗಳ ಆವಶ್ಯಕತೆ ಇದೆ. ಇವತ್ತು ರೈತ ತಾನು ಬೆಳೆದ ಕಬ್ಬನ್ನು ತಲೆಮೇಲೆ ಹೊತ್ತು ಸಾಗಿಸಬೇಕಾಗಿದೆ. ಮಂಡ್ಯ

ಜಿಲ್ಲೆಯಲ್ಲಿ ಷುಗರ್ ಕೇನ್ ಫಂಡ್ ಮಾಡಿ ರಸ್ತೆ ಅಭಿವೃದ್ಧಿಗೆ ಆ ಹಣ ಬಳಸಲಾಗುತ್ತಿತ್ತು. ಆದರೆ ಇಂದು ಈ ಷುಗರ್ ಕೇನ್ ಸೆಸ್ ಫಂಡ್ ಜನರಲ್ ಪೋಲ್‌ಗೆ ಹೋಗಿದೆ. ಮಂಡ್ಯ ಜಿಲ್ಲೆಯ ರಸ್ತೆಗಳಲ್ಲಿ ತಿರುಗಾಡುವುದು ಸಾಧ್ಯವಿಲ್ಲ. ಇದಕ್ಕೆ ರಾಜಕೀಯ ಇಚ್ಛಾಶಕ್ತಿ ಕೊರತೆ ಮತ್ತು ಸ್ವಾರ್ಥ ರಾಜಕಾರಣವೆ ಕಾರಣ ಎಂದು ದೂರುತ್ತಾ, ಮಂಡ್ಯ ಜಿಲ್ಲೆಯ ಜನರು ಇವತ್ತು ರಸ್ತೆಗಳಲ್ಲಿ ಏಳುವ ಧೂಳನ್ನು ಕುಡಿದು, ಕ್ಷಯರೋಗಕ್ಕೆ ತುತ್ತಾಗುತ್ತಿದ್ದಾರೆ. ಈ ವಿಚಾರ ಮುಖ್ಯಮಂತ್ರಿಗಳಿಗೂ ತಿಳಿದಿದೆ. ಸಂಬಂಧಪಟ್ಟ ಮಂತ್ರಿಗಳು ಕ್ಷಯರೋಗಿಗಳ ಸಂಖ್ಯೆಯನ್ನು ಮಾಹಿತಿ ಮೂಲಕ ಪಡೆದು ಪರಿಶೀಲಿಸಬೇಕೆಂದಿದ್ದಾರೆ. ಅಂತಿಮವಾಗಿ ಜಿ.ಮಾದೇಗೌಡರು ಕಬ್ಬು ಬೆಳೆಯುವ ಭಾಗಗಳಿಗಾದರೂ ಪ್ರತ್ಯೇಕವಾದ ಇಲಾಖೆಯನ್ನು ಮಾಡಿ ಅದಕ್ಕೆ ಈ ರಸ್ತೆಗಳ ನಿರ್ವಹಣೆ ಕೆಲಸವನ್ನು ನೀಡುವ ಕೆಲಸವನ್ನು ಸರ್ಕಾರದವರು ಪುನರ್ ಪರಿಶೀಲಿಸಬೇಕು ಎಂದು ಗಮನ ಸೆಳೆದಿರುತ್ತಾರೆ.[71]

**ಮಂಡ್ಯ ಮತ್ತು ಚೆನ್ನಪಟ್ಟಣ ತಾಲ್ಲೂಕುಗಳಲ್ಲಿ ತೆಂಗು ಸುಳಿ ಕೊಳೆತ ರೋಗ ನಿವಾರಣೆ ಬಗ್ಗೆ ಚರ್ಚೆ**

ಜಿ.ಮಾದೇಗೌಡರು 21 ಜುಲೈ 1978ರಲ್ಲಿ ಶಾನಸ ಸಭೆಯಲ್ಲಿ ಮಂಡ್ಯ ಮತ್ತು ಚನ್ನಪಟ್ಟಣ ತಾಲ್ಲೂಕುಗಳಲ್ಲಿ ಮಾತ್ರ ತೆಂಗಿನಸುಳಿ ಕೊಳೆತ ರೋಗ ಇದೆಯೆಂದು ಭಾವಿಸಲಾಗಿದೆ. ಆದರೆ ಕೃಷಿ ಮಂತ್ರಿಗಳು ಈ ರೋಗ ರಾಜ್ಯದೆಲ್ಲೆಡೆ ಇದೆ ಎಂದು ಹೇಳಿರುತ್ತಾರೆ. ತೆಂಗು ಬೆಳೆ ಆರು ತಿಂಗಳ ಅಥವಾ ಒಂದು ವರ್ಷದ ಬೆಳೆಯಲ್ಲಾ ನೂರಾರು ವರ್ಷಗಳ ಬೆಳೆ ಆಗಿದ್ದು ಈ ರೋಗ ನಿವಾರಿಸಲು ಜಾಗ್ರತೆ ವಹಿಸಬೇಕು ಎಂದಿರುತ್ತಾರೆ. ಆದರೆ ಮಂತ್ರಿಗಳು ರೈತರೇ ಈ ಬಗ್ಗೆ ಗಮನ ವಹಿಸಿರಬೇಕು ಎನ್ನುತಿದ್ದಾರೆ. ಆದರೆ ರೈತರು ಮುಗ್ಧರ ಆಗಿದ್ದು ಅವರಿಗೆ ತಾಲ್ಲೋಕು ಆಫೀಸ್ ಗೊತ್ತಿಲ್ಲ, ಅಗ್ರಿಕಲ್ಚರ್ ಡಿಪಾರ್ಟ್‌ಮೆಂಟ್ ಎಂದರೆ ಗೊತ್ತಿಲ್ಲ. ಮಂತ್ರಿಗಳೂ ಗೊತ್ತಿಲ್ಲ, ಹೀಗಾಗಿ ಸರ್ಕಾರ ಸೂಕ್ತ ಕ್ರಮವಹಿಸಬೇಕೆಂದಿದ್ದಾರೆ.

ಕೃಷಿ ಸಚಿವರಾಗಿದ್ದ ಎಂ.ಮಲ್ಲಪ್ಪ ರವರು ರೈತರನ್ನು ಪ್ರೇರೇಪಿಸಿ ಹೊಸ ಹೊಸ ಔಷಧ ಬಳಕೆಯ ಅರಿವು ಮೂಡಿಸಬೇಕು ಇದು ಸಾರ್ವಜನಿಕ ಕರ್ತವ್ಯವೂ ಹೌದು ಎಂದಿರುತ್ತಾರೆ. ಆದರೆ ಜಿ.ಮಾದೇಗೌಡರು ತೆಂಗು ಸುಳಿ ಕೊಳೆತ ರೋಗ ನಿವಾರಣೆ ಅರಿವು ಎಲ್ಲಾ ರೈತರಿಗೂ ಅರಿವಿರದ ಕಾರಣ ಸರ್ಕಾರದ ವತಿಯಿಂದ ಈ ಕಾರ್ಯಕ್ರಮ ಮಾಡಿ ರೇಡಿಯೋ ಮತ್ತು ಪತ್ರಿಕೆಗಳ ಮೂಲಕ ಪ್ರಚಾರ ಮಾಡಿದರೆ ಸಾಲದು, ಸರ್ಕಾರಕ್ಕೆ ದೊಡ್ಡ ಇಲಾಖೆ ಇದೆ ಸಿಬ್ಬಂದಿಗಳು ಇದಕ್ಕಾಗಿಯೇ ಇದ್ದಾರೆ ಹಳ್ಳಿಗಳಲ್ಲಿ ಗ್ರಾಮ ಸೇವಕರು ಇರುತ್ತಾರೆ. ಈ ಬಗ್ಗೆ ತಿಳುವಳಿಕೆ ಹೊಂದಿರುವ ರೈತರಿಗೆ ಇದರ ಬಗ್ಗೆ ಹೇಳಿಕೊಡಬೇಕಾಗಿಲ್ಲ. ಗೊತ್ತಿಲ್ಲದವರಿಗೆ ಇಲಾಖೆ ವತಿಯಿಂದಲೇ ಈ ಕಾರ್ಯ ನಡೆಯಬೇಕು. ಇಲ್ಲದಿದ್ದಲ್ಲಿ ಬಹಳ ವ್ಯಾಪಕವಾಗಿ ಹರಡುತ್ತದೆ. ಶೀಘ್ರವಾಗಿ ಸರ್ಕಾರ

ಕ್ರಮ ತೆಗೆದುಕೊಳ್ಳಬೇಕೆಂದು ಸರ್ಕಾರವನ್ನ ಒತ್ತಾಯಿಸಿ ರೈತಪರ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ.[72]

1978ರಲ್ಲಿ ಜಿ.ಮಾದೇಗೌಡರು ಖಾಸಗಿ ಕೈಗಾರಿಕೆಗಳ ಅಭಿವೃದ್ಧಿ ನೆರವಿಗೆ ಸರ್ಕಾರವು ಮುಂದಾಗಬೇಕೆಂದು ಪ್ರಸ್ತಾಪಿಸಿ. ಇದರಲ್ಲಿ ಎರಡು ರೀತಿ ತೊಂದರೆಗಳು ಎದುರಾಗುತ್ತವೆ. ಆರ್ಥಿಕ ಮುಗ್ಗಟ್ಟು ಹಾಗೂ ಕಾನೂನಿನ ಆಡಚಣೆ ಇರುತ್ತದೆಂದು ಮುಖ್ಯಮಂತ್ರಿಗಳಿಗೆ ತಿಳಿಸಿದರು. ಕಾನೂನಿನ ಮತ್ತು ಹಣದ ಅಭಾವವಿದ್ದಲ್ಲಿ ಸರ್ಕಾರವು ಯಾವುದಾದರೂ ಒಂದು ಕೋ–ಆಪರೇಟಿವ್ ಸೆಕ್ಟಾರ್‌ಗೆ ಅಥವಾ ಖಾಸಗಿ ಏಜೆನ್ಸಿಗೆ ಬದಲಾಯಿಸಲು ತಯಾರಾಗಿರಬೇಕು ಎಂದು ಪ್ರಸ್ತಾಪಿಸಿದ್ದಾರೆ. ಈ ವಿಚಾರ ಗುರುದೇವರಹಳ್ಳಿ ಮಾದೇಗೌಡರು ಖಾಸಗಿ ಕೈಗಾರಿಕೆಗಳ ಬಗ್ಗೆ ಹೊಂದಿದ್ದ ಧೋರಣೆ ಅವುಗಳ ಹಿತವನ್ನು ಸರ್ಕಾರವು ಸಾರ್ವಜನಿಕರಿಗಾಗಿ ಕಾಯಬೇಕು ಎಂಬುದನ್ನು ಬಯಸಿದ್ದರೆಂಬುದನ್ನು ಅರಿಯಬಹುದು.[73] ಕಾನೂನು ದೃಷ್ಟಿಕೋನದಲ್ಲಿ ದೇಶದಲ್ಲಿ ಆಡಳಿತದ ಸೇವೆಯಲ್ಲಿರುವ ಅಧಿಕಾರಿಗಳು ದರ್ಬಾರ್ ಮಾಡುತ್ತಿದ್ದಾರೆಂದು ಹಾಗೂ ಪ್ರಜಾಪ್ರತಿನಿಧಿಗಳ ಮಾತುಗಳನ್ನು ಅವರು ಆಲಿಸುತ್ತಿಲ್ಲವೆಂದು ಹೇಳಿದರು. ಆಡಳಿತ ಸೇವೆಯಲ್ಲಿರುವವರು ಜನಗಳ ಕಲ್ಯಾಣಕ್ಕಾಗಿ ಜೀವನವನ್ನು ಶ್ರಮಿಸಬೇಕು, ವಿಲಾಸಿ ಜೀವನಕ್ಕಲ್ಲ ಎಂದು ಗೌಡರ ಅಭಿಪ್ರಾಯವಾಗಿತ್ತು. ಇದನ್ನು ವಿಧಾನಸಭೆಯಲ್ಲಿ ಎಲ್ಲ ಸದಸ್ಯರಿಗೂ ತಿಳಿಸುತ್ತ ಸಭಾಧ್ಯಕ್ಷರ ಗಮನಕ್ಕೆ ತಂದರು ಹಾಗೂ ಇದರ ಬಗ್ಗೆ ಕ್ರಮಕೈಗೊಳ್ಳಬೇಕೆಂದು ಮನವಿ ಮಾಡಿದರು. ದೇಶದಲ್ಲಿ ಪಂಚಾಯಿತಿ ವ್ಯವಸ್ಥೆ ಬಂದ ನಂತರ. ಕಾಲ ಕಾಲಕ್ಕೆ ಚುನಾವಣೆಗಳು ನಡೆಯುತ್ತಿದ್ದವು. ಆಯ್ಕೆಯಾದ ಅಭ್ಯರ್ಥಿಗಳು ಆಡಳಿತದಲ್ಲಿ ದರ್ಬಾರ್ ಮಾಡುವುದನ್ನು ಬಿಟ್ಟು, ಜನಗಳ ಸೇವೆ ಮಾಡಬೇಕು. ಜನಗಗಳಿಂದ ಸಂಗ್ರಹಿಸಿದ ತೆರಿಗೆ ಹಣವನ್ನು ಜನಗಳ ಕಲ್ಯಾಣಕ್ಕಾಗಿ, ಬಹುಉಪಯೋಗಿ ಯೋಜನೆಗಳನ್ನು ರೂಪಿಸುವ ಮೂಲಕ ವೆಚ್ಚ ಮಾಡಬೇಕು[74] ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**ಮಂಡ್ಯದ ಮೈಸೂರು ಸಕ್ಕರೆ ಕಾರ್ಖಾನೆಯ ಮಲಿನ ನೀರು ಸಂಸ್ಕರಣೆ ಬಗ್ಗೆ ಚರ್ಚೆ ಹಾಗೂ ಸಲಹೆ**

ಈ ಬಗ್ಗೆ 1985 ರ ವಿಧಾನಸಭೆಯಲ್ಲಿ ಪ್ರಸ್ತಾಪಿಸುತ್ತಾ, ಮೈಸೂರು ಸಕ್ಕರೆ ಕಾರ್ಖಾನೆ ಹೊರಬಿಡುತ್ತಿರುವ ಕಲುಷಿತ ನೀರು ಹೆಬ್ಬಾಳ ಹಾಗೂ ನಾಲೆಗೆ ಸೇರಿ ಜನ ಮತ್ತು ದನಕರುಗಳಿಗೆ ತೊಂದರೆಯಾಗುತ್ತಿರುವುದನ್ನು ಸರ್ಕಾರದ ಗಮನಕ್ಕೆ ತಂದರು ಹಾಗೂ ಇದನ್ನು ತಡೆಗಟ್ಟಲು ಸರ್ಕಾರ ಯಾವ ಕ್ರಮಕೈಗೊಂಡಿದೆ ಎಂದು ಜಿ.ಮಾದೇಗೌಡರು ಪ್ರಶ್ನಿಸಿದರು. ಇದಕ್ಕೆ ಅಂದಿನ ಮುಖ್ಯಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗಡೆಯವರು ಈ ಸಮಸ್ಯೆ ಸರ್ಕಾರದ ಗಮನಕ್ಕೆ ಬಂದಿದೆ ಎಂದು ಸದನದಲ್ಲಿ

ಒಪ್ಪಿಕೊಂಡರು. ಇದಕ್ಕಾಗಿ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ತಿಳಿಸಿದಂತೆ ಮಂಡ್ಯದ ಬಳಿ ಸ್ಥಾಪಿತವಾಗಿರುವ ಮೈಸೂರು ಸಕ್ಕರೆ ಕಾರ್ಖಾನೆಯಿಂದ ಕಲುಷಿತ ನೀರನ್ನು ಶುದ್ಧೀಕರಿಸಲು ಬೇಕಾದ ಸಂಸ್ಕರಣ ಘಟಕಗಳನ್ನು ಅವಳಡಿಸದಿರುವುದರಿಂದ ಜಲಮಾಲಿನ್ಯ ನಿಯಂತ್ರಣ ಕಾಯಿದೆಯನ್ನು ಉಲ್ಲಂಘಿಸಿದೆ. 1974ರ ನಿಯಮದಂತೆ ಬೆಂಗಳೂರು ಮೆಟ್ರೋಪಾಲಿಟನ್ ಮಾಜಿಸ್ಟ್ರೇಟ್ ನ್ಯಾಯಾಲಯದಲ್ಲಿ 23.3.1985ರಂದು ಮೊಕದ್ದಮೆಯನ್ನು ಹೂಡುವ ಮೂಲಕ ಆಜ್ಞೆ ಮತ್ತು ಪರಿಹಾರಗಳನ್ನು ಪಡೆದುಕೊಳ್ಳಬೇಕೆಂದು ತಿಳಿಸಿದರು.[75]

**ಜಿ.ಮಾದೇಗೌಡರು ಅರಣ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರಾದ ವೇಳೆ ಸದನದಲ್ಲಿ ಪ್ರಸ್ತಾಪಿಸಿದ ವಿಚಾರಧಾರೆಗಳು ಹಾಗೂ ಅವರ ಚಿಂತನೆ**

ಶಾಸನ ಸಭೆಯಲ್ಲಿ ಪ್ರಸ್ತಾಪಿಸಿದ ಚಿಂತನೆಗಳೆಂದರೆ, 1982 ಫೆಬ್ರವರಿ 10 ರಂದು ಸದನದಲ್ಲಿ ಬಿಜಾಪುರ ಜಿಲ್ಲೆಯಲ್ಲಿ ಅರಣ್ಯ ಸಂರಕ್ಷಣೆ ಮತ್ತು ಅರಣ್ಯ ಬೆಳೆಸುವ ಕಾರ್ಯಯೋಜನೆ ಬಗ್ಗೆ ಚಿಂತನೆಯನ್ನು ವ್ಯಕ್ತಪಡಿಸಿದರು. ಅದೇನೆಂದರೆ, ಪ್ರತಿವರ್ಷ ಬಿಜಾಪುರ ಜಿಲ್ಲೆಯಲ್ಲಿ 800 ಹೆಕ್ಟೇರ್ ಪ್ರದೇಶದಲ್ಲಿ ಅರಣ್ಯ ಬೆಳೆಸುವ ಕಾರ್ಯಕ್ರಮ ಇದ್ದು, ಒಟ್ಟು 83000 ಎಕರೆ ಅರಣ್ಯವಿದ್ದು, ರೆವಿನ್ಯೂ ಲ್ಯಾಂಡ್ 1000 ಎಕರೆ ಅರಣ್ಯ ಇಲಾಖೆಗೆ ವರ್ಗಾವಣೆ ಆಗಿದೆ. ಜೊತೆಗೆ ವಿಶ್ವಬ್ಯಾಂಕ್ ಸಹಾಯ ಪಡೆದುಕೊಳ್ಳಲು 60 ಕೋಟಿ ರೂ.ಗಳ ಯೋಜನೆ ಬೇಡಿಕೆ ಕೊಟ್ಟಿರುತ್ತೇವೆ. ಈ ಮಂಜೂರಾತಿ ನಂತರ ರಸ್ತೆ ಅಕ್ಕಪಕ್ಕ ಇತರೆ ಭಾಗಗಳಲ್ಲಿ ಈ ಯೋಜನೆ ಕಾರ್ಯಗತಗೊಳಿಸಲಾಗುವುದು. ಅರಣ್ಯ ಸಂರಕ್ಷಣೆಯ ಮತ್ತು ಅರಣ್ಯ ವಿಸ್ತರಣೆಗೆ ಸಂಬಂಧಿಸಿದಂತೆ ಇವರ ಚಿಂತನೆಗಳು ಈ ಮೂಲಕ ವ್ಯಕ್ತವಾಗಿವೆ. ನಾವು ಅರಣ್ಯವನ್ನು ಬೆಳೆಸಬೇಕು, ಉಳಿಸಬೇಕು ಹಾಗೂ ರಚನೆ ಮಾಡಬೇಕು, ತನ್ಮೂಲಕ ಈ ದೇಶ ಸಂವೃದ್ಧಿಯಾಗಬೇಕೆಂದು ಉತ್ಕಟ ಇಚ್ಚೆಯನ್ನು ಅವರು ತಳೆದಿರುವುದನ್ನು ಕಾಣಬಹುದು.

ಮುಂದುವರೆಸಿ ಪ್ರತಿವರ್ಷವೂ ಅರಣ್ಯ, ಬಯಲು ಭೂಮಿಯಾಗಿ ಮಾರ್ಪಾಡಾಗುತ್ತಿದ್ದು ಆದಷ್ಟು ಮಟ್ಟಿಗೆ ಅರಣ್ಯ ರಕ್ಷಣೆ ಮಾಡಬೇಕೆಂಬುದೇ ಸರ್ಕಾರದ ದೃಢ ನಿಲುವು ಜೊತೆಗೆ ಇತ್ತೀಚೆಗೆ ಹೊರಗಡೆಯವರು ಅರಣ್ಯಗಳನ್ನು ನಾಶ ಮಾಡುತ್ತಿರುವುದು ಇದೆ. ಹೊರಗಡೆಯವರು ಅಲ್ಲಿನ ಮರಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವುದನ್ನು ತಡೆಹಿಡಿಯುವುದಕೋಸ್ಕರವಾಗಿ ಮೊಬೈಲ್ ಸ್ಟಾಕ್ ಮಾಡಿದ್ದೇವೆ ಮತ್ತು ವೈರ್‌ಲೆಸ್ ಸೆಟ್‌ಗಳ ಮುಖಾಂತರ ಕೇರಳದ ಬಾರ್ಡರ್‌ಗೆ ಹೋಗುವುದನ್ನು ಪತ್ತೆ ಹಚ್ಚುವುದಕ್ಕೆ ಕಾರ್ಯಕ್ರಮಗಳನ್ನು ಕೈಗೊಂಡಿದೇವೆ. ಜೊತೆಗೆ ಕೆಲವು ಕೈಗಾರಿಕೆಗಳಿಗೆ ಮರಗಳನ್ನು ಇಂತಿಷ್ಟನ್ನು ಕೊಡಬೇಕು. ಹಾಲಿ ಇರುವ ಮರಗಳನ್ನು ಪೂರೈಕೆ ಮಾಡಲು

ಸಾಧ್ಯವಿಲ್ಲ. ನಮಗೆ ಅಪಾರವಾಗಿ ಬೇಡಿಕೆ ಇದ್ದರೂ ಸಹ ಹೊಸ ಕೈಗಾರಿಕೆಗಳಿಗೆ ಮರಗಳನ್ನು ಕೊಡಬಾರದೆಂಬ ನೀತಿಯನ್ನು ಕೈಗೊಂಡರು.[76]

ಸೂಳ್ಯ ಮತ್ತು ಪುತ್ತೂರುನಲ್ಲಿ ರಬ್ಬರ್‌ಮರ ತೋಟಗಾರಿಕೆ ಬಗ್ಗೆ ಸದನದಲ್ಲಿ ಗುರುದೇವರಹಳ್ಳಿ ಮಾದೇಗೌಡರು ತೆಗೆದುಕೊಂಡ ನಿಲುವು ಈ ಕೆಳಕಂಡಂತಿವೆ. ಸೂಳ್ಯ ಮತ್ತು ಪುತ್ತೂರುನಲ್ಲಿ ರಬ್ಬರ್‌ಮರ ತೋಟಗಾರಿಕೆ ವಿಸ್ತರಣೆಗಾಗಿ 4442.00 ಹೆಕ್ಟೆರ್‌ನಲ್ಲಿ ತೋಟಗಾರಿಕೆ ಇದೆ. ಇದರ ಜೊತೆಗೆ ಕಾಫರ್ ಪಂಗ್ಗಿಸೈಡ್ ಸಿಂಪಡನೆ ಸಾಮಾನ್ಯ ದಿನಮಾನ ಯಾವುದು ಮಾನ್ಸೂನ್ ದಿನಮಾನದಲ್ಲಿ ಸಾಧ್ಯವಿದೆ. ರಬ್ಬರ್ ಬೋಡ್ ಔಷಧ ಸಿಂಪಡಣೆ ಬಗ್ಗೆ ದೃಢಪಡಿಸಿದೆಯಾ ಇದರ ಖರ್ಚುವೆಚ್ಚ ಸುಮಾರು ರೂ. 9.95442.00 ಗಳಾಗುತ್ತದೆ. 1981ರ ಗಾಳಿಯಲ್ಲಿ ಸಿಂಪಡಣೆ ದಿನಾಂಕ 29 ನೇ ಮೇ 1981 ರಿಂದ 9ನೆ ಜೂನ್ 1981ರವರೆಗೆ ಆಗಿರುತ್ತದೆ. ಬೇಸಿಗೆಯಲ್ಲೆ ಔಷಧ ಸಿಂಪಡಣೆ ಮಾಡಲು, ಹೆಲಿಕಾಪ್ಟರ್ ಹಾರಾಟ ಉತ್ತಮವಾಗಿದ್ದು, ಅದರ ಮೂಲಕ ಸಿಂಪಡಿಸಲು ಸಹಕಾರಿಯಾಗುತ್ತದೆ. ಹೀಗೆ ಮಳೆಗಾಲದಲ್ಲಿ ಔಷಧಿ ಸಿಂಪಡನೆಯಿಂದಾಗುವ ಪರಿಣಾಮಗಳನ್ನು ವಿವರಿಸಿದರು. 1980 ಜನವರಿಯಲ್ಲಿ ಆಲ್ ಇಂಡಿಯಾ ರಬ್ಬರ್ ಕಾರ್ಪೋರೇಷನ್‌ನವರು ರಬ್ಬರ್ ಗಿಡಗಳಿಗೆ ಔಷಧಿಯನ್ನು ಯಾವಾಗ ಹೊಡೆಯಬೇಕು ಎಂದು ಕನ್‌ಫೆರೆನ್ಸ್ ಮಾಡಿ ಅದರಲ್ಲಿ ಮಳೆ ಹತ್ತಿರ ಮಾಡಿಕೊಂಡು ಹೊಡೆಯುವುದು ಒಳ್ಳೆಯದು ಅದರಂತೆ ಮೇ 1981 ರಿಂದ ಏರಿಯಲ್ ಸ್ಪೇ ಮಾಡಬೇಕು ಹೆಲಿಕಾಪ್ಟರ್ ಬಳಕೆ ಮಾಡುವುದ ಮೂಲಕ ಕೆಲಸ ನಡೆಯಬೇಕೆಂದು ತಿಳಿಸಿದರು.[77] ಬಿಜಾಪುರ ಮತ್ತು ಜಮಖಂಡಿ ತಾಲ್ಲೂಕುಗಳಲ್ಲಿ ಸೌಧೆ ಕಟ್ಟಿಗೆ ಕೊರತೆ ಯಾವಾಗಲೂ ಈ ವಲಯದಲ್ಲಿ ಕಂಡುಬರುತ್ತದೆ. ಕಟ್ಟಿಗೆ ಡಿಪೋ ತೆರೆಯಲು ಯಾವುದೇ ಉದ್ದೇಶವಿಲ್ಲ. ಕಟ್ಟಿಗೆ ಡಿಪೋ ತೆರೆಯಲು ಸಂಸ್ಥೆಗಳು ಮುಂದೆ ಬರಬೇಕೆಂದು ಕರೆ ನೀಡಿದರು. 1980ರ ಕಾಲಘಟ್ಟದಲ್ಲಿ ಮಲೆನಾಡು ಭಾಗದಲ್ಲಿ ಕಾಡಿನಿಂದ ಸೌಧೆ ತರಲು ಫ್ರಿಫೈಡ್ ಲೈಸೆನ್ಸ್‌ನ್ನು ಕೆಲವರಿಗೆ ನೀಡಲಾಗುತ್ತಿತ್ತು. ಇಂತಹವರು 10–20 ರೂ.ಗಳ ಫೀ ಕೊಟ್ಟು ಕಾಡಿನಿಂದ ಸೌದೆ ತರುವ ಪದ್ಧತಿಯನ್ನು ತಪ್ಪಿಸಬೇಕೆಂದು ಮಲೆನಾಡು ಭಾಗದ ಜನರಿಗೆ ಸೌದೆ ಒದಗಿಸುವ ಜವಾಬ್ದಾರಿಯನ್ನು ವಹಿಸಿಕೊಂಡು ಕೆಲವು ಕಡೆಗಳಲ್ಲಿ ಡಿಪೋಗಳನ್ನು ತೆರೆಸಿದರು. ಆದರೂ ಮೈಸೂರು ಮತ್ತು ಬೆಂಗಳೂರಿನ ಸೊಸೈಟಿಗಳು ಮುಂದೆ ಬಂದಿದ್ದು ಇವುಗಳಿಗೆ ಸಪ್ಲೈ ಮಾಡುತ್ತಿದ್ದೇವೆ. ಈ ಅಭಾವಕ್ಕೆ ಕಾರಣ, ಇರುವ ಕಾಡುಗಳನ್ನು ಕಡಿಯದೆ ಇರುವುದೆಂದರು. ವೇಗವಾಗಿ ಬೆಳೆಯುವ ಮರಗಳ ಗಿಡಗಳನ್ನೇ ನೆಡಬೇಕೆಂದರು, ಕೇಂದ್ರ ಸರ್ಕಾರಕ್ಕೆ ಅರವತ್ತು ಕೋಟಿ ರೂಪಾಯಿ ಪ್ರಾಜೆಕ್ಟ್ ಕಳುಹಿಸಿ, ಒಟ್ಟಾರೆ ಸೌದೆ ಅಭಾವ ನೀಗಿಸಲು ನಾಲ್ಕು ಐದು ವರ್ಷದಲ್ಲಿ ಬೆಳೆಯುವ ನೀಲಗಿರಿ ಮರಗಳಿಂದ ಸಾಧ್ಯವೆಂದರು. ಕರ್ನಾಟಕ ರಾಜ್ಯದಲ್ಲಿ ಎಂಟು ಲಕ್ಷ ಪೂರೈಕೆ ಸೌದೆ ಕಟ್ಟಿಗೆ ಇದೆ. ಆದರೆ ನಮಗೆ ಇಪ್ಪತ್ತೈದು ಲಕ್ಷ ಟನ್ ಬೇಡಿಕೆ ಇದೆ. ಅಲ್ಲದೆ ಬಿಜಾಪುರ, ಗುಲ್ಬರ್ಗಾ,

ರಾಯಚೂರು ಭಾಗಗಳಲ್ಲಿ ಎಲ್ಲಿ ನೋಡಿದರೂ ಮರಗಳೇ ಕಾಣಿಸುವುದಿಲ್ಲ. ಒಟ್ಟಾರೆ ಕರ್ನಾಟಕ ರಾಜ್ಯದಲ್ಲಿ ಸೌಧೆ ಅಭಾವವಿರುವುದನ್ನು ಒಪ್ಪಿಕೊಂಡರು. ಬೆಂಗಳೂರು ಮತ್ತು ಮೈಸೂರಿನಲ್ಲಿ ಖಾಸಗಿಯವರು ಸೌಧೆ, ವಿದ್ಯುತ್ ಮತ್ತು ಗ್ಯಾಸ್, ಬಯೋಗ್ಯಾಸ್ ಪ್ರೋತ್ಸಹಿಸಲು ಕರೆ ನೀಡಿದರು. ಕೆಲವು ಕಡೆ ಖಾಸಗಿ ಸೊಸೈಟಿಗೆ ಲೈಸೆನ್ಸ್ ನೀಡುವ ಮೂಲಕ ಕೊರತೆ ನೀಗಿಸಲು ಮುಂದಾದರು. ಈ ಸೊಸೈಟಿ ಸೌಧೆ ಡಿಪೋಗಳನ್ನು ತೆರೆಯಲು ಕೆ.ಎಸ್.ಎಫ್.ಐ.ಸಿ. ಯವರಿಗೆ ಪ್ರೋತ್ಸಾಹಿಸಿದರು.[78]

ಕರ್ನಾಟಕದಲ್ಲಿ ಮೀಸಲು ಅರಣ್ಯವನ್ನು ವಿಭಿನ್ನವಾಗಿ ರೂಪಿಸಲಾಗಿದೆ ಅವುಗಳೆಂದರೆ, ಟೀಕ್ (ತೇಗ) ವುಡ್ ತೋಟಗಾರಿಕೆ ಯೋಜನೆ, ಮೆದುಮರ ತೋಟಗಾರಿಕೆ ಯೋಜನೆ, ಗೋಡಂಬಿ ತೋಟಗಾರಿಕ ಯೋಜನೆ, ಗಂಧದ ಮರ ತೋಟಗಾರಿಕೆ ಯೋಜನೆ, ನೀಲಗಿರಿ ತೋಟಗಾರಿಕೆ ಯೋಜನೆ, ವಿಭಿನ್ನ ವೈವಿಧ್ಯಮಯ ಮರಗಳ ತೋಟಗಾರಿಕೆ ಯೋಜನೆ, ಸಾಮಾಜಿಕ ಅರಣ್ಯ ಯೋಜನೆ, ನೀಲಗಿರಿ ಮೆದುಮರ, ಗೋಡಂಬಿ ಈ ಮರಗಳು ಕೈಗಾರಿಕೆ ಉದ್ದೇಶಕ್ಕೆ ಬಳಕೆ ಆಗುತ್ತವೆಂದು ತಿಳಿಸಿರುತ್ತಾರೆ. ತುಮಕೂರಿನಲ್ಲಿ ಗಂಧದ ಮರ ಜಾಸ್ತಿ ಬೆಳೆಯಲಾಗುತ್ತದೆ ಅದನ್ನು ಸೂಕ್ತವಾಗಿ ಕಳ್ಳತನವಾಗದಂತೆ ವ್ಯವಸ್ಥೆ ಮಾಡಿದ್ದೇವೆ ಎಂದು ತಿಳಿಸಿರುತ್ತಾರೆ. ಸೋಷಿಯಲ್ ಫಾರೆಸ್ಟ್ ಎಂದರೆ ಕೆರೆ ಅಂಚು, ರಸ್ತೆ ಬದಿ ಗಿಡಮರಗಳನ್ನು ನೆಟ್ಟು ಬೆಳೆಸುವುದು ರಿಸರ್ವ್ ಫಾರೆಸ್ಟ್ ಇಲ್ಲದ ಭಾಗದಲ್ಲಿ ಎಲ್ಲಾ ಜಿಲ್ಲೆಗಳಲ್ಲಿ ಸೋಷಿಯಲ್ ಫಾರೆಸ್ಟ್ ಬೆಳೆಸಲಾಗುತ್ತದೆ ಎಂದಿದ್ದಾರೆ.

ಕಾಡನ್ನು ಕಡಿಯಬಾರದು ಸಂರಕ್ಷಣೆಯನ್ನು ಮಾಡಬೇಕೆಂದರೆ, ಹೇಗೆ ಸಾಧ್ಯ ನೆಟ್ಟು-ಗಿಡ ಮರಗಳನ್ನೆಲ್ಲಾ ಸಂರಕ್ಷಿಸಲು ಸಾಧ್ಯವಿಲ್ಲ. ಕಾರಣ ಕಾಡನ್ನೇ ಅವಲಂಬಿಸಿರುವ ಕೈಗಾರಿಕೆಗಳು ಮತ್ತು ಜನರು ಇದ್ದಾರೆ. ಹೀಗಾಗಿ ಇವರುಗಳು ನಿರುದ್ಯೋಗಿಗಳಾಗುತ್ತಾರೆ. ಆದುದರಿಂದ ಕಾಡಿನ ಸಮತೋಲನ ಉಳಿಸಿಕೊಳ್ಳುವ ತತ್ವದಲ್ಲಿ ನನಗೆ ವಿಶ್ವಾಸವಿದೆ ಎಂದಿರುತ್ತಾರೆ ಅರಣ್ಯ ಸಂರಕ್ಷಣೆಯ ಬಗ್ಗೆ ಜಿ.ಮಾದೇಗೌಡರ ಬಹುದೊಡ್ಡ ಚಿಂತನೆಯಾಗಿದೆ[79] ಎಂಬುದನ್ನು ನೋಡಬಹುದಾಗಿದೆ.

**ಅರಣ್ಯ ರಕ್ಷಣೆಯ ಬಗ್ಗೆ ಸದನದಲ್ಲಿ ಚರ್ಚೆ**

15ನೇ ಜುಲೈ 1982 ರಂದು ಸದನದಲ್ಲಿ ಶಾಸಕರಾದ ಎ.ಸಿ.ನಾಣಯ್ಯ ಹಾಗೂ ಹೆಚ್.ಗಂಗಾಧರನ್, ಜೆ.ಹೆಚ್.ಪಟೇಲ್ ಹಾಗೂ ಭಾಸ್ಕರ್‌ಶೆಟ್ಟಿಯವರು ಅರಣ್ಯ ಸಚಿವರಾಗಿದ್ದ ಜಿ.ಮಾದೇಗೌಡರಿಗೆ ಅರಣ್ಯ ಸಂರಕ್ಷಣೆಯಲ್ಲಿ ನಿಮ್ಮ ಹಾಗೂ ಸರ್ಕಾರದ ಪಾತ್ರವೇನು ಎಂದು ಪ್ರಶ್ನಿಸಿದಾಗ ಇದಕ್ಕೆ ಈ ಕೆಳಗಿನಂತೆ ಸುದೀರ್ಘ ಚರ್ಚೆಯನ್ನು ನಡಸಿ, ಉತ್ತರಿಸಿದ್ದಾರೆ. ನಮ್ಮ ಸರ್ಕಾರ ರಚನೆಯಾದ ಮೇಲೆ ನನಗೆ ಅರಣ್ಯ

ಖಾತೆಯನ್ನು ನೀಡಲಾಗಿದೆ. ನೀವು ಕೇಳುತ್ತಿರುವ ಪ್ರಶ್ನೆಗಳು ಇಪ್ಪತ್ತು ವರ್ಷದ ಹಿಂದಿನ ಮಾತುಗಳು ಆದರೂ ನಾನು ಅರಣ್ಯಮಂತ್ರಿಯಾದ ಮೇಲೆ ಖಾಸಗಿಯವರಿಗೆ ಮರಗಳನ್ನು ಕಡಿಯುವುದಕ್ಕೆ ಅನುಮತಿಯನ್ನು ನೀಡಲಿಲ್ಲ. ಶಾಸಕರು ಮಂಡ್ಯ ಮತ್ತು ಮಳವಳ್ಳಿ ಭಾಗದ ಜನರು ನಿಮ್ಮ ಕ್ಷೇತ್ರದ ವ್ಯಾಪ್ತಿಗೆ ಬರುತ್ತಾರೆ. ಆದ್ದರಿಂದ ಅವರಿಗೆ ಅನುಕೂಲ ಮಾಡಿಕೊಡಲು ಅನುಮತಿಯನ್ನು ಕೊಟ್ಟಿದ್ದೀರಿ ಎಂದು ಹೇಳುತ್ತಾರೆ, ಇದು ತಪ್ಪು ಭಾವನೆ. ಅರಣ್ಯ ಸಂರಕ್ಷಣೆ ಮಾಡುವುದು ನಮ್ಮ ಸರ್ಕಾರದ ಕರ್ತವ್ಯ ಈ ನಿಟ್ಟಿನಲ್ಲಿ ಅರಣ್ಯ ಉಳಿಸಿಕೊಳ್ಳುವ ಎಲ್ಲಾ ಯೋಜನೆಗಳನ್ನು ರೂಪಿಸಿದ್ದೇನೆ ಎಂಬುದಾಗಿ ಹೇಳಿದ್ದಾರೆ.[80]

ಈ ವಿಚಾರಕ್ಕೆ ಸಂಬಂಧಿಸಿದಂತೆ ಎಂ.ಸಿ.ನಾಣಯ್ಯನವರು ಸೂಕ್ತ ಸಲಹೆಗಳನ್ನು ನೀಡಿದ್ದಾರೆ. ಅವರ ಸಲಹೆಗಳನ್ನು ನಾನು ಗೌರವಯುತವಾಗಿ ಸ್ವೀಕರಿಸುತ್ತೇನೆ. ಜೊತೆಗೆ ಇಪ್ಪತ್ತು ವರ್ಷಗಳಿಂದ ಕೊಟ್ಟಿರುವ ಲೈಸೆನ್ಸನ್ನು ನಾನು ರದ್ದುಮಾಡಲಿಕ್ಕೆ ಸಾಧ್ಯವಿಲ್ಲ. 20 ವರ್ಷದಿಂದ ಒಡಂಬಡಿಕೆ ಮಾಡಿಕೊಂಡಿರುವ ಕಂಪನಿಗಳ ಅನುಮತಿಯನ್ನು ಬದಲಾಯಿಸಿ ಈಗ ಹೊಸ ಕಂಪನಿಗಳಿಗೆ ಕೊಡುವುದಕ್ಕೆ ಸಾಧ್ಯವಿಲ್ಲ. ಕಂಪನಿಯವರಿಗೆ ಅನುಮತಿ ನೀಡುವಾಗ ಸರ್ಕಾರಕ್ಕೆ ಹಾಗೂ ಕಂಪನಿಗೆ ಒಡಂಬಡಿಕೆ ಆಗಿರುತ್ತದೆ. ವಯಕ್ತಿಕವಾಗಿ ನನಗೂ ಕಂಪನಿಗಳಿಗೂ ಯಾವ ಒಪ್ಪಂದವೂ ಆಗಿರುವುದಿಲ್ಲ. ಆದ್ದರಿಂದ ಹಿಂದೆ ಆಗಿರುವ ಒಪ್ಪಂದದ ಬಗ್ಗೆ ಯೋಚನೆ ಮಾಡದೆ ಈಗಿನ ಪರಿಸ್ಥಿತಿಯಲ್ಲಿ ಅರಣ್ಯ ರಕ್ಷಣೆ ಮಾಡುವುದಕ್ಕೆ ಬೇಕಾದ ಅಗತ್ಯ ಕ್ರಮಗಳನ್ನೂ ತೆಗೆದುಕೊಳ್ಳುತ್ತೇನೆ ಎಂಬುದಾಗಿ ಚರ್ಚಿಸಿದ್ದಾರೆ. ಸಾಮಾನ್ಯವಾಗಿ ಜನಗಳಿಗೆ ದಿನನಿತ್ಯದ ಬಳಕೆಗೆ ಬೇಕಾಗುವ ಸೌದೆ ಅಭಾವ ಇದ್ದಾಗಲೂ ಒಂದೇ ಬೆಲೆಯಲ್ಲಿ ನೀಡಲಾಗುತ್ತದೆ. ಈ ವಿಚಾರ ಸದನದಲ್ಲಿ ಹಲವುಬಾರಿ ಚರ್ಚೆಗೆ ಬಂದಿದೆ ಜೊತೆಗೆ ಪಿ.ಎ.ಸಿ. ಕಮಿಟಿಯಲ್ಲೂ ಪಸ್ತಾಪಿಸಲಾಗಿದೆ. ಅಪಾರವಾಗಿ ಸೌಧೆ ಅಭಾವವಿರುವ ಕಡೆ ಕಡಿಮೆ ಬೆಲೆಗೆ ನೀಡಲಾಗುತ್ತಿದೆ. ಸೌದೆ ವಿಚಾರಕ್ಕೆ ಸಂಬಂಧಿಸಿದಂತೆ ಕಳೆದ 20 ವರ್ಷಗಳಲ್ಲಿ ಯಾವ ಸರ್ಕಾರವೂ ಮಾಡಿರಲಿಲ್ಲ. ಈ ಬಗ್ಗೆ ತಿದ್ದುಪಡಿ ತಂದು ಅದಕ್ಕೆ ನ್ಯಾಯಬದ್ಧವಾದ ಬೆಲೆಯನ್ನು ನನ್ನ ಅಧಿಕಾರದಲ್ಲಿ ಮಾಡಿದ್ದೇನೆ ಎಂಬುದಾಗಿ ಚರ್ಚಿಸಿದ್ದಾರೆ.

ನಾವು ಫಾರೆಸ್ಟ್ ಆಕ್ಟನು ಅಮೆಂಡ್ ಮಾಡಿದ್ದೇವೆ ಕಾನೂನಿನಲ್ಲಿ ರೇಟನ್ನು ಫಿಕ್ಸ್ ಮಾಡುವುದಕ್ಕೆ ಅವಕಾಶವಿರಲಿಲ್ಲ. ನಾವು ಸೀನಿಯರೇಜ್ ರೇಟ್ಸ್ ಫಿಕ್ಸ್ ಮಾಡಿದ ಎಂಟು ದಿವಸದಲ್ಲಿ ಇದಕ್ಕೆ ಸ್ಟೇ ತಂದಿದ್ದಾರೆ. ಇದಕ್ಕೆ ನಾವು ಏನು ಮಾಡುವುದಕ್ಕೆ ಆಗುತ್ತಿಲ್ಲ. ಪಬ್ಲಿಕ್ ಅಕೌಂಟ್ ಕಮಿಟಿಯವರು ಹದಿನೇಳು ಕೋಟಿ ರೂಪಾಯಿಗಳು ದೇಶದ ಖಜಾನೆಗೆ ನಷ್ಟವಾಗಿದೆ ಎಂಬುದಾಗಿ ಹೇಳಿದ್ದಾರೆ. ಈ ಹದಿನೇಳು ಕೋಟಿ ಯಾವ ಸಂದರ್ಭದಲ್ಲಿ ಆಗಿದೆ ಎಂಬುದನ್ನು ಸದನದಲ್ಲಿ ಹೇಳಿದ್ದೇನೆ. ವೆಸ್ಟಕೋಸ್ಟ್

ಪೇಪರ್ ಮಿಲ್ಲಿನವರು ನಾವು ರೇಟನ್ನು ಕವಿಷೆನ್ ಮಾಡಿದ ತಕ್ಷಣ ಹೈಕೋರ್ಟಿಗೆ ದಾವೆ ಹೂಡಿದರು. ಮತ್ತೇ ಸಣ್ಣ ಪ್ರಮಾಣದ ಕೈಗಾರಿಕೆಗಳಾದ ಪ್ಲೇವುಡ್ ಮ್ಯಾಚ್‌ವುಡ್ ಕಂಪನಿಯವರು ಸರ್ಕಾರಕ್ಕೆ ನೀವು ಜಾಸ್ತಿ ರೇಟನ್ನು ಮಾಡಿದರೆ ನಾವು ಕೊಂಡು ಕೊಳ್ಳಲು ಸಾಧ್ಯವಿಲ್ಲ ಫ್ಯಾಕ್ಟರಿಗಳನ್ನು ಮುಚ್ಚಬೇಕಾಗುತ್ತದೆ ಎಂಬುದಾಗಿ ಹೇಳಿದ್ದಾರೆ. ಇದೇ ಸಂದರ್ಭದಲ್ಲಿ ಮುಖ್ಯಮಂತ್ರಿಗಳು ಇದನ್ನು ಸ್ಟೇ ಮಾಡಿದ್ದಾರೆ. ನಂತರ ಇದಕ್ಕೆ ಒಂದು ಎಕ್ಸ್‌ಪರ್ಟ್ ಕಮಿಟಿ ಮಾಡಿದರು. ಈ ಕಮಿಟಿಗೆ ಈಗಿನ ಚೀಫ್ ಸೆಕ್ರೆಟರಿಯವರು ಅಧ್ಯಕ್ಷರಾಗಿದ್ದರು ಮತ್ತು ಹಣಕಾಸಿನ ಇಲಾಖೆಯ ಕಾರ್ಯದರ್ಶಿ ಯವರು, ಕಾಮಗಾರಿ ಇಲಾಖೆಯ ಕಾರ್ಯದರ್ಶಿಯವರು, ಕನ್ಸರ್ವೇಟರ್ ಆಫ್ ಫಾರೆಸ್ಟ್ ಹಾಗೂ ಇನ್ನೂ ನಾಲ್ಕರಿಂದ ಹತ್ತು ಜನ ಸದಸ್ಯರಿದ್ದರು.[81] ಈ ವರದಿಯ ಬಗ್ಗೆ ಒಂದು ಪಟ್ಟಿ ಇದೆ ನಂತರ ಸದನಕ್ಕೆ ಒದಗಿಸುತ್ತೇನೆ. ಈ ಎಲ್ಲಾ ಕಂಪನಿಯರು ರೇಟ್ ಜಾಸ್ತಿ ಇದೆ ಎಂದು ಹೇಳಿದ್ದಾರೆ. ಆದ್ದರಿಂದ ಕಂಪನಿಯನ್ನು ನಡೆಸಲಾಗದೆ ಮುಚ್ಚುತ್ತೇವೆ ಎಂಬುದಾಗಿ ಈ ಕಮಿಟಿಗೆ ವರದಿಯನ್ನು ಒಪ್ಪಿಸಿದ್ದಾರೆ. ಬೇರೆ ರಾಜ್ಯಗಳಲ್ಲಿ ಇಂತಹ ಮರಗಳಿಗೆ ಏನು ಬೆಲೆ ಇದೆ ಅದನ್ನು ಗಮನಿಸಿ ರೇಟ್ ಫೀಕ್ಸ್ ಮಾಡಿ ಎಂಬುದಾಗಿ ತಿಳಿಸಿದ್ದಾರೆ. ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಸೀನಿಯರೇಜ್ ರೇಟನ್ನು ರಿವೈಸ್ ಮಾಡಿದ್ದಾರೆ. ಕಳೆದ ಇಪ್ಪತ್ತು ವರ್ಷಗಳಿಂದಲೂ ಯಾವ ಸರ್ಕಾರವೂ ರೇಟನ್ನು ಸೀನಿಯರೇಜ್ ಮಾಡಿರಲಿಲ್ಲ. ಮಾಡುವುದಕ್ಕೂ ಪ್ರಯತ್ನ ನಡೆಸಿರಲಿಲ್ಲ. ಆದರೆ ನಾನು ಸಚಿವನಾದ ನಂತರ ಈ ಯೋಜನೆಯನ್ನು ಮಾಡಿದೆ ಎಂಬುದನ್ನು ಸದನದಲ್ಲಿ ಚರ್ಚಿಸಿದ್ದಾರೆ. ಅರಣ್ಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ಹಾಗೂ ಅಧಿಕಾರಿಗಳಿಗೆ ಸೂಕ್ತ ಭದ್ರತೆಯನ್ನು ಒದಗಿಸಲಾಗುತ್ತಿದೆ. ಇವರ ರಕ್ಷಣೆ ಸರಿಯಾಗಿದ್ದರೆ ಅರಣ್ಯ ರಕ್ಷಣೆ ಮಾಡುವುದಕ್ಕೆ ಸಾಧ್ಯವಾಗುತ್ತದೆ. ಜೊತೆಗೆ ಈ ಸಿಬ್ಬಂದಿಗಳ ಮಕ್ಕಳ ವಿದ್ಯಾಭ್ಯಾಸಕ್ಕೆ ಬೇಕಾದಂತಹ ಯೋಜನೆಯನ್ನು ನಮ್ಮ ಇಲಾಖೆಯಿಂದ ನೀಡಲಾಗುತ್ತಿದೆ ಎಂಬುದಾಗಿ ಸದನದಲ್ಲಿ ಚರ್ಚಿಸಿದ್ದಾರೆ.

ಅರಣ್ಯದಲ್ಲಿ ದೊರೆಯುವಂತಹ ಕೋಟಿ ಕೋಟಿ ಬೆಲೆ ಬಾಳುವ ಖನಿಜ ಸಂಪತ್ತು ಕರ್ನಾಟಕದಲ್ಲಿ ಮಾತ್ರ ಹೆಚ್ಚಾಗಿ ದೊರೆಯುತ್ತದೆ. ಈ ನಿಟ್ಟಿನಲ್ಲಿ ದೊರೆಯುವ ಖನಿಜ ಸಂಪತ್ತನ್ನು ಉಪಯೋಗಮಾಡಿಕೊಂಡು ನಮ್ಮ ರಾಜ್ಯದಲ್ಲಿ ಒಂದು ಕೈಗಾರಿಕೆಯನ್ನು ತೆರೆಯಬೇಕು. ಹೆಚ್ಚು ಕಾರ್ಖಾನೆಗಳನ್ನು ಸ್ಥಾಪನೆ ಮಾಡಿದರೆ ನಾವು ಬೇರೆಯವರ ಮೇಲೆ ಅವಲಂಬಿತವಾಗುವುದನ್ನು ತಪ್ಪಿಸಬಹುದು ಎಂಬುದಾಗಿ ಆಲೋಚನೆ ಮಾಡಬಹುದು ಖನಿಜ ಸಂಪತ್ತನು ಹೊರ ತೆಗೆಯುವ ದೃಷ್ಟಿಯಿಂದ ಇರುವಂತಹ ಅರಣ್ಯವನ್ನು ನಾಶಮಾಡುವುದಕ್ಕೆ ಸಾಧ್ಯವಿಲ್ಲ. ಅರಣ್ಯ ಸಂರಕ್ಷಿಸಿ ನಂತರ ಖನಿಜ ಸಂಪತ್ತನ್ನು ತೆಗೆಯುವಂತಹ ಯೋಜನೆಯನ್ನು ಸೂಕ್ತವಾಗಿ ನಡೆಸಬೇಕಾಗುತ್ತದೆ ಎಂಬುದಾಗಿ ಸದನದಲ್ಲಿ ಚರ್ಚಿಸಿದ್ದಾರೆ. ಇದರ ಜೊತೆಗೆ ಜಲಸಂಪತ್ತು ಸರಿಯಾದ

ರೀತಿಯಲ್ಲಿ ಬಳಕೆ ಮಾಡಿಕೊಳ್ಳುವ ದೃಷ್ಟಿಯಿಂದ ಬಾವಿಗಳನ್ನು, ಬೋರ್‌ವೆಲ್‌ಗಳನ್ನು ಕೊರೆಯಿಸಿ ಅರಣ್ಯಕ್ಕೆ ಬೇಕಾದಂತಹ ನೀರನ್ನು ಬಳಸಿಕೊಂಡು ಅರಣ್ಯ ಸಂರಕ್ಷಣೆಗೆ ಅನೇಕ ಯೋಜನೆಗಳನ್ನು ಸಿದ್ಧಪಡಿಸಿಕೊಂಡಿದ್ದೇವೆ. ಈ ಯೋಜನೆಗಳು ಕಾರ್ಯರೂಪಕ್ಕೆ ಬರಬೇಕಾದರೆ ಸದನದ ಎಲ್ಲಾ ಸದಸ್ಯರುಗಳು ಸಹಕರಿಸಬೇಕು ಎಂಬುದನ್ನು ಹೇಳಿದ್ದಾರೆ. ಇದರ ಜೊತೆಗೆ ಬೋಗಸ್ ಪರ್ಮಿಟ್‌ಗಳನ್ನು ಪಡೆದುಕೊಂಡು ಸರ್ಕಾರಕ್ಕೆ ಮೋಸ ಮಾಡುತ್ತಿದ್ದರು. ಅಂಥವರ ಮೇಲೆ ಕ್ರಮಗಳನ್ನು ತೆಗೆದುಕೊಂಡು ಈಗಾಗಲೇ ಇಂತಹ ಕೆಲಸಕ್ಕೆ ಕೈ ಹಾಕಿದಂತಹ ಇಬ್ಬರು ರೇಂಜ್ ಆಫೀಸರ್‌ಗಳು ಮತ್ತು ಎಂಟು ಜನ ಗಾಡ್‌ಗಳನ್ನು ಸಸ್ಪೆಂಡ್ ಮಾಡಲಾಗಿದೆ.[82] ಈ ಪರ್ಮಿಟ್‌ಗಳನ್ನು ಕೊಡಲು ಯಾರು ಕಾರಣ ಎಂಬುದನ್ನು ಕಂಡು ಹಿಡಿಯುವುದಕ್ಕೆ ಈಗಾಗಲೇ ಒಂದು ಎನ್‌ಕ್ವೈರಿ ಕಮಿಟಿಯನ್ನು ನೇಮಕ ಮಾಡಲಾಗಿದೆ. ಈ ಕಮಿಟಿಯವರ ವರದಿ ನೀಡಿದ ಮೇಲೆ ಇದಕ್ಕೆ ಸಂಬಂಧಿಸಿದಂತೆ ಕಾರಣರಾದವರ ಮೇಲೆ ಸರ್ಕಾರ ಖಂಡಿತ ಕ್ರಮ ತೆಗೆದುಕೊಳ್ಳುತ್ತದೆ ಎಂಬುದನ್ನು ಸದನದಲ್ಲಿ ಹೇಳಿದ್ದಾರೆ.

ಹೆಚ್ಚು ತಾಮ್ರದ ಅದಿರು ಸಿಗುವಂತಹ ಕರ್ನಾಟಕದ ಎರಡು ತಾಮ್ರದ ಗಣಿಗಳನ್ನು ಅಭಿವೃದ್ಧಿ ಮಾಡಬೇಕಾಗಿರುವುದು ಅಗತ್ಯವಾಗಿದೆ. ಹೀಗೆ ಅರಣ್ಯ ಸಚಿವರಾದಂತಹ ಜಿ.ಮಾದೇಗೌಡರು ಅರಣ್ಯವನ್ನು ರಕ್ಷಿಸಿ ಅರಣ್ಯದಿಂದ ದೊರಕುವ ಸಂಪತ್ತುಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗ ಮಾಡಿಕೊಂಡು ಕರ್ನಾಟಕದ ಅರಣ್ಯ ಸಂಪತ್ತನ್ನು ರಕ್ಷಿಸಲು ಸಕಲ ಯೋಜನೆಯನ್ನು ರೂಪಿಸಿಕೊಂಡಿದ್ದೇವೆ ಎಂಬುದಾಗಿ ಸದನದಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ.

ದೇಶದ ಭೂಭಾಗದಲ್ಲಿ ಶೇಕಡ 33% ರಷ್ಟು ಅರಣ್ಯವಿರಬೇಕು. ಭಾರತದಲ್ಲಿ ಅಷ್ಟೊಂದು ಅರಣ್ಯಪ್ರದೇಶ ಇರುವುದಿಲ್ಲ. ಅದೇ ರೀತಿಯಾಗಿ ಕರ್ನಾಟಕ ರಾಜ್ಯದಲ್ಲಿ ಸುಮಾರು 18% ರಷ್ಟು ಅರಣ್ಯ ಪ್ರದೇಶವಿದೆ. ಈ ಪ್ರದೇಶವೂ ಅತಿಕ್ರಮಣಕ್ಕೆ ಒಳಗಾಗುತ್ತಿದೆ. ಈ ಅತಿಕ್ರಮಣವನ್ನ ಯಾವ ಜನರು ಮಾಡಿದ್ದರೆ ಎಂಬುದರ ಬಗ್ಗೆ ನಿಖರವಾದ ಮಾಹಿತಿಗಳಿಲ್ಲ. ಅರಣ್ಯ ಅಂಚಿನಲ್ಲಿ ಅನೇಕ ಜನಾಂಗಗಳು, ಕುಟುಂಬಗಳು ಬುಡಕಟ್ಟು ಸಮುದಾಯದವರು, ವಲಸಿಗರು ಮನೆಕಟ್ಟಿಕೊಂಡಿರುತ್ತಾರೆ. ಬಾವಿ ತೋಡಿಸಿಕೊಂಡಿರುತ್ತಾರೆ. ಶಾಲೆ ಕಟ್ಟಿಸಿಕೊಟ್ಟಿರುತ್ತಾರೆ. ಇಂತಹವರನ್ನು ಖಾಲಿ ಮಾಡಿಸಲು ಬರುವುದಿಲ್ಲ. ಅದನ್ನು ಸಕ್ರಮ ಮಾಡಲು ಕೇಂದ್ರ ಸರ್ಕಾರ ಅರಣ್ಯ ಸಂರಕ್ಷಣಾ ಕಾಯ್ದೆಯಿಂದ ಸಾಧ್ಯವಿಲ್ಲ. ಬಗರ್‌ಹುಕ್ಕುಂ ಹಕ್ಕು ಪಡೆಯಲು ಕೆಲವರು ದಟ್ಟ ಕಾಡಿನಲ್ಲಿರುವ ಮರಗಳಿಗೆ ಔಷಧಿ ಹಾಕಿ ನಾಶಮಾಡಿ ಒಂದು ತರಹದ ಹುಲ್ಲನ್ನು ಬೆಳೆದು ಅದರಿಂದ ಸುಗಂಧ ದ್ರವ್ಯ ತಯಾರಿಸಿ ವಿದೇಶಕ್ಕೆ ಕಳುಹಿಸಿ ಲಾಭಮಾಡಿಕೊಳ್ಳುತ್ತಿರುವ ಜನಗಳು ಇದ್ದಾರೆ. ಇದನ್ನು ತಡೆಯಲು ಸರ್ಕಾರವು

ಕಾನೂನು ಕ್ರಮಗಳನ್ನು ರೂಪಿಸಿದ್ದಾರೆ.[83] ಎಂದು ಚರ್ಚಿಸಲಾಗಿರುವ ಅಂಶಗಳು ಕಂಡುಬರುತ್ತದೆ.

**ಗ್ರಾಮೀಣ ಪ್ರದೇಶಕ್ಕೆ ಉಚಿತವಾಗಿ ವಿದ್ಯುತ್ ನೀಡಿಕೆಯ ಬಗ್ಗೆ ಚರ್ಚೆ**

28ನೇ ಮಾರ್ಚ್ 1989ರ ವಿಧಾನಸಭಾ ಸದನದಲ್ಲಿ ಮುಖ್ಯಮಂತ್ರಿಗಳಾದ ಎಸ್.ಆರ್.ಬೊಮ್ಮಾಯಿರವರೊಂದಿಗೆ ಗ್ರಾಮೀಣ ಪ್ರದೇಶಗಳಿಗೆ ಉಚಿತವಾಗಿ ವಿದ್ಯುತ್ ನೀಡಿಕೆಯ ಬಗ್ಗೆ ಈ ರೀತಿಯಾಗಿ ಚರ್ಚಿಸಿದ್ದಾರೆ. ವಿದ್ಯುತ್ ಮಂತ್ರಿಗಳಾದ ಲಕ್ಷ್ಮಿನರಸಿಂಹಯ್ಯನವರು ಸಹ ಸದನದಲ್ಲಿ ಹಾಜರಿರುತ್ತಾರೆ. 1981ರ ಮುಂಚೆ ಜನತಾ ಸರ್ಕಾರ ಗ್ರಾಮೀಣ ಭಾಗದ ಪ್ರದೇಶಗಳಿಗೆ ಉಚಿತವಾಗಿ ವಿದ್ಯುತನ್ನು ವಿತರಿಸಲಾಗುತ್ತಿತ್ತು ಎಂಬುದನ್ನು ನಾನು ತಿಳಿದುಕೊಂಡಿದ್ದೇನೆ ಇದು ನಿಜಾನಾ ಎಂಬುದನ್ನು ಉತ್ತರಿಸಬೇಕಾಗುತ್ತದೆ. ವಿದ್ಯುತ್‌ಚಕ್ತಿ ದರವನ್ನು ಪಾವತಿ ಮಾಡದ ಸಂದರ್ಭದಲ್ಲಿ ವಿದ್ಯುತ್‌ಚಕ್ತಿಯನ್ನು ತೆಗೆಯಲಾಗಿದೆ. ಇದರಿಂದ ಗ್ರಾಮೀಣ ಪ್ರದೇಶದ ಬಡಜನರು ಕತ್ತಲೆಯಲ್ಲಿ ಕಾಲ ಕಳೆಯು ಪರಿಸ್ಥಿತಿ ಒದಗಿದೆ. ಗ್ರಾಮೀಣ ಪ್ರದೇಶದ ಬಡ ರೈತರ ಮಕ್ಕಳು ವಿದ್ಯಾಭ್ಯಾಸದಿಂದ ವಂಚಿತರಾಗಿದ್ದಾರೆ. ಈ ರೀತಿ ವಿದ್ಯುತ್‌ಚಕ್ತಿಯನ್ನು ತೆಗೆಯುವುದರಿಂದ ವಿದ್ಯಾರ್ಥಿಗಳು ಮನೆಯಲ್ಲಿ ಓದುವುದಕ್ಕೆ ಸಾಧ್ಯವಾಗದೆ ಸಮಾಜದಲ್ಲಿ ಕೆಳಸ್ತರಕ್ಕೆ ಹೋಗುತ್ತಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ರೈತರು ಭೂಮಿಯನ್ನೆ ನಂಬಿಕೊಂಡು ವ್ಯವಸಾಯ ಮಾಡಿ ಕಷ್ಟಕೆ ಸಿಲುಕಿದ್ದಾರೆ. ಈ ರೀತಿ ನೀವು ಕೂಡ ವಿದ್ಯುತ್‌ನ್ನು ತೆಗೆಯುವುದರಿಂದ ರೈತನ ಮಕ್ಕಳು ವಿದ್ಯಾವಂತರಾಗದೆ ವ್ಯವಸಾಯವನ್ನೆ ಮಾಡಿ ಕಷ್ಟಕ್ಕೆ ಸಿಲುಕಬೇಕಾಗುತ್ತದೆ. ಆದ್ದರಿಂದ ಗ್ರಾಮೀಣ ಪ್ರದೇಶದ ಜನರಿಗೆ ಭಾಗ್ಯಜ್ಯೋತಿ ಬೆಳಕಿನಡೆ ಉಚಿತವಾಗಿ ವಿದ್ಯುತ್ ನೀಡಿದ್ದರೆ ಅವರ ಬದುಕು ಸುಂದರವಾಗುತ್ತದೆ. ಇಲ್ಲದೇ ಹೋದರೆ ಕತ್ತಲೆಯಲ್ಲಿ ಕಾಲ ಕಳೆಯಬೇಕಾಗುತ್ತದೆ ಎಂಬುದಾಗಿ ಸದನದಲ್ಲಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ.[84] ಹಿಂದಿನ ಸರ್ಕಾರಗಳು ಕೂಡ ಗ್ರಾಮೀಣ ಪ್ರದೇಶಕ್ಕೆ ವಿದ್ಯುತ್ ಸರಬರಾಜು ಮಾಡುವ ದೃಷ್ಟಿಯಲ್ಲಿ ಅನ್ಯಾಯಮಾಡಿದ್ದಾರೆ. ಈಗಲೂ ಇದನ್ನೇ ಮಾಡಲಾಗುತ್ತಿದೆ. ಗ್ರಾಮೀಣ ಭಾಗದ ಜನರು ಸಕಲಕಾಲಕ್ಕೆ ವಿದ್ಯುತ್‌ದವರನ್ನು ಸರ್ಕಾರಕ್ಕೆ ಕಟ್ಟುವುದಕ್ಕೆ ಸಾಧ್ಯವಿಲ್ಲ ಕಾರಣ ವ್ಯವಸಾಯ ಒಂದೇ ಅವರ ಆದಾಯದ ಮೂಲಬಂಡವಾಳ ಮಳೆ ಬಂದರೆ ಮಾತ್ರ ವ್ಯವಸಾಯ ಮಾಡಿ ಜೀವನ ಸಾಗಿಸುತ್ತಾರೆ. ಸಕಾಲಕ್ಕೆ ಮಳೆಬಾರದೇ ಹೋದರೆ ಜೀವನ ನಡೆಸುವುದಕ್ಕೆ ಕಷ್ಟವಾಗುತ್ತದೆ. ಆದ್ದರಿಂದ ಮಾನ್ಯ ಮುಖ್ಯಮಂತ್ರಿಗಳು ಹಾಗೂ ವಿದ್ಯುತ್ ಮಂತ್ರಿಗಳು ಗ್ರಾಮೀಣ ಭಾಗದ ಜನರಿಗೆ ಉಚಿತವಾಗಿ ವಿದ್ಯುತ್ ನೀಡಿದರೆ ಬಡಜನರಿಗೆ ಹಾಗೂ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತದೆ. ಆದ್ದರಿಂದ ನನ್ನ ಮನವಿಯನ್ನು

ತಾವುಗಳು ದಯಮಾಡಿ ಪೂರೈಸಬೇಕೆಂದು ಕೇಳಿಕೊಳ್ಳುತ್ತೇನೆ ಎಂಬುದಾಗಿ ಗ್ರಾಮೀಣ ಜನರ ಸಮಸ್ಯೆಯನ್ನು ಸದನದಲ್ಲಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ.

**ಸರ್ಕಾರದಲ್ಲಿ ಖಾಲಿಯಿರುವ ಹುದ್ದೆಗಳನ್ನು ಭರ್ತಿ ಮಾಡುವುದರ ಬಗ್ಗೆ ಚರ್ಚೆ**

21ನೇ ಮಾರ್ಚ್ 1989ರ ವಿಧಾನಸಭಾ ಕಲಾಪದಲ್ಲಿ ಅಂದಿನ ಮುಖ್ಯಮಂತ್ರಿಗಳಾದ ಎಸ್.ಆರ್.ಬೊಮ್ಮಾಯಿರವರ ಜೊತೆ ಸರ್ಕಾರದಲ್ಲಿ ಖಾಲಿ ಇರುವಂತಹ ಹುದ್ದೆಗಳ ಬಗ್ಗೆ ಮಾಹಿತಿ ಹಾಗೂ ಖಾಲಿ ಇರುವ ಹುದ್ದೆಗಳನ್ನು ಭರ್ತಿಮಾಡಬೇಕಾಗಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ. ಸರ್ಕಾರದ ಎಲ್ಲಾ ಇಲಾಖೆಗಳಿಂದ ಒಟ್ಟು ಖಾಲಿ ಇರುವ ಹುದ್ದೆಗಳ ಸಂಖ್ಯೆ ಹಾಗೂ ಇವುಗಳ ಭರ್ತಿಯನ್ನು ಸರ್ಕಾರ ಮಾಡಬೇಕಾಗುತ್ತದೆ. ಸರ್ಕಾರದಲ್ಲಿ ಇರುವಂತಹ ಹುದ್ದೆಗಳನ್ನು ಸರಿಯಾದ ಸಮಯಕ್ಕೆ ತುಂಬದೆ ಹೋದರೆ ನಿರುದ್ಯೋಗಿಗಳ ಸಂಖ್ಯೆಯು ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಗುತ್ತದೆ. ಇದರಿಂದ ಸರ್ಕಾರಕ್ಕೆ ಯಾವ ತೊಂದರೆಯೂ ಆಗುವುದಿಲ್ಲ. ತೊಂದರೆಯನ್ನು ಅನುಭವಿಸುತ್ತಿರುವವರು ಕಷ್ಟದಲ್ಲಿ ವಿದ್ಯಾಭ್ಯಾಸ ಮಾಡಿ ಸಮಾಜದಲ್ಲಿ ಉನ್ನತ ಸ್ಥಾನ–ಮಾನ ಪಡೆಯಬೇಕೆಂದು ಪ್ರತಿನಿತ್ಯ ಪ್ರಾರ್ಥಿಸುತ್ತಿರುವ ಬಡ ರೈತರ ಹಾಗೂ ಹಿಂದುಳಿದ ವರ್ಗಗಳ ಮಕ್ಕಳು ಸಮಾಜದಲ್ಲಿ ಇರುವಂತಹ ಸಾಮಾಜಿಕ ಅಸಮಾನತೆ, ಬಡತನ, ನಿರುದ್ಯೋಗ ಮುಂತಾದ ಸಮಸ್ಯೆಗಳನ್ನು ಬಗೆಹರಿಸದಿದ್ದರೆ ರಾಜ್ಯ ಆರ್ಥಿಕವಾಗಿ ಬಲಿಷ್ಠವಾಗಿ ಬೆಳೆಯುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಸರ್ಕಾರ ಆದಷ್ಟು ಬೇಗ ಖಾಲಿ ಇರುವಂತಹ ಹುದ್ದೆಗಳನ್ನು ಭರ್ತಿಮಡಿ ನಿರುದ್ಯೋಗ ಸಮಸ್ಯೆಯಿಂದ ಬಳಲುತ್ತಿರುವ ಯುವ ಜನಾಂಗಕ್ಕೆ ಅನುಕೂಲ ಮಾಡಿಕೊಡಬೇಕು ಎಂಬುದನ್ನು ಸದನದಲ್ಲಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ.[85]

ಸರ್ಕಾರ ಖಾಲಿ ಇರುವ ಹುದ್ದೆಗಳನ್ನು ಹಂಚಿಕೆ ಮಾಡುವಂತಹ ಸಂದರ್ಭದಲ್ಲಿ ಅಸಮಾನತೆ ಎಂಬುದು ಕಂಡುಬರುತ್ತದೆ. ಅಂದರೆ ಸಮಾಜದಲ್ಲಿ ಬಲಿಷ್ಠ ನಾಯಕರು ಹೇಳಿದವರಿಗೆ ಉದ್ಯೋಗ ಕಲ್ಪಿಸಲಾಗುತ್ತದೆ. ಇದರಿಂದ ಸಮಾಜದಲ್ಲಿ ಹಿಂದುಳಿದಿರುವ ಜನಸಮೂಹಕ್ಕೆ ಅನ್ಯಾಯವಾಗುತ್ತದೆ. ಆದ್ದರಿಂದ ಸರ್ಕಾರ ಸರಿಯಾದ ಕ್ರಮವನ್ನು ಜಾರಿಗೆ ತಂದು ಎಲ್ಲಾರೂ ಸಮಾಜದಲ್ಲಿ ನೆಮ್ಮದಿಯಿಂದ ಜೀವಿಸುವುದಕ್ಕೆ ಅವಕಾಶ ಕಲ್ಪಿಸಿಕೊಟ್ಟರೆ ಗಾಂಧೀಜಿಯವರ ಕಂಡ ಗ್ರಾಮಗಳ ಅಭಿವೃದ್ಧಿಯ ಕನಸು ನನಸಾಗುತ್ತದೆ ಎಂಬುದಾಗಿ ಸದನದಲ್ಲಿ ಚರ್ಚಿಸಿ ಉದ್ಯೋಗ ಎಂಬುದು ಕೆಲವರ್ಗಕ್ಕೆ ಮಾತ್ರ ಸೀಮಿತವಾಗಬಾರದು ಎಲ್ಲಾರಿಗೂ ದೊರಕಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಈ ಅಂಶದಿಂದ ಜಿ.ಮಾದೇಗೌಡರು ಎಲ್ಲಾ ಕಾರ್ಯಗಳಲ್ಲಿ ಮಹಾತ್ಮಗಾಂಧೀಜಿಯವರ ತತ್ವಆದರ್ಶಗಳನ್ನು ಮೈಗೂಡಿಸಿಕೊಂಡು ಅದನ್ನು ಜಾರಿಗೆ ತರುವುದಕ್ಕೆ ಪ್ರಾಮಾಣಿಕ

ಪ್ರಯತ್ನ ನಡೆಸಿದ್ದಾರೆ ಎಂಬುದು ಈ ಸದನದಲ್ಲಿ ಚರ್ಚಿಸಿರುವ ಪ್ರಗತಿಪರ ವಿಚಾರಗಳಿಂದ ತಿಳಿದುಬರುತ್ತದೆ.

**ದೇವದಾಸಿ ಪದ್ಧತಿಯ ನಿರ್ಮೂಲನೆ ಚರ್ಚೆ**

9ನೇ ಜುಲೈ 1982ರ ವಿಧಾನ ಸಭಾ ಸದನದಲ್ಲಿ ಶಾಸಕರಾದ ರಾಮ್‌ದೇವ್ ಹಾಗೂ ಶ್ರೀಮತಿ ಸುಶೀಲ ಚಲುವರಾಜ್‌ರವರು ದೇವದಾಸಿ ಪದ್ದತಿಯ ನಿರ್ಮೂಲನೆಗೆ ಸರ್ಕಾರದಿಂದ ಯಾವ ಕ್ರಮ ತೆಗೆದುಕೊಳ್ಳಲಾಗಿದೆ ಎಂಬುದಾಗಿ ಪ್ರಶ್ನಿಸಿದಾಗ ಸರ್ಕಾರದ ಪರವಾಗಿ ಸದನದಲ್ಲಿ ಜಿ.ಮಾದೇಗೌಡರು ಈ ರೀತಿ ಉತ್ತರಿಸಿದ್ದಾರೆ. ದೇವದಾಸಿ ಪದ್ದತಿಯು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡುಬರುತ್ತಿತ್ತು. ಕಾಲಾನುಕ್ರಮೇಣ ಅವರಿಗೆ ವಿದ್ಯೆ ದೊರಕಿತ್ತು. ಬಡತನ ನಿವಾರಣೆಯಾಯಿತು. ಆಗ ಈ ಪದ್ದತಿ ಸ್ವಲ್ಪ ಕಡಿಮೆಯಾಗುವುದಕ್ಕೆ ಪ್ರಾರಂಭವಾಯಿತು. ಇನ್ನೂ ಅನೇಕ ಜಿಲ್ಲೆಗಳಲ್ಲಿ ದೇವದಾಸಿ ಪದ್ಧತಿ ಕಂಡು ಬರುತ್ತಿದೆ. ಇದನ್ನು ಕಡಿಮೆ ಮಾಡುವುದಕ್ಕೆ ಸರ್ಕಾರದ ವತಿಯಿಂದ ಪ್ರಯತ್ನಗಳು ನಡೆಯುತ್ತಿವೆ. ಬಡತನ ಇರುವುದರಿಂದ ಈ ಪದ್ಧತಿಗೆ ಮೂಢನಂಬಿಕೆಯು ಪ್ರಚೋದಿಸುತ್ತಿದೆ. ಈ ಪದ್ಧತಿ ವಿರುದ್ದವಾಗಿ ಒಂದು ಮಸೂದೆಯನ್ನು ಮಂಡಿಸಲ್ಲಿದ್ದೇವೆ.[86] ಕಾನೂನು ಜಾರಿಗೆ ಬಂದ ಮೇಲೆ ಅವರಿಗೆ ಪುನರ್ ವಸತಿ ಮಾಡಿಕೊಡುವುದು ನಮ್ಮೆಲ್ಲರ ಆದ್ಯಕರ್ತವ್ಯ ಈಗಾಗಲೇ ಕೋ–ಆಪರೇಟಿವ್ ಸೊಸೈಟಿಗಳನ್ನು ಪ್ರಾರಂಭಿಸಿ ಸಟೀಫಿಕೇಟ್ ಕೋರ್ಸ್ ಕೊಡುವ ವ್ಯವಸ್ಥೆ ಮಾಡಿ ತರಬೇತಿ ನೀಡಿ ಅವರಿಗೆ ಉದ್ಯೋಗ ಕಲ್ಪಿಸಿ ಕೊಡುವ ವ್ಯವಸ್ಥೆ ಮಾಡಲಿದ್ದೇವೆ. ಈ ಯೋಜನೆಗೆ ಸರ್ಕಾರದ ಜೊತೆಗೆ ವಿರೋಧ ಪಕ್ಷದವರು ಸಹಕರಿಸಬೇಕಾಗಿ ತಮ್ಮಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ ಎಂಬುದಾಗಿ ಸದನದಲ್ಲಿ ಕೋರಿಕೊಂಡರು. ಸ್ಥಾಪಿತವಾದ ಸೊಸೈಟಿ ಅಧಿಕಾರಿಗಳೂ ಇದರ ಬಗ್ಗೆ ಅಧ್ಯಾಯನ ಮಾಡಿಕೊಂಡು ಬಂದಿದ್ದಾರೆ. ದೇವದಾಸಿ ಪದ್ದತಿ ಮುಂದುವರಿಯಲು ಒಂದು ರೀತಿಯಲ್ಲಿ ನಮ್ಮ ಸಮಾಜವೇ ಆಸ್ಪದಕೊಡುತ್ತಿದೆ. ಈ ರೀತಿ ಸಮಾಜವೇ ಪ್ರೋತ್ಸಹ ನೀಡುತ್ತಿರುವ ಸಂದರ್ಭದಲ್ಲಿ ಸರ್ಕಾರ ಯಾವ ರೀತಿ ಕ್ರಮ ತೆಗೆದುಕೊಳ್ಳಬೇಕು ಎಂಬುದಾಗಿ ಸದನದಲ್ಲಿ ಮರು ಪ್ರಶ್ನೆ ಹಾಕಿದ್ದಾರೆ. ಈ ರೀತಿ ಪ್ರೋತ್ಸಾಹ ನೀಡುತ್ತಿರುವವರ ಬಗ್ಗೆ ಪತ್ರಿಕೆಯಲ್ಲಿ ಬಂದಾಗ ಇದಕ್ಕೆ ಸರಿಯಾದ ಕ್ರಮವನ್ನು ಜರುಗಿಸಬೇಕಾಗುತ್ತದೆ. ಇಂತಹ ಅನಿಷ್ಟ ಪದ್ಧತಿಗಳಿಗೆ ಸಮಾಜದಲ್ಲಿ ಯಾರು ಕೂಡ ಪ್ರೋತ್ಸಾಹ ನೀಡಬಾರದು ಎಂಬುದು ನನ್ನ ವೈಯಕ್ತಿಕ ಮನವಿ ಸರ್ಕಾರದ ಕಡೆಯಿಂದ ಇದಕ್ಕೆ ಯೋಜನೆಗಳನ್ನು ರೂಪಿಸಿ ಹಂತ ಹಂತವಾಗಿ ಇವರಿಗೆ ವಿದ್ಯೆ, ಉದ್ಯೋಗ ಕಲ್ಪಿಸಿಕೊಡುವ ವ್ಯವಸ್ಥೆಮಾಡಿ ಈ ಪದ್ಧತಿಯನ್ನು ತಡೆಗಟ್ಟುವುದಕ್ಕೆ ಸರ್ಕಾರ ಎಲ್ಲಾ ಪ್ರಯತ್ನವನ್ನು ನಡೆಸಲಾಗುತ್ತಿದೆ ಎಂಬುದಾಗಿ ತಿಳಿಸಿದ್ದಾರೆ.

ಈ ವಿಚಾರಕ್ಕೆ ಸಂಬಂಧಿಸಿದಂತೆ ವಿರೋಧ ಪಕ್ಷ ನಾಯಕರು ಕಾಯಿದೆ ಜಾರಿಗೆ ತರುವುದರ ಬಗ್ಗೆ ಹೇಳಿದ್ದಾರೆ. ಆದರೆ "ಸೆಂಟ್ರಲ್‌ಆಕ್ಟ್ ರೋಲ್ಸ್‌ಪ್ಲೇ" ಮಾಡುವಂತಹ ಅಧಿಕಾರ ಇರುವುದು ಕೇಂದ್ರ ಸರ್ಕಾರಕ್ಕೆ ಮಾತ್ರ ಈ ಕಾಯಿದೆಯನ್ನು ಜಾರಿಗೆ ತರುವಂತಹ ಅಧಿಕಾರ ರಾಜ್ಯ ಸರ್ಕಾರದ ವ್ಯಾಪ್ತಿಗೆ ಬರುವುದಿಲ್ಲ ಎಂಬುದನ್ನು ಸದನದಲ್ಲಿ ಜಿ.ಮಾದೇಗೌಡರು ಸ್ಪಷ್ಟಪಡಿಸಿದ್ದಾರೆ. ನಮ್ಮ ಮನಸ್ಸಿನಲ್ಲಿ ಸಮಾಜದ ಪರಿವರ್ತನೆಯ ಬಗ್ಗೆ ಆಸಕ್ತಿ ಬರದಿದ್ದರೆ ಇಂತಹ ನೂರು ಕಾಯಿದೆಗಳು ಬಂದರು ಪ್ರಯೋಜನವಿಲ್ಲ. ಇದರ ಜೊತೆಗೆ ವರದಕ್ಷಿಣೆ ಪದ್ಧತಿ ಬಗ್ಗೆಯೂ ಅನೇಕರು ಮಾತನಾಡುತ್ತಾರೆ. ಆದರೆ ಯಾವುದೇ ಕಾರಣಕ್ಕೂ ನಾವು ವರದಕ್ಷಿಣೆ ನೀಡುವುದಿಲ್ಲ ಎಂಬುದಾಗಿ ಮಾತನಾಡಿ. ಬೇರೊಂದು ರೂಪದಲ್ಲಿ ವರನಿಗೆ ಸಹಾಯ ಮಾಡಿ ಈ ಪದ್ಧತಿಯನ್ನು ಜನರೇ ಪ್ರೋತ್ಸಾಹಿಸುತ್ತಾರೆ. ಈ ವರದಕ್ಷಿಣೆ ಪದ್ದತಿಯ ಬಗ್ಗೆ ಹೆಣ್ಣಿನ ತಂದೆ-ತಾಯಿಗಳು ಧೈರ್ಯಮಾಡಿ ಪೊಲೀಸ್ ಇಲಾಖೆಗೆ ಮಾಹಿತಿ ನೀಡಿದ್ದರೆ ಇದನ್ನು ಸರಿಪಡಿಸಬಹುದು. ಆದರೆ ಹೆಣ್ಣಿನ ತಂದೆ-ತಾಯಿಗಳು ಮಗಳು ಚೆನ್ನಾಗಿರಲಿ ಎಂಬ ಆಶಾಭಾವನೆಯಿಂದ ಇಂತಹ ಪ್ರಕರಣಗಳಿಂದ ತಮಗೆ ಕಷ್ಟವಾದರೂ ಮುಚ್ಚಿಹಾಕ್ಕುತ್ತಾರೆ. ಇಂತಹ ವಿಷಯಗಳ ಬಗ್ಗೆ ಪೊಲೀಸ್ ಇಲಾಖೆಯ ಜೊತೆ ಪತ್ರಿಕೆಗಳು ಸಹಕರಿಸಿದರೆ ಇಂತಹ ಅನಿಷ್ಟ ಪದ್ಧತಿಗಳನ್ನು ತಡೆಗಟ್ಟಬಹುದು. ಸಮಾಜ ಪರಿವರ್ತನೆಯಾಗಬೇಕಿದೆ. ಆಗ ಮಾತ್ರ ಇಂತಹವುಗಳನ್ನು ಕೊನೆಕಾಣಿಸಬಹುದು. ಸಮಾಜ ಪರಿವರ್ತನೆಯಾಗದ ಹೊರತು ಇಂತಹ ಅನಿಷ್ಟಪದ್ಧತಿಗಳನ್ನು ಕೇವಲ ಸರ್ಕಾರ ಒಂದೇ ತಡೆಯುವುದಕ್ಕೆ ಸಾಧ್ಯವಿಲ್ಲ ಎಂಬ ವಿಚಾರವನ್ನು ಸದನದಲ್ಲಿ ಹೇಳಬಯಸುತ್ತೇನೆ ಎಂಬುದಾಗಿ ವಿಷಾದ ವ್ಯಕ್ತಪಡಿಸಿದ್ದಾರೆ.[87]

ಮಾನ್ಯ ಚಂದ್ರಶೇಖರರವರು ಈ ವಿಚಾರಕ್ಕೆ ಸಂಬಂಧಿಸಿದಂತೆ ಸೂಕ್ತವಾದ ಸಲಹೆಗಳನ್ನು ನೀಡಿದ್ದಾರೆ. ಇವರ ಸಲಹೆಗಳನ್ನು ನಾನು ಗೌರವಿಸುತ್ತೇನೆ. ಈ ಸಲಹೆಗಳನ್ನು ನಮ್ಮ ಸರ್ಕಾರದೊಂದಿಗೆ ಚರ್ಚಿಸಿ ಜಾರಿಗೆ ತರುವುದಕ್ಕೆ ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇನೆ ಎಂದು ಹೇಳಿದ್ದಾರೆ. ಇದೆ ವಿಚಾರಕ್ಕೆ ವಿಶ್ವನಾಥರವರು ಸೂಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಗರ್ಭಿಣಿ ಸ್ತ್ರೀಯರಿಗೆ ಹಾಗೂ ಮಕ್ಕಳಿಗೆ ಒಳ್ಳೆಯ ಪೌಷ್ಠಿಕ ಆಹಾರಗಳನ್ನು ಕೊಡುವ ಬಗ್ಗೆ ಚರ್ಚಿಸಿದ್ದಾರೆ. ಹಣದ ರೂಪದಲ್ಲಿ ಕೊಟ್ಟರೇ ಅದು ದುರುಪಯೋಗವಾಗುತ್ತದೆ. ಆಹಾರದ ರೂಪದಲ್ಲಿ ನೀಡಬೇಕು ಎಂಬುದು ಅವರ ಸಲಹೆ. ಇಂತಹ ಸಲಹೆಯಿಂದ ಸರ್ಕಾರ ಸೂಕ್ತ ರೀತಿಯಲ್ಲಿ ಕಾರ್ಯನಿರ್ವಹಿಸುವುದಕ್ಕೆ ಸಾಧ್ಯವಾಗುತ್ತದೆ. ಮೇಲಿನ ಈ ಚರ್ಚೆಯಲ್ಲಿ ನಡೆದಂತಹ ಅಂಶಗಳು ಬಹುಶಃ ಎಲ್ಲಾರಿಗೂ ಸಮಾಧಾನ ಆಗಿದೆ ಎಂಬುದಾಗಿ ನಾನು ಬಯಸುತ್ತೇನೆ. ಜೊತೆಗೆ ಸರ್ಕಾರ ಇಂತಹ ವಿಚಾರಕ್ಕೆ ಸಂಬಂಧಿಸಿದಂತೆ ರೂಪಿಸುವ ಯೋಜನೆಗಳು, ಕಾಯಿದೆಗಳಿಗೆ

ಸಾರ್ವಾನುಮತದಿಂದ ಒಪ್ಪಿಗೆ ನೀಡಬೇಕು ಎಂದು ಸದನದಲ್ಲಿ ಜಿ.ಮಾದೇಗೌಡರು ಕೇಳಿಕೊಂಡಿದ್ದಾರೆ.

**ತಲಕಾಡು ದೇವಾಲಯಗಳ ಪ್ರದೇಶದಲ್ಲಿ ಅಕ್ರಮ ಮರಳು ಸಾಗಾಣಿಕೆ ತಡೆ ಹಿಡಿಯುವುದರ ಬಗ್ಗೆ ಚರ್ಚೆ**

26 ಜುಲೈ 1982 ರಂದು ಸದನದಲ್ಲಿ ಶಾಸಕರದ ಕೆ.ಮಾದೇಗೌಡ ಹನೂರು ಕ್ಷೇತ್ರ ಇವರು ಅರಣ್ಯ ಖಾತೆ ಸಚಿವರಾದ ಜಿ.ಮಾದೇಗೌಡರನ್ನು ತಲಕಾಡು ದೇವಾಲಯಗಳ ಪ್ರದೇಶದಲ್ಲಿ ನಡೆಯುತ್ತಿರುವ ಅಕ್ರಮ ಮರಳುಗಾರಿಕೆ ವಿರುದ್ಧ ಯಾವ ಕ್ರಮ ತೆಗೆದುಕೊಂಡಿದೀರ ಎಂಬುದಾಗಿ ಪ್ರಶ್ನಿಸಿದಾಗ, ಸಚಿವರಾಗಿದ್ದ ಜಿ.ಮಾದೇಗೌಡರು ತಮ್ಮ ನಿಲುವನ್ನು ಸದನದಲ್ಲಿ ಈ ರೀತಿ ಪ್ರಸ್ತಾಪಿಸಿದ್ದಾರೆ.

ಕಾವೇರಿ ನದಿಯ ತಲಕಾಡು ಪ್ರದೇಶದಲ್ಲಿ ಸುಮಾರು 200 ಎಕರೆ ಜಮೀನಿನಲ್ಲಿ ಮರಳು ತೆಗೆದು ಸಾಗಿಸಲು ಕೆಲವರಿಗೆ ಗುತ್ತಿಗೆ ಕೊಟ್ಟಿದ್ದಾರೆ. ಆದರೆ ಈ ರೀತಿ ನದಿಯಲ್ಲಿ ಮರಳನ್ನು ಸಾಗಿಸಿದರೆ ನದಿಯಲ್ಲಿ ಪ್ರವಾಹ ಬಂದಂತಹ ಸಂದರ್ಭದಲ್ಲಿ ಗ್ರಾಮಗಳಿಗೆ ಹಾನಿಯಾಗುತ್ತದೆ. ಆ ಭಾಗದ ಜನರು ಪ್ರತಿಭಟನೆ ನೆಡೆಸಿರುವುದು ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವುದನ್ನು ಗಮನಿಸಿದ್ದೇನೆ ಹಾಗೂ ನಾನು ಪ್ರವಾಸಕ್ಕೆ ಬಂದಾಗಲೂ ಇದನ್ನು ಗಮನಿಸಿ ಸೂಕ್ತ ಕ್ರಮ ತೆಗೆದುಕೊಳ್ಳುತ್ತೇವೆ ಎಂಬುದಾಗಿ ಭರವಸೆಯನ್ನು ಕೊಟ್ಟಿದ್ದೆನೆ. ಜೊತೆಗೆ ಈ ಸ್ಥಳದ ಪರಿಶೀಲನೆಯನ್ನು ಮಾಡಲು ಅಧಿಕಾರಿಗಳಿಗೆ ಆದೇಶವನ್ನು ಕೊಟ್ಟಿದ್ದೇನೆ. ವರದಿ ಬಂದ ನಂತರ ಸೂಕ್ತ ಕ್ರಮ ತೆಗೆದುಕೊಳ್ಳಲಾಗುತ್ತದೆ ಎಂಬುದಾಗಿ ಸದನದಲ್ಲಿ ಜಿ.ಮಾದೇಗೌಡರು ಚರ್ಚಿಸಿದ್ದಾರೆ.[88] ತಲಕಾಡು ಪ್ರದೇಶದಲ್ಲಿ ಐತಿಹಾಸಿಕ ಪ್ರಸಿದ್ಧ ದೇವಾಲಯಗಳು ಇರುವುದರಿಂದ ಇಲ್ಲಿ ಅಕ್ರಮ ಮರಳು ಸಾಗಾಣಿಕೆ ನಡೆಸುವುದರಿಂದ ಈ ದೇವಾಲಯಗಳಿಗೆ ತೊಂದರೆ ಉಂಟಾಗುತ್ತದೆ. ಈ ರೀತಿ ಸಮಸ್ಯೆ ಇದ್ದರೂ ಸರ್ಕಾರದಿಂದ ಮರಳು ಸಾಗಾಣಿಕೆಗೆ ಅನುಮತಿ ನೀಡಿರುವುದು ಸರಿಯಾದ ಕ್ರಮವಲ್ಲ ಆದ್ದರಿಂದ ಸಚಿವನ್ನಾಗಿ ಐತಿಹಾಸಿಕ ದೇವಾಲಯಗಳ ಉಳಿವಿಗಾಗಿ ಸರ್ಕಾರದ ಜೊತೆ ಮಾತುಕತೆ ನಡೆಸುತ್ತೇನೆ ಎಂಬುದಾಗಿ ಹೇಳಿದ್ದಾರೆ. ಆರ್ಕಾವತಿ ನದಿಯಿಂದಲೂ ಬೆಂಗಳೂರಿಗೆ ಮರಳು ಸಾಗಾಣಿಕೆ ಮಾಡಲಾಗುತ್ತದೆ. ಇದನ್ನು ತಡೆಯುವುದಕ್ಕೆ ಚಕ್‌ಪೋಸ್ಟ್‌ಗಳನ್ನು ಸರ್ಕಾರದಿಂದ ಮಾಡಲಾಗಿದೆ. ಪೋಲೀಸ್ ಅಧಿಕಾರಿಗಳ ಮೇಲೆ ಲಾರಿ ಹಿಡತಕ್ಕ ಕೆಲಸವನ್ನು ಮಾಡಿದ್ದಾರೆ. ಈ ದೆಸೆಯಲ್ಲಿ ಅಕ್ರಮ ಮರಳುಗಾರಿಕೆಯನ್ನು ಕಾನೂನು ವ್ಯವಸ್ಥೆಯಡಿಯಲ್ಲಿ ತಡೆಗಟ್ಟಲು ಕಟ್ಟುನಿಟ್ಟಾಗಿ ಆದೇಶ ನೀಡಿದ್ದೇನೆ ಎಂಬುದಾಗಿ ಸದನದಲ್ಲಿ ಶಾಸಕರ ಪ್ರಶ್ನೆಗೆ ಉತ್ತರಕೊಟ್ಟಿದ್ದಾರೆ. ಸರ್ಕಾರದಿಂದ ಮರಳು ಸಾಗಾಣಿಕೆಗೆ ಕೆಲವರಿಗೆ ಅನುಮತಿ ನೀಡಿದ್ದರೂ ಸಾರ್ವಜನಿಕ ಆಸ್ತಿ, ರೈತರಿಗೆ, ಗ್ರಾಮಸ್ಥರಿಗೆ ಹಾಗೂ ಐತಿಹಾಸಿಕ ದೇವಾಲಯ ಹಾಗೂ ಕಟ್ಟಡಗಳು, ಸ್ಮಾರಕಗಳಿಗೆ

ತೊಂದರೆಯಾಗದಂತೆ ನೋಡಿಕೊಳ್ಳಬೇಕು ಎಂಬದಾಗಿ ಆದೇಶನೀಡಿ ಅನುಮತಿ ಕೊಡಲಾಗಿದೆ. ಈ ರೀತಿ ಮರಳನ್ನು ತೆಗೆಯಲು ಮುಂದಾದವರ ವಿರುದ್ಧ ಗ್ರಾಮಸ್ಥರುಗಳೇ ಹೋರಾಟ ನಡೆಸಿ ಲಾರಿಗಳನ್ನು ಹೋರಹಾಕಲು ಪ್ರಯತ್ನಿಸಿದ್ದಾರೆ. ಈ ಕಾರಣದಿಂದ ಅನುಮತಿ ಪಡೆದುಕೊಂಡಿರುವ ಗುತ್ತಿಗೆದಾರರು ಗ್ರಾಮಸ್ಥರುಗಳ ಭಯದಿಂದ ಈಗ ಮರಳು ತೆಗೆಯುವುದನ್ನು ಸಂಪೂರ್ಣವಾಗಿ ನಿಲ್ಲಿಸಿದ್ದಾರೆ. ಅಧಿಕಾರಿಗಳ ವರದಿ ಬಂದ ಕೂಡಲೇ ತಕ್ಷಣ ಈ ಮರಳು ಸಾಗಾಣಿಕೆಗೆ ಸರ್ಕಾರದಿಂದ ನೀಡಿರುವ ಅನುಮತಿಯನ್ನು ರದ್ದುಮಾಡಿಸುತ್ತೇನೆ ಎಂಬುದಾಗಿ ಸ್ಪಷ್ಟನೆಯನ್ನು ನೀಡಿದ್ದಾರೆ. ಶಾಸಕರಾದ ಲಕ್ಷ್ಮೀಸಾಗರ್‌ರವರು ಸಚಿವರಾದ ಜಿ.ಮಾದೇಗೌಡರನ್ನು ಈ ಕೆಳಗಿನಂತೆ ಪ್ರಶ್ನೆಯನ್ನು ಕೇಳಿದ್ದಾರೆ. ಮರಳು ತೆಗೆಯುವ ಗುತ್ತಿಗೆದಾರರಿಗೆ ಸರ್ಕಾರ ಇಂತಿಷ್ಟು ಹಣ ಪಡೆದು ಮರಳು ತೆಗೆಯಲು ಅನುಮತಿ ನೀಡಿದೆ. ಆದರೆ ಸಚಿವರಾದ ನೀವು ಅಕ್ರಮ ಮರಳುಗಾರಿಕೆಯನ್ನು ನಿಲ್ಲಿಸುತ್ತೇನೆ ಎಂಬುದಾಗಿ ಹೇಳುತ್ತಿದ್ದೀರಿ. ಆದರೆ ಸರ್ಕಾರಕ್ಕೆ ಹಣ ನೀಡಿ ಗುತ್ತಿಗೆ ಪಡೆದ ಗುತ್ತಿಗೆದಾರರಿಗೆ ಅನ್ಯಾಯವಾಗುವುದಿಲ್ಲವೇ ಎಂಬುದಾಗಿ ಸದನದಲ್ಲಿ ಪ್ರಶ್ನಿಸಿದಾಗ ಇದಕ್ಕೆ ಸಚಿವರಾದ ಜಿ.ಮಾದೇಗೌಡರು ಸರ್ಕಾರಕ್ಕೆ ಹಣ ನೀಡಿ ಅನುಮತಿ ಪಡೆದುಕೊಂಡಿರುವ ಗುತ್ತಿಗೆದಾರರಿಗೆ ಅನ್ಯಾಯವಾಗಬಾರದು ಎಂಬ ಕಾರಣಕ್ಕಾಗಿ ಸಾರ್ವಜನಿಕರಿಗೆ, ಸ್ಮಾರಕಗಳಿಗೆ, ದೇವಾಲಯಗಳಿಗೆ ತೊಂದರೆ ಯಾಗದಂತಹ ಪ್ರದೇಶದಲ್ಲಿ ಮಾತ್ರ ಮರಗಳನ್ನು ತೆಗೆಯಬೇಕು ಎಂಬುದಾಗಿ ಆದೇಶ ನೀಡಿದ್ದೇನೆ.[89] ಈ ಆದೇಶವನ್ನು ಮೀರಿ ಸಾರ್ವಜನಿಕರಿಗೆ ತೊಂದರೆ ಕೊಡುವಂತಹ ಗುತ್ತಿಗೆದಾರರ ಅನುಮತಿಯನ್ನು ರದ್ದುಮಾಡಲಾಗುತ್ತದೆ ಎಂದು ಆದೇಶಿಸಿದ್ದೇನೆ ಎಂಬುದಾಗಿ ಸದನದಲ್ಲಿ ಚರ್ಚಿಸಿದ್ದಾರೆ. ಸರ್ಕಾರಕ್ಕೆ ಆದಾಯವಾಗುತ್ತದೆ ಎಂಬ ಕಾರಣಕ್ಕೆ ಸ್ಮಾರಕಗಳು ಪುರತಾನ ದೇವಾಲಯಗಳು ಹಾಗೂ ಸಾರ್ವಜನಿಕ ರೈತರಿಗೆ ತೊಂದರೆಯಾದರೆ ಇಂತಹ ಹಣದಿಂದ ಸರ್ಕಾರ ನಡೆಸುವಂತಹ ದುಸ್ಥಿತಿಬೇಡ. ಸಚಿವನಾದ ನನಗೆ ರೈತರ, ಹಿತದೃಷ್ಟಿ ಮುಖ್ಯ. ಆದ್ದರಿಂದ ಅಕ್ರಮ ಮರಳುಗಾರಿಕೆ ವಿರುದ್ಧ ಆದಷ್ಟುಬೇಗ ಸೂಕ್ತಕ್ರಮ ಜರುಗಿಸುತ್ತೇನೆ ಎಂದು ಗುರುದೇವರಹಳ್ಳಿ ಮಾದೇಗೌಡರ ಸದನದಲ್ಲಿ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸಿರುವುದನ್ನು ಅರಿಯಲಾಗಿದೆ.

**ಹಸಿರು ಕಾರ್ಡ್‌ನ ವಿತರಣೆಯಲ್ಲಿ ಆಗಿರುವ ಅನ್ಯಾಯಗಳ ಬಗ್ಗೆ ಚರ್ಚೆ**

ಹಸಿರು ಕಾರ್ಡಿನ ವಿತರಣೆಯಲ್ಲಿ ಆಗಿರುವ ಅನ್ಯಾಯಗಳ ಬಗ್ಗೆ ಸದನದಲ್ಲಿ ಜಿ.ಮಾದೇಗೌಡರು ಸಚಿವರಾದ ಬಸವಣ್ಣಪ್ಪರವರನ್ನು 5ನೇ ಮಾರ್ಚ್ 1987ರಂದು ಈ ಕೆಳಗಿನಂತೆ ಚರ್ಚಿಸಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಸರಕಾರವು ಆರ್ಥಿಕವಾಗಿ ಹಿಂದುಳಿದಿರುವಂತಹ ಜನರಿಗೆ ಹಸಿರು ಕಾರ್ಡುಗಳನ್ನು ನೀಡಿ ಕೆಲವು ಅವಶ್ಯಕ

ವಸ್ತುಗಳನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ಪಡೆಯುವಂತೆ ಮಾಡಿರುವುದು ಕಂಡುಬರುತ್ತದೆ. ಆದರೆ ಹಸಿರು ಕಾರ್ಡುಗಳನ್ನು ನೀಡಿರುವುದರಲ್ಲಿ ಈಗಾಗಲೇ ಅನೇಕ ದೋಷಗಳು ಕಂಡುಬಂದಿದೆ. ಈಗಲೂ ಸಹ ಬಡತನದ ರೇಖೆಗಿಂತ ಕೆಳಗಿರುವಂತಹ ಕುಟುಂಬಗಳಿಗೆ ಹಸಿರು ಕಾರ್ಡು ತಲುಪಿಲ್ಲ. ಆದರೆ ಎಲ್ಲಾ ಅನುಕೂಲ ಹೊಂದಿರುಂತಹ ಆರ್ಥಿಕವಾಗಿ ಬಲಿಷ್ಠವಾಗಿರುವ ಕುಟುಂಬಗಳಿಂದ 100 ರಿಂದ 500 ರೂ.ಗಳನ್ನು ಪಡೆದುಕೊಂಡು ಅಧಿಕಾರಿಗಳು ಹಸಿರು ಕಾರ್ಡುಗಳನ್ನು ಮಾಡಿಕೊಟ್ಟಿದ್ದಾರೆ. ಜಿಲ್ಲೆಯಲ್ಲಿ ಸಾಕಷ್ಟು ಹಿಂದುಳಿದಿರುವ ಪ್ರದೇಶದ ಹರಿಜನರು, ಜೀತವಿಮುಕ್ತರು, ಹಿಂದುಳಿದವರು 200 ರೂ.ಗಳನ್ನು ಅಧಿಕಾರಿಗಳಿಗೆ ಕೊಟ್ಟು ಹಸಿರು ಕಾರ್ಡ್ ಪಡೆದುಕೊಳ್ಳಲು ಹಣವಿಲ್ಲದೆ ಭಯಪಟ್ಟಿಕೊಂಡು ಹೋಗಬೇಕಾದ ಪರಿಸ್ಥಿತಿ ಬಂದಿದೆ. ಅಚ್ಚರಿ ಎಂದರೆ ತಾಲ್ಲೂಕು ಕಛೇರಿಗಳಲ್ಲಿ ಸರ್ಕಾರಿ ಕೆಲಸ ನಿರ್ವಹಿಸುವ ಕೆಳಹಂತದ ಸಿಬ್ಬಂದಿವರ್ಗದವರು ಈ ಜಾಲದಲ್ಲಿ ಸೇರಿರುವುದರಿಂದಲೇ ಶ್ರೀ ಸಾಮಾನ್ಯರ ಸ್ಥಿತಿ ಶೋಚನೀಯವಾಗಿದೆ. ಜನತಾ ಪಕ್ಷದ ಸರ್ಕಾರವು ಜಾರಿಗೆ ತಂದಿರುವಂತಹ ಇಂತಹ ಯೋಜನೆಗಳ[90] ಮೇಲೆ ಸರಿಯಾದಂತಹ ಗಮನ ವಹಿಸದಿರುವುದು ಹಾಗೂ ಇಂತಹ ವ್ಯವಹಾರದಲ್ಲಿ ತೊಡಗಿರುವ ಸಿಬ್ಬಂಧಿಗಳ ವಿರುದ್ಧ ಸರ್ಕಾರದ ಹಿಡಿತ ಇಲ್ಲದಿರುವುದು, ಸರ್ಕಾರವೂ ಈ ದೆಸೆಯಲ್ಲಿ ಕಠಿಣ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಜಿಲ್ಲೆಯಾದ್ಯಂತ ನಡೆಯುತ್ತಿರುವ ಆಕ್ರಮಗಳ ಬಗ್ಗೆ ಸರ್ಕಾರ ಹಾಗೂ ಸಚಿವರುಗಳು ಸರಿಯಾದ ರೀತಿಯಲ್ಲಿ ಅಗತ್ಯ ಕ್ರಮ ತೆಗೆದುಕೊಂಡು ಇದಕ್ಕೆ ಪರಿಹಾರ ಕಂಡುಕೊಳ್ಳಬೇಕೆಂದು ಸದನದಲ್ಲಿ ಚರ್ಚಿಸಿದ್ದಾರೆ.

**ಸಮಾಜ ಕಲ್ಯಾಣ ಇಲಾಖೆಯಿಂದ ಬಡವರಿಗೆ ದೊರಕಬೇಕಾದ ಸೌಲಭ್ಯಗಳ ಬಗೆ ಚರ್ಚೆ**

9 ಜುಲೈ 1987ರ ಅಧಿವೇಶನದಲ್ಲಿ ಅಂದಿನ ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಚಿವರಾದಂತಹ ಶ್ರೀಮತಿ ಮನೋರಮಾ ಮಾಧ್ವರಾಜ್‌ರವರು ತಮ್ಮ ಇಲಾಖೆಗೆ ಸಂಬಂಧಿಸಿದಂತೆ ಸದನದಲ್ಲಿ ಚರ್ಚಿಸುತ್ತಿರುವಾಗ, ಜಿ.ಮಾದೇಗೌಡರು ಈ ಇಲಾಖೆಯನ್ನು ಉದ್ದೇಶಿಸಿ ಸಚಿವರನ್ನು ಈ ಕೆಳಕಂಡ ವಿಚಾರಕ್ಕೆ ಸಂಬಂಧಿಸಿದಂತೆ ಪ್ರಶ್ನಿಸಿ ಸುದೀರ್ಘವಾಗಿ ಚರ್ಚಿಸಿದ್ದಾರೆ. ಸಮಾಜ ಕಲ್ಯಾಣ ಇಲಾಖೆಯ ಮತ್ತು ಹಿಂದುಳಿದ ವರ್ಗಗಳ ಸಚಿವರುಗಳು ತಂದಿರತಕ್ಕಂಥ ಬೇಡಿಕೆಗಳ ಬಗ್ಗೆ ವಿಶ್ವಾಸ ಪೂರ್ವಕವಾಗಿ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದಾನೆ. ಇದರ ಜೊತೆಗೆ ಕೇಲವು ವಿಚಾರಗಳನ್ನು ಹೇಳಲು ಬಯಸುತ್ತೇನೆ. ಪ್ರಮುಖವಾಗಿ ಈ ಇಲಾಖೆ ಇರುವುದು ಹರಿಜನ ಮತ್ತು ಗಿರಿಜನ, ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡು ಅವರಿಗೆ ಸಹಾಯ ಮಾಡುವ ಸಲುವಾಗಿ ಇದೆ. ಆದರೆ ಈ ಇಲಾಖೆಯಲ್ಲಿ ನಡೆಯುತ್ತಿರುವುದನ್ನು ಗಮನಿಸಿದ್ದರೆ ಮನಸ್ಸಿಗೆ ನೋವುಂಟಾಗುತ್ತದೆ. ಹರಿಜನ–

ಗಿರಿಜನರಿಗೆ ಅನುಕೂಲಗಳನ್ನು ಕಲ್ಪಿಸಿಕೊಡಬೇಕು. ಹಿಂದುಳಿದ ವರ್ಗದವರಿಗೆ ಅನುಕೂಲತೆಯನ್ನು ಒದಗಿಸಿಕೊಡಬೇಕು ಎನ್ನುವಂತಹ ವಿಚಾರಗಳಲ್ಲಿ ಅನೇಕ ಲೋಪದೋಷಗಳು ಕಂಡುಬರುತ್ತಿವೆ. ಸರ್ಕಾರ ಈ ಇಲಾಖೆಗೆ ಸಂಬಂಧಪಟ್ಟಂತೆ ಕೋಟಿಕೋಟಿ ರೂಪಾಯಿಗಳನ್ನು ಕೊಟ್ಟರೂ ಸಹ ಸರ್ಕಾರದ ಅನುಕೂಲತೆ ದೊರಕುತ್ತದೆ ಎಂದು ಭರವಸೆಯಲ್ಲಿ ಇರುವಂತಹ ವರ್ಗದವರಿಗೆ ಸುಲಭ ರೀತಿಯಲ್ಲಿ ಸಿಗುತ್ತಿಲ್ಲ. ಒಂದು ರೂಪಾಯಿಯನ್ನು ಸರ್ಕಾರ ನೀಡಿದರೆ ಇದು ಸಂಬಂಧಪಟ್ಟವರಿಗೆ ಸಿಗುವ ಹೊತ್ತಿಗೆ ಕೇವಲ 25 ಪೈಸೆ ಅಷ್ಟು ಮಾತ್ರ. ಮಧ್ಯದಲ್ಲಿರ ತಕ್ಕಂಥ ಜನರು ಉಳಿದ 75 ಪೈಸೆ ಅಷ್ಟು ಹಣವನ್ನು ತಿಂದುಹಾಕುತ್ತಿದ್ದಾರೆ. ಅವರಿಗೆ ಗೊತ್ತೂ ಹಿಂದುಳಿದ ವರ್ಗದ ಜನರುಗಳು ಸರಿಯಾಗಿ ಕೇಳುವುದಕ್ಕೆ ಆಗುವುದಿಲ್ಲ. ಜೊತೆಗೆ ಏನೇ ತೊಂದರೆಯಾದರು ಪ್ರತಿಭಟಿಸುವ ಸಾಮಾರ್ಥ್ಯ ಇಲ್ಲ ಅನ್ನುವ ದೃಷ್ಟಿಯಿಂದ ಸರ್ಕಾರದಿಂದ ಮಂಜೂರಾದ ಹಣವನ್ನು ಭ್ರಷ್ಟರು ತಿಂದುಹಾಕುತ್ತಿದ್ದಾರೆ. ಜೊತೆಗೆ ಸರ್ಕಾರಕ್ಕೆ 25 ಪೈಸೆಯಷ್ಟು ಕೆಲಸ ಮಾಡಿ ರೂಪಾಯಿಯ ಲೆಕ್ಕ ತೋರಿಸುತ್ತಾರೆ.[91] ಅಲ್ಲದೆ ಪ್ರತಿವರ್ಷ ಸರ್ಕಾರ ನೀಡುತ್ತಿರುವ ಹಣವೋ ಸರಿಯಾದ ರೀತಿಯಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ಬಳಕೆಯಾಗದೆ ವ್ಯರ್ಥ ಆಗುತ್ತಿದೆ. ಇದಕ್ಕೆ ಏನು ಕಾರಣ ಎಂಬುದು ಅರ್ಥವಾಗುತ್ತಿಲ್ಲ. ಸರ್ಕಾರ ನೀಡುತ್ತಿರುವ ಹಣವನ್ನು ಸರಿಯಾದ ರೀತಿಯಿಂದ ಬಳಕೆ ಮಾಡದೇ ಇರುವುದೇ ಅಭಿವೃದ್ಧಿ ಕಾರ್ಯಗಳು ಕುಂಠಿತವಾಗುವುದಕ್ಕೆ ಅಸ್ಪಂದವಾಗಿದೆ. ಹಳ್ಳಿಯಲ್ಲಿ ಜೀವನ ನಡೆಸುತ್ತಿರುವ ಇಂತಹ ಬಡ ಜನರಿಗೆ ಸರ್ಕಾರದಿಂದ ಮಂಜೂರಾದ ಹಣದಿಂದ ಸರಿಯಾಗಿ ಸದುಉಪಯೋಗ ಮಾಡಿಕೊಂಡು ವಾಸ ಮಾಡುವುದಕ್ಕೆ ಮನೆಗಳಿಲ್ಲದೆ ಮರದ ಕೆಳಗೆ ಅಥವಾ ಬೇರೆಯವರ ಜಗಲಿ ಮೇಲೆ ಜೀವನ ಸಾಗಿಸುತ್ತಿರುವ ಇಂತಹ ಜನರಿಗೆ ಮನೆ ಕಟ್ಟಿಕೊಳ್ಳಲು ಅವಕಾಶ ಕೊಂಡುವಂತಹ ಜನರೇ ಸಿಗುತ್ತಿಲ್ಲ. ಈ ವರ್ಗದ ಜನರಿಗೆ ಏನಾದರೂ ಸಹಾಯ ಮಾಡಬೇಕು. ಸರ್ಕಾರದಿಂದ ನೆರವು ಕೊಡಬೇಕೆಂದು ಸದನದಲ್ಲಿ ತೀರ್ಪುಗಳನ್ನು ತೆಗೆದುಕೊಂಡರು ಅದುಕೂಡ ಮೇಲ್‌ಮಟ್ಟದಿಂದ ಕೆಳ ಮಟ್ಟದವರಿಗೆ ತಲುಪುವುದ ರೊಳಗೆ ಮಧ್ಯವರ್ತಿಗಳ ಕೈ ಸೇರಿ ಅಭಿವೃದ್ಧಿ ಕಾರ್ಯಗಳು ಕುಂಠಿತವಾಗುತ್ತಿವೆ. ಈ ಕಾರಣದಿಂದ ಸಂಬಂಧಪಟ್ಟಂತಹ ಮಾನ್ಯ ಸಚಿವರುಗಳು ಇದರ ಬಗ್ಗೆ ಯೋಚನೆ ಮಾಡಬೇಕೆಂದು ಆಗ್ರಹಿಸಿದ್ದಾರೆ. ಜೊತೆಗೆ ಸರ್ಕಾರದಿಂದ ದೊರೆಯುವ ಜಮೀನು, ಹಣ, ಮನೆ, ಮುಂತಾದ ಮೂಲಭೂತ ಸೌಕರ್ಯಗಳು ಕೇವಲ ಒಂದು ಭಾಗ ಈ ವರ್ಗದ ಜನರಿಗೆ ದೊರಕಿದರೆ ಮೂರುಭಾಗ ಬೇರೆಯವರ ಪಾಲಾಗುತ್ತಿದೆ. ಇದನ್ನು ತಪ್ಪಿಸಲಿಕ್ಕೆ ಸೂಕ್ತ ವ್ಯವಸ್ಥೆಯನ್ನು ಮಾಡಬೇಕೆಂದು ಸಚಿವರಲ್ಲಿ ಆಗ್ರಹಿಸುತ್ತಾರೆ. ಇಂತಹ ಕೆಲಸಗಳನ್ನು ಸರಿಯಾಗಿ ನಿಬಾಯಿಸದಿದ್ದರೆ ಹರಿಜನರ, ಹಿಂದುಳಿದ ಕುಟುಂಬಗಳು ಬೀದಿಪಾಲಾಗುತ್ತವೆ. ಇಂತಹ ವ್ಯವಸ್ಥೆಯಿಂದ ರೋಷಿಹೋಗಿರುವಂತಹ ಜನರು

ಸರ್ಕಾರದ ಯಾವ ಸೌಲಭ್ಯಗಳು ಬೇಡ ಅನ್ನುವ ತೀರ್ಮಾನಕ್ಕೆ ಬರುತ್ತಾರೆ. ಸರ್ಕಾರದಿಂದ ನೀಡುವಂತಹ ಸೌಲಭ್ಯಗಳನ್ನು ಸರಿಯಾದ ರೀತಿಯಲ್ಲಿ ತಲುಪಬೇಕಾದ ಜನರಿಗೆ ತಲುಪಿಸಿದ್ದರೆ ಅವರ ಬಾಳು ಬೆಳಕಾಗುತ್ತದೆ. ಇಂತಹ ಯೋಜನೆಗಳು ಬಡವರಿಗೆ ಸರಿಯಾಗಿ ದೊರಕಿದೆ ಎಂಬುದರ ಬಗ್ಗೆ ಸೂಕ್ತವಾಗಿ ತಿಳಿದು ಕೊಳ್ಳಬೇಕಾಗುತ್ತದೆ ಎಂದಿದ್ದಾರೆ.

ಹರಿಜನ-ಗಿರಿಜನರ ಅಭಿವೃದ್ಧಿ ಕಾರ್ಪೋರೇಷನ್ ಎಂದು ಮಾಡಿ ಅದಕ್ಕೆ ಒಂದು ಕೋಟಿ ಬಂಡವಾಳ ಹಾಕಿದ್ದೇವೆ ಎಂದು ಹೇಳಿದ್ದೀರಿ ಈ ಕಾರ್ಪೋರೇಷನ್‌ನಿಂದ ಕಣ್ಣಿಗೆ ಕೆಲ ಜನರಿಗೆ ಮಾತ್ರ ಸ್ವಲ್ಪಹಣವನ್ನು ನೀಡಲಾಗಿದೆ. ಇನ್ನೂ ಬಹಳ ಜನರಿಗೆ ಈ ಹಣ ದೊರಕಲಿಲ. ಕೆಲ ಅಧಿಕಾರಿಗಳು ಈ ಕಾರ್ಪೋರೇಷನ್ ವತಿಯಿಂದ ಹಿಂದುಳಿದ ಜನರಿಗೆ ಹಣ ನೀಡಿದರೆ ವಾಪಸ್ ಕೊಡುವುದಿಲ್ಲ ಎಂಬ ಕಾರಣ ನೀಡುತ್ತಾರೆ. ಆದರೂ ಬಹಳ ಜನ ಅರ್ಜಿಹಾಕಿ ಕೇಳಿಕೊಂಡರು ಅವರಿಗೆ ಸಹಾಯ ದೊರಕಲಿಲ್ಲ. ಇದರಿಂದ ಬೇಸರಗೊಂಡಂತಹ ಈ ವರ್ಗದವರು ಕೈ ಚೆಲ್ಲಿ ಸುಮ್ಮನಾದರು. ಇತ್ತೀಚಿಗೆ ಹಿಂದುಳಿದ ವರ್ಗಗಳ ಅಭಿವೃದ್ದಿಗೆ ಸಹಾಯ ಮಾಡಲೇಂದೇ ಸ್ಥಾಪಿತವಾದ ಈ ಕಾರ್ಪೋರೇಷನ್ ಏನಾಗಿದೆ ಎಂಬುದೇ ಹರಿವಿಗೆ ಬಂದಿಲ್ಲ. ಯಾರು ಸಾಲ ಪಡೆದುಕೊಂಡು ನಿಷ್ಠೆಯಿಂದ ವಾಪಸ್ ಕಟ್ಟುತ್ತಾರೋ ಅಂಥವರನ್ನು ಗುರುತಿಸಿ ಅವರಿಗೆ ಆರ್ಥಿಕ ಸಹಾಯ ಮಾಡಿದ್ದರೆ ಅನುಕೂಲವಾಗುತ್ತದೆ. ಇಂತಹ ಜನರಿಗೆ ಸಹಾಯ ಮಾಡಬೇಕಾಗಿರುವುದು ನಿಮ್ಮ ಇಲಾಖೆಯ ಕರ್ತವ್ಯ ಎಂದು ಸಚಿವರಿಗೆ ನಾನು ಸಲಹೆ ನೀಡುತ್ತಿದ್ದೇನೆ ಎಂಬುದಾಗಿ ಚರ್ಚಿಸಿದ್ದಾರೆ.[92]

ಈ ವರ್ಗದವರಿಗೆ ರೇಷ್ಮೆ ಇಲಾಖೆಯವರು ಬೆಳೆಯನ್ನು ಬೆಳೆಯಲು ಸ್ವಲ್ಪ ಹಣವನ್ನು ಕೊಟ್ಟಿದ್ದರು ರೇಷ್ಮೆ ವ್ಯಾಪಾರದ ಕುಸಿತದಿಂದ ವ್ಯಾಪಾರ ಸರಿಯಾಗಿ ನಡೆಯದೆ ನಷ್ಟ ಹೊಂದಿದ್ದಾರೆ ಇದ್ದರಿಂದ ಹಣವನ್ನು ಕಟ್ಟಲಾಗದೆ ಸ್ವಲ್ಪಹಣವನ್ನು ಕಟ್ಟುವುದಕ್ಕೆ ಸಿದ್ದ ಮಾಡಿಕೊಂಡಿದ್ದಾರೆ. ಇನ್ನುಳಿದ ಹಣವನ್ನು ನಿಮ್ಮ ಇಲಾಖೆಯವರು ನೀಡಬೇಕೆಂದು ಸಲಹೆಯನ್ನು ಸದನದಲ್ಲಿ ನೀಡಿದ್ದಾರೆ. ಹರಿಜನ-ಗಿರಿಜನ ಹಾಗೂ ಹಿಂದುಳಿದ ವರ್ಗಗಳ ಅಭಿವೃದ್ಧಿ ಕಾರ್ಯಗಳನ್ನು ಮಾಡುವುದಕ್ಕೆ ನಿಮ್ಮ ಇಲಾಖೆ ವತಿಯಿಂದ ಹೊಸ ಹೊಸ ಯೋಜನೆಗಳನ್ನು ಹಾಕಿಕೊಳ್ಳಬೇಕು. ವರ್ಷ, ವರ್ಷ ಒಬ್ಬ ಅಥವಾ ಒಂದು ಕುಟುಂಬಕ್ಕೆ 5 ರಿಂದ 10 ಸಾವಿರಗಳನ್ನು ನೀಡುತ್ತವೆ ಎಂದು ಸರ್ಕಾರ ಯೋಜನೆಗಳನ್ನು ಹಾಕಿಕೊಳ್ಳುತ್ತವೆ. ಜೊತೆಗೆ ಕೇಂದ್ರ ಸರ್ಕಾರವೂ ಕೂಡ ಇದರ ಬಗ್ಗೆ ಅಧಿಕೃತವಾಗಿ ಪ್ರಚಾರವನ್ನು ಹೊರಡಿಸುತ್ತದೆ. ಆದರೆ ಹೆಸರಿಗೆ ಮಾತ್ರ ಇಂತಹ ಯೋಜನೆಗಳನ್ನು ಹಾಕಿಕೊಂಡಿರುತ್ತವೆಯೇ ಹೊರತು. ಜನರಿಗೆ ಯಾವುದೇ ಸೌಲಭ್ಯ ದೊರೆಯುವುದಿಲ್ಲ ನೀವು ನೀಡುವ ಅಲ್ಪಸ್ವಲ್ಪ ಹಣದಿಂದ ಅವರು ಬದುಕು

ಕಟ್ಟಿಕೊಂಡುಜೀವನ ನಡೆಸುವುದಕ್ಕೆ ಸಾಧ್ಯವಿಲ್ಲದಂತಾಗಿದೆ. ಒಟ್ಟನಲ್ಲಿ ಹರಿಜನ-ಗಿರಿಜನ ಹಾಗೂ ಹಿಂದುಳಿದ ವರ್ಗದವರ ಅಭಿವೃದ್ದಿಯಾಗಬೇಕು. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರಗಳು ಯೋಜನೆಗಳನ್ನು ರೂಪಿಸಬೇಕೆಂದು ಪ್ರಧಾನ ಮಂತ್ರಿಗಳು ಸಲಹೆಯನ್ನು ನೀಡಿದ್ದರೂ ಈ ಬಗ್ಗೆ ರಾಜ್ಯ ಸರ್ಕಾರಗಳು ಸರಿಯಾದ ರೀತಿಯಲ್ಲಿ ಕಾರ್ಯಗಳನ್ನೂ ರೂಪಿಸುತ್ತಿಲ್ಲ. ಈ ಕಾರಣದಿಂದ ಈ ವರ್ಗದವರು ಆರ್ಥಿಕವಾಗಿ ಸಬಲರಾಗಲು ಸಾಧ್ಯವಾಗುತ್ತಿಲ್ಲ ಎಂದು ಸದನದಲ್ಲಿ ಬೇಸರದಿಂದ ತಮ್ಮ ಅಭಿಪ್ರಾಯವನ್ನು ಜಿ.ಮಾದೇಗೌಡರು ಪ್ರಸ್ತಾಪಿಸಿದ್ದಾರೆ. ಹರಿಜನ-ಗಿರಿಜನ ಹಾಗೂ ಹಿಂದುಳಿದ ದಲಿತರ ಮನೆಯಲ್ಲಿ ಒಂದು ಮಗು ಜನಿಸಿದಾಗ ಆ ಮಗುವಿನ ಹೆಸರಿನಲ್ಲಿ 300 ರಿಂದ 400 ರೂಪಾಯಿಗಳ ಜೀವ ವಿಮೆಯನ್ನು ಮಾಡಿಸಿದ್ದರೆ ಮಗು ಬೆಳೆದು ದೊಡ್ಡವನಾಗುವಷ್ಟರಲ್ಲಿ 15 ರಿಂದ 20 ಸಾವಿರ ರೂಪಾಯಿ ಆಗುತ್ತದೆ. ಆಗ ಆ ಹಣದಿಂದ ಮಗುವಿನ ವಿದ್ಯಾಭ್ಯಾಸ ಹಾಗೂ ಆರ್ಥಿಕವಾಗಿ ಬೆಳೆಯುವುದಕ್ಕೆ ಸಹಾಯವಾಗುತ್ತದೆ. ಇಲ್ಲದಿಂದರೆ ಎಷ್ಟೇ ಯೋಜನೆಗಳನ್ನೂ ನೀಡಿದ್ದರೂ ಅಭಿವೃದ್ಧಿಯಾಗುವುದಕ್ಕೆ ಸಾಧ್ಯವಾಗುವುದಿಲ್ಲ ಎಂದಿದ್ದಾರೆ. ಹರಿಜನರಿಗೆ ಮನೆ ಕಟ್ಟಿಕೊಳ್ಳಲು ಮರ ಕೊಡುತ್ತೇವೆ ಎಂದು ಹೇಳಿ ಯಾವುದೋ ಟೊಳ್ಳು ಮರವನ್ನು ನೀಡಿದ್ದೀರಿ. ಹಂಚುಗಳನ್ನು ಸರಿಯಾಗಿ ನೀಡದೆ ಬೇಯದ ಹಂಚುಗಳನ್ನು ಕೊಟ್ಟಿದ್ದಿರಿ. ಇದರಿಂದ ಸ್ವಂತ ಮನೆಯನ್ನು ಕಟ್ಟಿಕೊಳ್ಳಬೇಕು ಎನ್ನುವ ಅವರ ಹಂಬಲ ಹಾಗೇ ಉಳಿದುಕೊಂಡಿದೆ ಎಂಬುದಾಗಿ ತಿಳಿಸಿದ್ದಾರೆ.

ಪರಿಶಿಷ್ಟ ಜಾತಿ/ವರ್ಗ ಹಾಗೂ ಹಿಂದುಳಿದ ದಲಿತವರ್ಗದ ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಬೇಕಾಗುತ್ತದೆ. ಜೊತೆಗೆ ಕಡು ಬಡತನದಲ್ಲಿರುವ ಹಿಂದುಳಿದವರ್ಗದವರ ಮನೆಯಲ್ಲಿ ವಿದ್ಯಾಭ್ಯಾಸ ಪಡೆಯುವಂತಹ ವಾತಾವರಣ ಇಲ್ಲ ಕೂಲಿ ಮಾಡಿ ಜೀವನ ನಡೆಸುವುದೇ ಕಷ್ಟವಾಗಿದೆ. ಇದರ ಜೊತೆಗೆ ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಗಮನ ನೀಡುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಇಂತಹ ಹಿಂದುಳಿದ ವರ್ಗಗಳ ಮಕ್ಕಳಿಗೆ ಶಾಲಾ-ಕಾಲೇಜುಗಳಲ್ಲಿ ಉಚಿತ ಶಿಕ್ಷಣದ ಜೊತೆಗೆ ವಸತಿ ನಿಲಯಗಳನ್ನು ಸ್ಥಾಪಿಸಿ ವಿದ್ಯೆ ನೀಡಿದ್ದರೆ ಹಿಂದುಳಿದ ಕುಟುಂಬಗಳ ಮಕ್ಕಳು ವಿದ್ಯವಂತರಾಗಿ ಸಮಾಜದಲ್ಲಿ ಉನ್ನತ ಸ್ಥಾನಮಾನ ಪಡೆದುಕೊಂಡು ಗೌರವಯುತವಾಗಿ ಬದುಕು ನಡೆಸುತ್ತಾರೆ. ಅದ್ದರಿಂದ ಸಮಾಜ ಕಲ್ಯಾಣ ಇಲಾಖೆ ಈ ವಿಚಾರಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಗಮನ ವಹಿಸಿ ಹಿಂದುಳಿದವರಿಗೆ ಸಹಾಯ ನೀಡಬೇಕು ಎಂಬುದಾಗಿ ಜಿ.ಮಾದೇಗೌಡರು ಸಮಾಜದ ಕೆಳಸ್ತರದ ವರ್ಗದವರ ಪರ ಧ್ವನಿ ಎತ್ತಿದ್ದಾರೆ ಎಂಬುದನ್ನು ಅರಿಯಲಾಗಿದೆ.

ಪರಿಶಿಷ್ಟ ಜಾತಿ–ಗಿರಿಜನ ಹಾಗೂ ಹಿಂದುಳಿದ ವರ್ಗದವರು ವಾಸಿಸುವ ಕಾಲೋನಿಗಳಲ್ಲಿ ಕಡ್ಡಾಯವಾಗಿ ಸೇಂದಿ–ಸಾರಾಯಿಗಳ ಅಂಗಡಿಗಳನ್ನು ಮುಚ್ಚಿಸಬೇಕು. ನಮ್ಮ ಭಾಗದ ಅನೇಕ ಪ್ರದೇಶಗಳಲ್ಲಿ ಹೆಚ್ಚಾಗಿ ಸೇದಿ ಸಾರಾಯಿಗಳ ಅಂಗಡಿಗಳನ್ನು ತೆರೆದಿದ್ದಾರೆ. ವ್ಯಾಪಾರಕೋಸ್ಕರ ಈ ತರಹದ ಅಂಗಡಿಗಳನ್ನ ಸ್ಥಾಪನೆ ಮಾಡಿದರೆ ಬಡಜನರು ಬೆಳಗ್ಗೆಯಿಂದ ಸಂಜೆಯವರೆಗೆ ಕೆಲಸಮಾಡಿ 20 ರಿಂದ 30 ರೂಪಾಯಿಗನ್ನು ಸಂಪಾದಿಸುತ್ತಾರೆ. ಮನೆಯ ಪಕ್ಕದಲ್ಲೇ ಇಂತಹ ಅಂಗಡಿಗಳನ್ನು ತೆರೆದಿದ್ದರೆ ಕಣ್ಣಿಗೆ ಬಿದ್ದ ತಕ್ಷಣ ಅಲ್ಲಿನ ಹೆಂಗಸರು ಗಂಡಸರು ಎಲ್ಲರು ಹೋಗಿ ಸೇಂದಿ ಸಾರಾಯಿಗಳನ್ನು ಕುಡಿಯುತ್ತಾರೆ. ಇದರಿಂದ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಲು ಹಾಗೂ ಸರಿಯಾದ ರೀತಿಯಲ್ಲಿ ಜೀವನ ನಡೆಸುವುದಕ್ಕೆ ಸಾಧ್ಯವಾಗದೆ ಬಡವರಾಗೇ ಉಳಿಯುತ್ತಾರೆ. ಗಾಂಧಿಜೀಯವರ ಗ್ರಾಮ ಅಭಿವೃದ್ದಿಯ ಕನಸು ನನಸಾಗಾದ ಹಾಗೇ ಉಳಿಯುತ್ತದೆ. ಈ ನಿಟ್ಟಿನಲ್ಲಿ ಸರ್ಕಾರ ಪಾನಮುಕ್ತ ಗ್ರಾಮಗಳಾಗಿ ಮಾಡುವುದಕ್ಕೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕು ಎಂಬುದಾಗಿ ಸದನದಲ್ಲಿ ಜಿ.ಮಾದೇಗೌಡರು ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ.[93] ಶಿಶುವಿಹಾರಗಳ ಬಗ್ಗೆ ಸದನದಲ್ಲಿ ಚರ್ಚಿಸುತ್ತಾ ನಮ್ಮ ಕ್ಷೇತ್ರದ ಹಲವುಕಡೆ ಪರಿಶಿಷ್ಟ ಜಾತಿ/ವರ್ಗ ಹಿಂದುಳಿದವರ ಸಂಖ್ಯಾ ಹೆಚ್ಚಾಗಿದೆ. ಕೆಲವೊಂದು ಭಾಗದ ಜನರಿಗೆ ಹಾಕಿಕೊಳ್ಳುವುದಕ್ಕೂ ಬಟ್ಟೇಗಳೇ ಇರುವುದಿಲ್ಲ. ಇದರಿಂದ ಜನರಿಗೆ ತುಂಬಾ ಅನ್ಯಾಯವಾಗುತ್ತದೆ. ಪರಿಶಿಷ್ಟ ಜಾತಿ/ವರ್ಗದ ಜನರ ಮತ್ತು ಹಿಂದುಳಿದವರ ಮಕ್ಕಳಿಗೆ ಶಿಶುವಿಹಾರಗಳನ್ನು ತೆರೆಯುವುದರಿಂದ ಸಣ್ಣಮಕ್ಕಳಿಗೆ ಅನುಕೂಲ ಮಡಿಕೊಡಲಾಗುತ್ತದೆ. ಇದರ ಜೊತೆಗೆ ದೊಡ್ಡ ಗ್ರಾಮಗಳ ಮಕ್ಕಳಿಗೂ ಈ ಸೌಲಭ್ಯ ಕಲ್ಪಿಸಿಕೊಡಿ ಎಂದು ಹೇಳಿದ್ದಾರೆ. ಪರಿಶಿಷ್ಟ ಜಾತಿ–ವರ್ಗ ಹಾಗೂ ಹಿಂದುಳಿದ ವರ್ಗಗಳಿಗೆ ಸರ್ಕಾರಿ ಉದ್ಯೋಗದಲ್ಲೂ ಅನ್ಯಾಯವಾಗುತ್ತಿದೆ. ಸ್ವಾತಂತ್ರ್ಯ ಬಂದು ವರ್ಷಗಳೇ ಕಳೆದರೂ ಉದ್ಯೋಗ ಹಂಚಿಕೆಯಲ್ಲಿ ತಾರತಮ್ಯವನ್ನು ನಡೆಸಲಾಗುತ್ತದೆ. ಉದ್ಯೋಗವನ್ನು ಕೊಟ್ಟರೂ ಕೆಳಹಂತದ ಹುದ್ದೆಯನ್ನು ನೀಡಲಾಗುತ್ತಿದೆ. ಕೆಲವು ವಿದ್ಯಾರ್ಥಿಗಳು ಸರ್ಕಾರಿ ಕೆಲಸ ಪಡೆಯಲು ಬೇಕಾದ ವಿದ್ಯಾ ಅರ್ಹತೆ ಹೊಂದಿದ್ದರು ಅವಕಾಶದಿಂದ ವಂಚಿತರಾಗುತ್ತಿದ್ದಾರೆ. ಜೊತೆಗೆ ಉದ್ಯೋಗವನ್ನು ಪಡೆಯುವುದಕ್ಕೆ ಬೇಕಾದಂತಹ ತರಬೇತಿಯನ್ನು ಇಲಾಖೆಯಿಂದಲೇ ನೀಡಬೇಕಾಗುತ್ತದೆ. ಇಂತಹ ಉತ್ತಮ ಯೋಜನೆಗಳನ್ನು ಸರ್ಕಾರ ರೂಪಿಸಿದ್ದಾಗ ಸಮಾಜದಲ್ಲಿ ಎಲ್ಲಾರೂ ಒಂದೇ ಎಂಬ ಭಾವನೆ ಬರುತ್ತದೆ. ಹಿಂದಿನಿಂದಲೂ ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿರುವ ಪರಿಶಿಷ್ಟ ಜಾತಿ/ವರ್ಗ ಹಾಗೂ ಹಿಂದುಳಿದ ವರ್ಗಗಳ ಅಭಿವೃದ್ಧಿ ಕಡೆ ಸರ್ಕಾರ ಹಾಗೂ ಸಂಬಂಧಪಟ್ಟ ಇಲಾಖೆ ಗಮನ ಹರಿಸಿದರೆ ಸೌಲಭ್ಯಗಳು ಎಲ್ಲಾರಿಗೂ ದೊರೆತು ಗಾಂಧೀಜಿಯವರ ಸ್ವರಾಜ್ಯ ಕಲ್ಪನೆ ಸ್ವಲ್ಪಮಟ್ಟಕಾದರೂ ನನಗಾಸುತ್ತದೆ ಎಂಬುದಾಗಿ

ಸದನದಲ್ಲಿ ಗುರುದೇವರ ಹಳ್ಳಿ ಮಾದೇಗೌಡರು ಚರ್ಚಿಸಿರುವುದನ್ನು ಸಂಶೋಧನಾ ಅಧ್ಯಯನದಿಂದ ವಿಶ್ಲೇಷಿಸಲಾಗಿದೆ.[94]

ಅಂಗನವಾಡಿ ಕೇಂದ್ರಗಳಿಗೆ ಸರಬರಾಜು ಆಗುತ್ತಿರುವ ಆಹಾರ-ದವಸ-ಧ್ಯಾನಗಳು ಸರಿಯಾದ ರೀತಿಯಲ್ಲಿ ಬಳಕೆಯಾಗುತ್ತಿಲ್ಲ. ಇದರಲ್ಲೂ ಸಹ ಅನೇಕ ಲೋಪ-ದೋಷಗಳು ಕಂಡುಬರುತ್ತಿವೆ. ಇದಕ್ಕೆ ಸಂಬಂಧಿಸಿದಂತೆ ಸಂಬಂಧಪಟ್ಟ ಇಲಾಖೆಗೆ ತಿಳಿಸಿದ್ದರೂ ಏನೂ ಪ್ರಾಯೋಜನ ಆಗುತ್ತಿಲ್ಲ. ಇದಕ್ಕೆ ಪ್ರಮುಖ ಕಾರಣವೆಂದರೇ ಈ ಇಲಾಖೆಯಲ್ಲಿ ಕೆಲಸ ನಿರ್ವಹಿಸುವ ಕೇಲವು ಅಧಿಕಾರಿಗಳು ಮನೆ, ಕಾರು, ಒಡವೆ, ಜಮೀನು, ತೋಟಾ ಹೀಗೆ ಅನೇಕ ರೀತಿಯಲ್ಲಿ ಹಣ ಸಂಪಾದನೆಗೆ ಇಳಿದಿದ್ದಾರೆ ಇಂತಹ ಅಧಿಕಾರಿಗಳು ಶಿಶುವಿಹಾರ ಹಾಗೂ ಅಂಗನವಾಡಿ ಕೇಂದ್ರಗಳಿಗೆ ಸರಬರಾಜು ಆಗುತ್ತಿರುವ ಪದಾರ್ಥಗಳನ್ನು ಮಾರಾಟ ಮಾಡಿಕೊಂಡು ಹಣ ಸಂಪಾದನೆ ಮಾಡಲು ಮುಂದಾಗಿದ್ದಾರೆ. ಇದರ ಬಗ್ಗೆ ಸರ್ಕಾರ ಹಾಗೂ ಇಲಾಖೆ ಸೂಕ್ತ ಕ್ರಮಗಳನ್ನೂ ಜರುಗಿಸಿ ಪರಿಶಿಷ್ಟ ಜಾತಿ/ವರ್ಗ ಹಾಗೂ ಹಿಂದುಳಿದ ವರ್ಗಗಳನ್ನು ಎಲ್ಲಾ ರೀತಿಯಲ್ಲೂ ಅಭಿವೃದ್ದಿಪಡಿಸಲು ಸಚಿವರುಗಳು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಸಮಾಜದ ಹಿಂದುಳಿದ ವರ್ಗಗಳ ಅಭಿವೃದ್ಧಿಯಿಂದ ರಾಜ್ಯ ಹಾಗೂ ರಾಷ್ಟ್ರಗಳ ಅಭಿವೃದ್ಧಿ ಸಾಧ್ಯ ಹಾಗೂ ಗಾಂಧೀಜಿಯವರ ಸರ್ವರಿಗೂ ಸಮಪಾಲು ಎಂಬ ಆಶಯ ನೇರವೇರುತ್ತದೆ ಎಂಬುದಾಗಿ ಗುರುದೇವರಹಳ್ಳಿ ಮಾದೇಗೌಡರು ಸದನದಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ.

**ಕೊನೆಟಿಪ್ಪಣಿ**

1. ರಾಮಕೃಷ್ಣ.ಮಾ., (2005), 'ರೈತಮಿತ್ರ ಜಿ. ಮಾದೇಗೌಡ', ಪು.ಸಂ. 02.
2. ಪೂರ್ವೋಕ್ತ, ಪು. 57.
3. ರಾಜೇಗೌಡ.ಹ.ಕಾ. (ಸಂ.), (1998), ಸಿಂಗಾರ (ಕೆ.ಸಿಂಗಾರಿಗೌಡ ಗೌರವ ಗ್ರಂಥ), ಪು.ಸಂ. 389.
4. ಸಂದರ್ಶನ, ಜಿ.ಮಾದೇಗೌಡಗೌಡರೊಂದಿಗೆ (06.08.2017) ರಿಂದ ಸಂದರ್ಶನ ಸಂಶೋಧಕನಿಂದ.
5. ಭಾರತದ ಗ್ಯಾಸೆಟಿಯರ್, (2003), ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಪು.ಸಂ. 130.
6. ಸಂದರ್ಶನ, ಡಾ. ಹೆಚ್.ಡಿ.ಚೌಡಯ್ಯರೊಂದಿಗೆ (22.10.2017) ಸಂಶೋಧಕನಿಂದ.
7. ಸಂದರ್ಶನ ಜಿ.ಮಾದೇಗೌಡಗೌಡರೊಂದಿಗೆ (06.08.2017) ಸಂಶೋಧಕನಿಂದ.
8. ಭಾರತದ ಗ್ಯಾಸೆಟಿಯರ್, ಅದೇ, ಪು.ಸಂ. 131.
9. ಸಂದರ್ಶನ, ಕೆಂಪನಂಜೇಗೌಡ, ಗುತ್ತಿಗೆದಾರರೊಂದಿಗೆ (03.08.2017) ಸಂಶೋಧಕನಿಂದ.
10. ಸಂದರ್ಶನ, ಜಿ.ಮಾದೇಗೌಡಗೌಡರೊಂದಿಗೆ (06.08.2017) ಸಂಶೋಧಕನಿಂದ.
11. ಜಗದೀಶ್‌ಕೊಪ್ಪ 'ಕೆ.ವಿ.ಶಂಕರಗೌಡ', (2004), ಪು.ಸಂ. 17.
12. ಭಾರತದ ಗ್ಯಾಸೆಟಿಯರ್, (1998), ಅದೇ, ಪು.ಸಂ. 132.
13. ಶ್ರೀನಿವಾಸಪ್ರಸಾದ್‌ರವರು 13ನೇ ವರ್ಷದ ರಾಜ್ಯಮಟ್ಟದ ಡಾ. ಜಿ.ಮಾದೇಗೌಡರ ಸಮಾಜ ಸೇವೆ ಪ್ರತಿಷ್ಠಾನ ಪ್ರಶಸ್ತಿ ಸಮಾರಂಭದ ಅತಿಥಿಯಾಗಿ ಭಾಷಣ ಮಾಡಿದ ಸಂದರ್ಭದಲ್ಲಿ ಹೇಳಿದ ಮಾತು (03.08.2017)
14. ಭಾರತದ ಗ್ಯಾಸೆಟಿಯರ್, (1998), ಅದೇ, ಪು. 133.
15. ಸಂದರ್ಶನ, ಪ್ರೊ.ಬಿಳಿಗೌಡರವರೊಂದಿಗೆ (22-10-2017) ಸಂಶೋಧಕನಿಂದ.
16. ರಾಮಕೃಷ್ಣ.ಮ, 2005, ಪೂರ್ವೋಕ್ತ, ಪು. 44, 45.
17. ಭಾರತದ ಗ್ಯಾಸೆಟಿಯರ್, (1998) ಅದೇ, ಪು.ಸಂ. 133.
18. ಶಿವಕುಮಾರ್.ಎಂ, (2012), ಎಲ್.ಸಂದೇಶ್, ಜನನಾಯಕರು, ಮಂಡ್ಯ ಜಿಲ್ಲಾ ಜನಪ್ರತಿನಿಧಿಗಳ ಡೈರಕ್ಟರಿ, ಪು.ಸಂ. 12.

19. ರಾಮೇಗೌಡ.ಎಸ್.ಎಸ್., (2010), ಭಾರತೀ, ಪು.ಸಂ. 04.

20. ಸಂದರ್ಶನ, ಜಿ.ಮಾದೇಗೌಡಗೌಡರೊಂದಿಗೆ (06.08.2017) ಸಂಶೋಧಕನಿಂದ.

21. ರಾಗೌ, ಅಪರಂಜಿ, (2010), ಪು.ಸಂ. 162.

22. ಭಾರತದ ಗ್ಯಾಸೆಟಿಯರ್, (1998), ಅದೇ, ಪು.ಸಂ. 135.

23. ರಾಮಕೃಷ್ಣ.ಮ. (2005), ಪೂರ್ವೋಕ್ತ, ಪು.ಸಂ. 47, 48.

24. ಭಾರತದ ಗ್ಯಾಸೆಟಿಯರ್, (1998), ಅದೇ, ಪು.ಸಂ. 136.

25. ಶಿವಕುಮಾರ್.ಎಂ., (2012), ಎಲ್.ಸಂದೇಶ್ 'ಜನನಾಯಕರು', ಮಂಡ್ಯ ಜಿಲ್ಲಾ ಜನಪ್ರತಿನಿಧಿಗಳ ಡೈರಕ್ಟರಿ, ಪು.ಸಂ. 32.

26. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (1963), Vol. lx.No. 5, ಪು.ಸಂ. 244.

27. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (31 ಮಾರ್ಚ್ 1965), ಪು.ಸಂ. 1965

28. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (1 ಆಗಸ್ಟ್ 1985), ಪು.ಸಂ. 244

29. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (31 ಮಾರ್ಚ್ 1965), ಪು.ಸಂ. 442

30. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (2 ಜನವರಿ 1963), ಪು.ಸಂ. 524

31. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (1964), ಪು.ಸಂ. 468

32. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (1964–65), ಮಳವಳ್ಳಿ ತಾಲ್ಲೋಕು ಶಾಲಾ ಹಾಜರಾತಿ, ಪು.ಸಂ. 474

33. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಏಪ್ರಿಲ್ 1968), ಪು.ಸಂ. 31

34. ಅದೇ, ಪು.ಸಂ. 34

35. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (1 ಆಗಸ್ಟ್ 1985), ಪು.ಸಂ. 393–405

36. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಆಗಸ್ಟ್ 1972), ಪು.ಸಂ. 155–156

37. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (11 ಜುಲೈ 1979), ಪು.ಸಂ. 305

38. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಏಪ್ರಿಲ್ 1968), ಪು.ಸಂ. 31

39. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ ಕಡ್ಡಾಯ ಪ್ರಾಥಮಿಕ ಶಿಕ್ಷಣ ಸ್ಕೀಮ್ (6 ಏಪ್ರಿಲ್ 1968), ಪು.ಸಂ. 215

40. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, ಭೂ ಕಂದಾಯ ಇಳಿಕೆ (1967–68), ಪು.ಸಂ. 1186

41. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (11 ಜುಲೈ 1972), ಪು.ಸಂ. 103

42. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (1967), ಪು.ಸಂ. 108

43. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (14 ಜುಲೈ 1972), v year plan of the state, ಪು.ಸಂ. 355

44. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (20 ಆಗಸ್ಟ್ 1978), ಪು.ಸಂ. 345–347

45. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಮೇ 1988), ಪು.ಸಂ. 408–409

46. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (19 ಜುಲೈ 1971–72), ಪು.ಸಂ. 502

47. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (1974), ಪು.ಸಂ. 20

48. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಮಾರ್ಚ್ 1988), ಪು.ಸಂ. 46

49. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಮಾರ್ಚ್, 1988), ಪು.ಸಂ. 48

50. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, 1979, (10 ಫೆಬ್ರವರಿ 1987), ಪು.ಸಂ. 233–237

51. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಮಾರ್ಚ್ 1988), ಪು.ಸಂ. 51

52. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (30 ಮಾರ್ಚ್ 1988), ಪು.ಸಂ. 336–342

53. ಮೈಸೂರು ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (6 ಮಾರ್ಚ್, 1982), ಪು.ಸಂ. 260.

54. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (11 ಜುಲೈ 1972), ಪು.ಸಂ. 218

55. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (4 ಆಗಸ್ಟ್ 1972), ಪು.ಸಂ. 155–156

56. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (20 ಆಗಸ್ಟ್ 1978), ಪು.ಸಂ. 345–347

57. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ vol xl-L.A.-8 (23 ಜನವರಿ 1979), ಪು.ಸಂ. 49–53

58. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ vol xl-L.A.-15 (23 ಜನವರಿ 1979), ಪು.ಸಂ. 109–136

59. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (12 ಏಪ್ರಿಲ್ 1978), ಪು.ಸಂ. 325

60. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (18 ಏಪ್ರಿಲ್ 1979), ಪು.ಸಂ. 2–5

61. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (23 ಜನವರಿ 1982), ಪು.ಸಂ. 36

62. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, policy of prohibition, (23 ಜನವರಿ 1982) ಪು.ಸಂ. 524

63. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (23 ಜನವರಿ 1979), ಪು.ಸಂ. 263–264.

64. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (10 ಫೆಬ್ರವರಿ 1987), Vol. LII-L.A. 61, ಪು.ಸಂ. 481–483

65. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (10 ಫೆಬ್ರವರಿ 1987), ಪು. 484–486

66. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (30 ಮಾರ್ಚ್ 1988), ಪು.ಸಂ. 346–351

67. ಕರ್ನಾಟಕ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್, (9 ಮೇ 1988), ಪು.ಸಂ. 456–460

68. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೇಟ್, ಪ್ರೊಸಿಡಿಂಗ್ಸ್, 1987, (10 ಫೆಬ್ರವರಿ 1987), ಪು.ಸಂ. 233–236

69. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (17 ಮಾರ್ಚ್ 1986), ಪು.ಸಂ. 25–26 ಮತ್ತು 40

70. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (30 ಮಾರ್ಚ್ 1988), ಪು.ಸಂ. 346–351

71. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಮೇ 1988), ಪು.ಸಂ. 456–469

72. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (19 ಜುಲೈ 1978), ಪು.ಸಂ. 173–176

73. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಮೇ 1988), ಪು.ಸಂ. 526

74. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (28 ಮೇ 1978), ಪು.ಸಂ. 526

75. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (19 ಜುಲೈ 1978), ಪು.ಸಂ. 185–186

76. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (21 ಜುಲೈ 1979) Vol. VI L.A. 49 ಪು.ಸಂ. 374–375

77. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (21 ಜುಲೈ 1978), ಪು.ಸಂ. 397–398

78. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (14 ಜುಲೈ 1978), ಪು.ಸಂ. 445–446

79. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (10 ಫೆಬ್ರವರಿ 1982), ಪು.ಸಂ. 150–154

80. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (15 ಜುಲೈ 1982), ಪು.ಸಂ. 84–85

81. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (15 ಜುಲೈ 1982), ಪು.ಸಂ. 86–87

82. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (5 ಜೂನ್ 1987), ಪು.ಸಂ. 697

83. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ Vol. xxxxv-L.A. 48 (12 ಫೆಬ್ರವರಿ 1982) ಪು.ಸಂ. 374–377

84. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (28 ಮಾರ್ಚ್ 1989), ಪು.ಸಂ. 697

85. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (21 ಮಾರ್ಚ್ 1989), ಪು.ಸಂ. 359

86. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಮೇ 1988), ಪು.ಸಂ. 408–409

87. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಜುಲೈ 1982), ಪು.ಸಂ. 215

88. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (26 ಜುಲೈ 1982), ಪು.ಸಂ. 285

89. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಜುಲೈ 1982), ಪು.ಸಂ. 214

90. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (5 ಜೂನ್ 1987), Vol. xxxxviii-L.A. 48 ಪು.ಸಂ. 41–43

91. ಅದೇ ಪು.ಸಂ. 16

92. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (5 ಜೂನ್, 1987), Vol. xxxxviii-L.A. 486 ಪು.ಸಂ. 17.18

93. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಜುಲೈ 1987), ಪು.ಸಂ. 242–243

94. ಕರ್ನಾಟಕ ಸ್ಟೇಟ್ ಲೆಜಿಸ್ಲೆಟೀವ್ ಅಸೆಂಬ್ಲಿ ಡಿಬೆಟ್ಸ್ ಪ್ರೊಸಿಡಿಂಗ್ಸ್ (9 ಜುಲೈ 1987), ಪು.ಸಂ. 244–245

# ಅಧ್ಯಾಯ–ನಾಲ್ಕು
# ಜಿ.ಮಾದೇಗೌಡರ ರೈತಪರ ಹೋರಾಟಗಳು

4.1 ವರುಣಾ ನಾಲಾ ವಿರೋಧಿ ಚಳುವಳಿಯಲ್ಲಿ ಜಿ.ಮಾದೇಗೌಡರ ಪಾತ್ರ (1976–1977)

4.2 ಕಾವೇರಿ ನದಿ ನೀರಿನ ಹಂಚಿಕೆಯ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

4.3 ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಕಬ್ಬಿನ ಬೆಲೆ ಪರಿಷ್ಕರಣೆ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ (1981)

4.4 ರಸಗೊಬ್ಬರ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

4.5 ಕಬ್ಬಿಗೆ ವೈಜ್ಞಾನಿಕ ಬೆಲೆಗಾಗಿ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

4.6 ಬೆಳೆಸಾಲ ನೀಡಿಕೆ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

4.7 ಲೆವಿ ವಿರೋಧಿ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

# ಅಧ್ಯಾಯ-ನಾಲ್ಕು

# ಜಿ.ಮಾದೇಗೌಡರ ರೈತಪರ ಹೋರಾಟಗಳು

ವ್ಯವಸಾಯ ಪ್ರಧಾನ ಕುಟುಂಬದ ಹಿನ್ನೆಲೆಯಿಂದ ಬಂದ ಜಿ.ಮಾದೇಗೌಡರು ರೈತರಿಗಾಗಿ ಸದಾ ಮಿಡಿಯುವ ಮನಸ್ಥಿತಿ. ಆಳುವ ಸರ್ಕಾರಗಳು ತಮಗಿಷ್ಟ ಬಂದಂತೆ ಜಾರಿಗೊಳಿಸುವ ಕಾನೂನುಗಳು ರೈತರ ಜೀವನಕ್ಕೆ ವಿರೋಧ ವಾದರೆ ಅಂತಹ ನೀತಿ ನಿಯಮಗಳನ್ನು ನಿರ್ದಾಕ್ಷಿಣ್ಯವಾಗಿ ಹಾಗೂ ಪಕ್ಷಾತೀತವಾಗಿ ಖಂಡಿಸುವ ಎದೆಗಾರಿಕೆ ಇವರಿಗೆ ರಕ್ತಗತವಾಗಿಯೇ ಬಂದಿದೆ. ತಂದೆಯಂತೆ ಮಗ, ಗುರುವಿನಂತೆ ಶಿಷ್ಯ ಎಂಬ ನಾಣ್ನುಡಿಯಂತೆ ರೈತರ ಏಳಿಗೆಗಾಗಿ ಏನನ್ನಾದರೂ ಮಾಡಬೇಕೆಂಬ ಉತ್ಕಟ ಹಂಬಲ ಹೊಂದಿದ್ದ ತಂದೆಗೆ ತಕ್ಕ ಮಗನಾಗಿ ಆರಂಭ ದಿಂದಲೂ ಅದೇ ಗುಣವನ್ನು ಮೈಗೂಡಿಸಿಕೊಂಡಿದ್ದಾರೆ. ಇವರು ತಮ್ಮ ರಾಜಕೀಯ ಗುರುಗಳಾದ ಕೆ.ವಿ.ಶಂಕರಗೌಡರು ಹಾಕಿಕೊಟ್ಟ ಸಮಾಜ ಸುಧಾರಣಾ ಮಾರ್ಗದಲ್ಲಿ ಅನೇಕ ಅಭಿವೃದ್ಧಿಪರ ಹೋರಾಟಗಳನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ.

ಮಾನವೀಯ ಮೌಲ್ಯಗಳಿಗೆ ಸಾಮಾಜಿಕ ನ್ಯಾಯಕ್ಕೆ ವಿರುದ್ಧವೆಂಬಂತೆ ಸೃಷ್ಟಿಯಾಗುತ್ತಿರುವ ಸಂಕೀರ್ಣ ಪರಿಸ್ಥಿತಿಯಲ್ಲಿ ಅಂತಿಮವಾಗಿ ಬಲಿಪಶುವಾಗುವವರೇ ರೈತರು. ಅನ್ನದಾತನ ಒಡಲಿಗೆ ಕೊಡಲಿ ಇಡುವ ದುಷ್ಟ ವ್ಯವಸ್ಥೆಯನ್ನು ಎಚ್ಚರಿಸಿ ದೇಶದ ಬೆನ್ನೆಲುಬಿಗೆ ಸ್ಥಿರತೆಯನ್ನು ತಂದುಕೊಡಬೇಕಾದರೆ ದುಷ್ಟಕೂಟದ ವಿರುದ್ಧ ಹೋರಾಟ ಅನಿವಾರ್ಯವೇ ಆಗಿದೆ. ಹೋರಾಟದ ನೆಪದಲ್ಲಿ ಸಮಸ್ಯೆಯ ಉಗಮಕ್ಕೆ ಕಾರಣವಾದ ವ್ಯವಸ್ಥೆಯ ಉಪಭಾಗಗಳೇ ರೈತರನ್ನು ದಾಳಗಳನ್ನಾಗಿ, ರಾಜಕೀಯ ಅಸ್ತ್ರವನ್ನಾಗಿ, ಮತ ಬ್ಯಾಂಕ್‌ನ್ನಾಗಿ ಪರಿವರ್ತಿಸಿಕೊಳ್ಳುವ ಚಾಲಕಿ ತೋರ್ಪಡಿಕೆ ನಾಯಕರ ಸಂಖ್ಯೆಯು ಹೆಚ್ಚುತ್ತಿದೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ಜಿ.ಮಾದೇಗೌಡರು ವಿಭಿನ್ನವಾಗಿ ನಿಲ್ಲುತ್ತಾರೆ. ಅಲ್ಲದೆ ದಿಟ್ಟ ರೈತ ಹೋರಾಟಗಳನ್ನು ರೂಪಿಸುವುದು ಅನಿವಾರ್ಯತೆ ಇದೆ ಎಂಬುದನ್ನು ಜಿ.ಮಾದೇಗೌಡರು ತಮ್ಮ ರೈತಪರ ಹೋರಾಟಗಳಿಂದ ನಿರೂಪಿಸಿರುವುದನ್ನು ಸಂಶೋಧನೆಯಿಂದ ಅರಿಯಲಾಗಿದೆ.

ಶಿವಪುರ ಧ್ವಜ ಸತ್ಯಾಗ್ರಹ ಚಳವಳಿಯಲ್ಲಿ ನೀರು ಕೊಡುವ ಕಾಯಕದೊಂದಿಗೆ ಸಾರ್ವಜನಿಕ ಜೀವನಕ್ಕೆ ಪ್ರವೇಶ ಪಡೆದ ಇವರು ಜೀವನದುದ್ದಕ್ಕೂ ಅನೇಕ ರೈತ ಚಳವಳಿಗಳನ್ನು ಸಂಘಟಿಸಿ ಯಶಸ್ವಿಯಾಗಿ ಮುನ್ನಡೆಸಿಕೊಂಡು ಬಂದಿದ್ದಾರೆ. ದಕ್ಷಿಣ ಕರ್ನಾಟಕದ ಬಹುತೇಕ ಜಿಲ್ಲೆಗಳಿಗೆ ಸಂಬಂಧಿಸಿದಂತಹ ರೈತ ವಿರೋಧಿ ನೀತಿಗಳ ವಿರುದ್ಧ ಪ್ರತಿ ಬಾರಿ ಚಳವಳಿಗಳನ್ನು ರೂಪಿಸಿ ಗಾಂಧೀಜೀಯವರ ಮಾರ್ಗದಲ್ಲಿ ಹೋರಾಟ ನಡೆಸಿ ರೈತ ಹಿತವನ್ನು ಸಂರಕ್ಷಿಸಿದ್ದಾರೆ. ಅಂತಹ ಜನಪರ ಚಳವಳಿಗಳಲ್ಲಿ

ವರುಣಾ ನಾಲಾ ಚಳವಳಿ, ಕಾವೇರಿ ಚಳುವಳಿ, ಕಾಳಮುದ್ದನದೊಡ್ಡಿ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ರೈತರಿಗೆ ಬಾಕಿ ಹಣ ಪಾವತಿಗಾಗಿ ಶಾಸನ ಸಭೆಯಲ್ಲಿ ಹೋರಾಟ ಹಾಗೂ ಕಾವೇರಿ ಚಳವಳಿ ರಸ್ತೆತಡೆ ಚಳುವಳಿ, ರಸಗೊಬ್ಬರ ಬೆಲೆ ಏರಿಕೆ ಖಂಡಿಸಿ ಹೋರಾಟ, ಬ್ಯಾಂಕ್ ಹಾಗೂ ಲೆವಿ ವಿರೋಧಿ ಚಳುವಳಿ ಮುಂತಾದವುಗಳು ಪ್ರಮುಖವಾಗಿವೆ. ಆ ಚಳುವಳಿಗಳಲ್ಲಿ ರೂಪುರೇಷೆಗಳನ್ನು ರೂಪಿಸಿ ನೇತೃತ್ವವನ್ನು ಇವರೇ ವಹಿಸಿಕೊಳ್ಳುತ್ತಿದ್ದರು. ಈ ಚಳುವಳಿಗಳ ಹೋರಾಟದ ಹಾದಿಯನ್ನು ಈ ಕೆಳಗಿನಂತೆ ಸಂಶೋಧನೆಯಿಂದ ನಿರೂಪಿಸಲಾಗಿದೆ.

## 4.1 ವರುಣಾ ನಾಲಾ ವಿರೋಧಿ ಚಳವಳಿಯಲ್ಲಿ ಜಿ.ಮಾದೇಗೌಡರ ಪಾತ್ರ (1976–1977)

ಮಂಡ್ಯ ಜಿಲ್ಲೆಯ ರೈತ ಹೋರಾಟಗಳ ಇತಿಹಾಸದಲ್ಲಿ ವರುಣಾ ನಾಲಾ ವಿರೋಧಿ ಚಳವಳಿ ಚರಿತ್ರಾರ್ಹ. ಎಪ್ಪತ್ತರ ದಶಕದಲ್ಲಿ ಮಂಡ್ಯ ಮತ್ತು ಮೈಸೂರು ಜಿಲ್ಲೆಯ ರೈತರ ನಡುವೆ ನಡೆದ ಕಾವೇರಿ ನೀರಿನ ಪ್ರಮುಖ ಚಳವಳಿಯ ಭಾಗವೇ ವರುಣಾ ನಾಲಾ ವಿರೋಧಿ ಚಳವಳಿ. ಮೈಸೂರು ಹಾಗೂ ಮದ್ರಾಸ್ ಸರ್ಕಾರಗಳ ನಡುವೆ ಕಾವೇರಿ ನದಿ ನೀರಿನ ಬಳಕೆಗೆ ಸಂಬಂಧಪಟ್ಟ 1924ರ ಒಪ್ಪಂದ ಕಾವೇರಿ ನೀರನ್ನು ಕೃಷಿಗೆ ಬಳಸಿಕೊಳ್ಳಲು 50 ವರ್ಷಗಳ ಅವಧಿಗೆ ಏರ್ಪಟ್ಟ ಒಪ್ಪಂದವಿದು. ಇದಕ್ಕೆ ಪೂರಕವೆಂಬಂತೆ 1911ರಲ್ಲಿ ಬಿ.ಸುಬ್ಬರಾವ್ ಎಂಬ ಅಧಿಕಾರಿ ಸಲ್ಲಿಸಿದ ಕನ್ನಂಬಾಡಿ ಅಣೆಕಟ್ಟು ನಿರ್ಮಾಣದ ಪೂರ್ವಭಾವಿ ವರದಿಯಲ್ಲಿ ಕೃಷ್ಣರಾಜಸಾಗರ ಅಣೆಕಟ್ಟೆಗೆ ಬಲದಂಡೆಯಲ್ಲಿ ಒಂದು ತೂಬು ಅಳವಡಿಸಿಕೊಳ್ಳಬಹುದು ಎಂದು ಸೂಚಿಸಿದರು[1]. ಇದನ್ನೆ ಆಧಾರವಾಗಿಟ್ಟುಕೊಂಡು ಮೈಸೂರು ತಾಲ್ಲೂಕಿನ ವರುಣಾ ನಾಲಾ ಭಾಗದ ಜನತೆ ವರುಣಾ ನಾಲೆ ನಿರ್ಮಾಣಕ್ಕೆ ಆಗ್ರಹಿಸಿದ್ದರು. ಸ್ವತಃ ವಿಶ್ವೇಶ್ವರಯ್ಯ ಅವರೇ ಬಲದಂಡೆ ನಾಲೆಗೆ ವಿರೋಧವನ್ನು ವ್ಯಕ್ತಪಡಿಸಿದರು. 1969ರಲ್ಲಿ ವರುಣಾ ನಾಲಾ ನಿರ್ಮಾಣದ ಕೂಗು ಮರುಹುಟ್ಟು ಪಡೆಯಿತು. ಇದರ ಪರಿಣಾಮವಾಗಿ ಅಂದಿನ ವೀರೇಂದ್ರ ಪಾಟೀಲರ ನೇತೃತ್ವದ ಸರ್ಕಾರ ವರುಣಾ ನಾಲಾ ನಿರ್ಮಾಣದ ಬಗ್ಗೆ ಆಸಕ್ತಿ ತಳೆಯಿತು. ಇದರಿಂದ ಕೋಪಗೊಂಡ ಮಂಡ್ಯ ಜಿಲ್ಲೆಯ ಜನತೆ ಹಾಗೂ ಮೈಸೂರು ಪ್ರಾಂತ್ಯದಲ್ಲಿಯೇ ಪ್ರಭಾವಿ ಕಾಂಗ್ರೆಸ್ ನಾಯಕರಾಗಿದ್ದ ಹೆಚ್.ಕೆ.ವೀರಣ್ಣಗೌಡರು ಉಗ್ರವಾಗಿ ವಿರೋಧಿಸಿದರು. ಅಂದಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರ ಸಚಿವ ಸಂಪುಟದಲ್ಲಿ ಸಚಿವರಾಗಿದ್ದ ಸಂದರ್ಭದಲ್ಲಿ ಹೆಚ್.ಕೆ.ವೀರಣ್ಣಗೌಡರ ಪ್ರತಿಭಟನೆಗೆ ಬೆದರಿದ ಸರ್ಕಾರ ವರುಣಾ ನಾಲಾ ಕಾಮಗಾರಿಯನ್ನು ಸ್ಥಗಿತಗೊಳಿಸಿತು. ಇದು ಮಂಡ್ಯ ಜಿಲ್ಲೆಯ ರೈತರಿಗೆ ದೊರೆತ ಪ್ರಥಮ

ಯಶಸ್ಸು. ಮಂಡ್ಯ ಜಿಲ್ಲೆಯ ರೈತರ ಪ್ರತಿಭಟನೆಯ ಹಿನ್ನೆಲೆಯಲ್ಲಿ ಮುಖ್ಯಮಂತ್ರಿ ವಿರೇಂದ್ರ ಪಾಟೀಲರು ಬಲದಂಡೆಯ ತೂಬಿನ ಸಾಧಕ ಬಾಧಕಗಳನ್ನು ಕುರಿತು ಅಧ್ಯಯನ ಮಾಡಿ ವರದಿ ಸಲ್ಲಿಸುವಂತೆ 'ಮುಗ್ಧಂ' ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಿತು. ಈ ಸಮಿತಿಯು ವರುಣಾ ನಾಲಾ ನಿರ್ಮಾಣದ ಪರವಾಗಿಯೇ ವರದಿ ಸಲ್ಲಿಸಿತು.

ಈ ವರದಿಯ ಆಧಾರದ ಮೇಲೆ 1976 ರಲ್ಲಿ ಅಂದಿನ ಮುಖ್ಯಮಂತ್ರಿ ಡಿ.ದೇವರಾಜ ಅರಸುರವರ ನೇತೃತ್ವದ ಸರ್ಕಾರ ವರುಣಾ ನಾಲಾ ನಿರ್ಮಾಣದ ಪ್ರಸ್ತಾಪಕ್ಕೆ ಮತ್ತೇ ಜೀವ ನೀಡಿತು. ಇದರ ಸುಳಿವು ದೊರೆತ ಮಂಡ್ಯ ಜಿಲ್ಲೆಯ ರೈತ ನಾಯಕರು ಈ ನಿರ್ಧಾರವನ್ನು ವಿರೋಧಿಸಿ ಪ್ರತಿಭಟನೆಗೆ ಚಾಲನೆ ನೀಡಿದರು. ಈ ಪ್ರತಿಭಟನೆಯನ್ನು ಲೆಕ್ಕಿಸದೆ ಡಿ.ದೇವರಾಜ ಅರಸು ನೇತೃತ್ವದ ಸರ್ಕಾರ ದಿನಾಂಕ 29ನೇ ಮೇ 1977 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ವರುಣಾ ನಾಲಾ ನಿರ್ಮಾಣಕ್ಕೆ 18.5 ಕೋಟಿ ರೂಪಾಯಿಗಳ ಹಣ ಮಂಜೂರಾತಿಗೆ ಒಪ್ಪಿಗೆ ಪಡೆದು ತಕ್ಷಣದಿಂದಲೇ ಕಾಮಗಾರಿಯನ್ನು ಪ್ರಾರಂಭಿಸಲು ಸರ್ಕಾರ ಆದೇಶ ಹೊರಡಿಸಿತು[2]. ಈ ಹಿನ್ನೆಲೆಯಲ್ಲಿ ಕೆಲಸ ಪ್ರಾರಂಭವಾಯಿತು. ಈ ಯೋಜನೆಯನ್ನು ಪ್ರಾರಂಭದಿಂದಲೂ ಪ್ರಬಲವಾಗಿ ವಿರೋಧಿಸುತ್ತಾ ಬಂದಿದ್ದ ಹಾಗೂ ಡಿ.ದೇವರಾಜ ಅರಸು ಸರ್ಕಾರದಲ್ಲಿ ಕೈಗಾರಿಕಾ ಸಚಿವರಾಗಿದ್ದ ಎಸ್.ಎಂ.ಕೃಷ್ಣ ಅವರು ದಿನಾಂಕ 29ನೇ ಮೇ 1977 ರಂದು ತಮ್ಮ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಆ ದಿನವೇ ವರುಣಾ ನಾಲಾ ನಿರ್ಮಾಣಕ್ಕೆ ಸರ್ಕಾರದಿಂದ ಅನುಮೋದನೆ ದೊರೆಯಿತು. ಈ ವಿಷಯ ತಿಳಿದ ಎಸ್.ಎಂ.ಕೃಷ್ಣ ಅವರು ನಾನು ಸಂಪುಟಕ್ಕೆ ರಾಜೀನಾಮೆ ಸಲ್ಲಿಸಿದ ದಿನವೇ ಅರಸು ಅವರ ಸರ್ಕಾರ ಈ ಯೋಜನೆಯ ಬಗ್ಗೆ ನಿರ್ಧಾರಕೈಗೊಂಡಿರುವುದು ವಿಷಾದನೀಯ ಎಂದು ತಿಳಿಸುತ್ತಾ ಮಂಡ್ಯ ಜಿಲ್ಲೆಯ ಜನ ತಮ್ಮ ನ್ಯಾಯಬದ್ಧ ಹಕ್ಕುಗಳನ್ನು ಪಡೆಯಬೇಕಾಗಿದೆ ಎಂದು ಎಸ್.ಎಂ.ಕೃಷ್ಣ ಅವರು ಪತ್ರಿಕಾ ಹೇಳಿಕೆಯಲ್ಲಿ ತಿಳಿಸಿದ್ದರು[3]. ಈ ರೀತಿಯಾಗಿ ಜಿಲ್ಲೆಯ ಹಿರಿಯ ನಾಯಕರಾದ ಹೆಚ್.ಕೆ.ವೀರಣ್ಣಗೌಡ, ಎಸ್.ಎಂ.ಕೃಷ್ಣ ರಾಜೀನಾಮೆ ಸಲ್ಲಿಸದ ಸಂದರ್ಭದಲ್ಲಿ ಶಾಸಕರಾಗಿದ್ದ ಜಿ.ಮಾದೇಗೌಡರೂ ಸಹ ಇವರೊಂದಿಗೆ ವರುಣಾ ನಾಲಾ ನಿರ್ಮಾಣಕ್ಕೆ ವಿರೋಧ ವ್ಯಕ್ತಪಡಿಸಿ ಹೋರಾಟಕ್ಕೆ ಸಂಪೂರ್ಣವಾಗಿ ತೊಡಗಿಸಿಕೊಂಡರು.

ಮಂಡ್ಯ ಜಿಲ್ಲೆಯ ರೈತ ನಾಯಕರಾದ ಗುರುದೇವರಹಳ್ಳಿ ಮಾದೇಗೌಡರು ವರುಣಾ ನಾಲಾ ಯೋಜನೆಯನ್ನು ಕೈಬಿಡುವಂತೆ ಸರ್ಕಾರದ ಮೇಲೆ ಒತ್ತಡ ಹೇರಿದರು. ಮಂಡ್ಯ ಜಿಲ್ಲೆಯ ಜೀವನಾಡಿಯಾದ ಕಾವೇರಿ ನೀರಿನ ಲಭ್ಯತೆ ಕಡಿಮೆಯಾಗುತ್ತಾ ಬಂದು ಶೇಕಡ 20 ರಿಂದ 40 ರಷ್ಟು ಬೆಳೆ ನಷ್ಟವಾಗುತ್ತಿರುವ

ಸಂದಿಗ್ಧ ಪರಿಸ್ಥಿತಿಯನ್ನು ಮಂಡ್ಯ ಜಿಲೆಯ ರೈತರು ಎದುರಿಸುತ್ತಿದ್ದರು ಹಾಗೂ ಇನ್ನಿತರ ರೈತರ ಸಮಸ್ಯೆಗಳನ್ನು ಮುಖ್ಯಮಂತ್ರಿ ಡಿ.ದೇವರಾಜ ಅರಸು ಅವರಲ್ಲಿ ಗುರುದೇವರಹಳ್ಳಿ ಮಾದೇಗೌಡರು ಮನವಿ ಮಾಡಿ ಕೋರಿಕೊಂಡರೂ ಸಹ ಅವರು ಪಟ್ಟುಬಿಡದೇ ವರುಣಾ ನಾಲಾ ನಿರ್ಮಾಣವನ್ನು ಪ್ರತಿಷ್ಠೆಯ ದ್ಯೋತಕವಾಗಿ ಕೈಗೆತ್ತಿಕೊಂಡರು. ಈ ಸಂದರ್ಭದಲ್ಲಿ ಈ ಸಮಸ್ಯೆಯ ಬಗ್ಗೆ ಸ್ಪಷ್ಟ ಮಾಹಿತಿ ನೀಡಲು ತಜ್ಞರ ಸಮಿತಿ ನೇಮಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಸರ್ಕಾರ ಇವರ ಮನವಿಯನ್ನು ಪುರಸ್ಕರಿಸಿ ನಿವೃತ್ತ ಚೀಫ್ ಇಂಜಿನಿಯರ್ ಎ.ಕೆ.ಚಾರ್ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿತು. ಈ ಸಮಿತಿಯೂ ಕೂಡ ಮಂಡ್ಯ ಜಿಲ್ಲೆಗೆ ಪ್ರತಿಕೂಲವಾಗಿ ವರದಿ ನೀಡಿತು[4]. ಈ ಎಲ್ಲಾ ಬೆಳವಣಿಗೆಗಳಿಂದ ರೊಚ್ಚಿಗೆದ್ದ ಮಂಡ್ಯ ಜಿಲ್ಲೆಯ ಜನತೆಯಿಂದ ಮುಖ್ಯಮಂತ್ರಿ ಡಿ.ದೇವರಾಜ ಅರಸು ಸರ್ಕಾರದ ವಿರುದ್ಧ ಉಗ್ರ ಹೋರಾಟವು ಜನ್ಮ ತಳೆಯಿತು. ಮುಂದಿನ ಹೋರಾಟದ ರೂಪುರೇಷೆಗಳನ್ನು ಚರ್ಚಿಸಲು ದಿನಾಂಕ 05ನೇ ಜೂನ್ 1977ನೇ ಭಾನುವಾರ ಮಂಡ್ಯದ ಪ್ರವಾಸಿ ಮಂದಿರದಲ್ಲಿ ಸಭೆ ಸೇರಿ ಅಂದಿನವರೆಗೆ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿ ಅಕಾಲಿಕ ಮರಣ ಹೊಂದಿದ ದಿವಂಗತ ಹೆಚ್.ಕೆ.ವೀರಣ್ಣಗೌಡ ಅವರಿಗೆ ಸಂತಾಪ ಸೂಚಿಸಿ ತೆರುವಾಗಿದ್ದ ಅಧ್ಯಕ್ಷ ಸ್ಥಾನಕ್ಕೆ ಕೆ.ವಿ.ಶಂಕರಗೌಡರನ್ನು ಆಯ್ಕೆ ಮಾಡಿಕೊಂಡು ಇವರ ಅಧ್ಯಕ್ಷತೆಯಲ್ಲಿ ಕ್ರಿಯಾ ಸಮಿತಿ ಹಾಗೂ ಇದರಡಿಯಲ್ಲಿ ಚಳವಳಿ ಸಮಿತಿ, ಹಣಕಾಸು ಸಮಿತಿ, ನ್ಯಾಯಾಂಗ ಸಮಿತಿ ಎಂಬ ಮೂರು ಉಪಸಮಿತಿಗಳನ್ನು ರಚಿಸಲಾಯಿತು. ಚಳವಳಿ ಸಮಿತಿಯ ಅಧ್ಯಕ್ಷರಾಗಿ ಶಾಸಕರು, ರೈತ ನಾಯಕರು ಹಾಗೂ ಗಾಂಧೀವಾದಿಯಾದ ಜಿ.ಮಾದೇಗೌಡರನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಜಿ.ಮಾದೇಗೌಡರು ಚಳವಳಿಯ ಅಧ್ಯಕ್ಷರಾಗಿ ಅಂದರೆ 06ನೇ ಜೂನ್ 1977 ರಂದು ಮಂಡ್ಯ ಬಂದ್‌ಗೆ ಕರೆ ನೀಡಿದ್ದರು. ಜಿ.ಮಾದೇಗೌಡರ ಕರೆಗೆ ಓಗೊಟ್ಟು ಈ ಬಂದ್‌ಗೆ ಅಭೂತ್ವಪೂರ್ವವಾದ ಬೆಂಬಲ ಸೂಚಿಸಿದ ಮಂಡ್ಯ ಜಿಲ್ಲೆಯ ನಾಗರೀಕರು ಸ್ವಯಂ ಪ್ರೇರಣೆಯಿಂದ ಅಂಗಡಿ, ಮುಂಗಟ್ಟುಗಳನ್ನು ಮುಚ್ಚಿ ಬಂದ್‌ಗೆ ಬೆಂಬಲ ಸೂಚಿಸಿ ಸಾರ್ವಜನಿಕರಿಗೆ ತೊಂದರೆ ಆಗದಂತೆ ಸಹಕರಿಸಿದರು. ಮಂಡ್ಯ ಬಂದ್ ಸಂಪೂರ್ಣವಾಗಿ ಯಶಸ್ವಿಯಾಯಿತು. ಜಿ.ಮಾದೇಗೌಡರ ಕರೆಯ ಮೇರೆಗೆ ಹಾಗೂ ವರುಣಾ ನಾಲೆ ನಿರ್ಮಾಣದಿಂದ ಮಂಡ್ಯ ಜಿಲ್ಲೆಗೆ ಮಾರಕವಾಗಲಿದೆಯೆಂದು ಇಡೀ ಜಿಲ್ಲೆಯ ಜನತೆ ಹಿಂದೆಂದೂ ಕಾಣದಷ್ಟು ಪ್ರಮಾಣದಲ್ಲಿ ಬೃಹತ್ ಚಳವಳಿ ಪ್ರಾರಂಭಿಸಿದರು. 'ವರುಣಾ ಮಂಡ್ಯದವರ ಮರಣ' ಎಂದು ಪ್ರಮುಖ ಲೇಖನವನ್ನು ಸ್ಥಳೀಯ ಪತ್ರಿಕೆ ಪೌರವಾಣಿಯ ಸಂಪಾದಕರು ಪ್ರಕಟಿಸಿದರು. ಇದರಿಂದ ಮಂಡ್ಯ ಜಿಲ್ಲೆಗೆ ಮಾರಕವಾಗಲಿದೆಯೆಂಬ ಸಂದೇಶ ಜಿಲ್ಲೆಯಾದ್ಯಂತ ಪ್ರವಾಹದಂತೆ ಸಂಚರಿಸಿ ಚಳವಳಿಯಲ್ಲಿ ಸಹಸ್ರಾರು ರೈತರು, ನಾಗರಿಕರು, ಕಾರ್ಮಿಕರು, ವರ್ತಕರು ವಿದ್ಯಾರ್ಥಿಗಳು ಮಹಿಳೆಯರು ಹಾಗೂ ಮಕ್ಕಳು

ಭಾಗವಹಿಸಿ ಐತಿಹಾಸಿಕ ಚಳವಳಿಯನ್ನು ಪ್ರಾರಂಭಿಸಿದರು. ಈ ಚಳವಳಿಯು. ಜಿ.ಮಾದೇಗೌಡರ ನೇತೃತ್ವದ ರೈತ ಹೋರಾಟದ ಪ್ರಥಮ ಸಂಘಟನೆಗೆ ದೊರೆತ ಅಭೂತ್ವಪೂರ್ವ ಜನ ಬೆಂಬಲವಾಗಿದೆ.

ವರುಣಾ ನಾಲಾ ಪ್ರತಿಭಟನಾ ಸಮಿತಿಯ ಕಾರ್ಯಾಲಯವನ್ನು 08ನೇ ಜೂನ್ 1977ರಂದು ತೆರೆಯಲಾಯಿತು. ದಿನಾಂಕ 09ನೇ ಜೂನ್ 1977 ರಂದು ಮಂಡ್ಯದ ಸಿಲ್ವರ್ ಜ್ಯೂಬಿಲಿ ಪಾರ್ಕ್‌ನಲ್ಲಿ ಭಾರಿ ಬಹಿರಂಗ ಸಭೆಯನ್ನು ಏರ್ಪಡಿಸಲಾಗಿತ್ತು. ಈ ಸಭೆಗೆ ಜಿಲ್ಲೆಯ ಹಲವು ಗ್ರಾಮಗಳಿಂದ ತಮಟೆ, ನಗಾರಿ ಮೆರವಣಿಗೆಯೊಂದಿಗೆ ಹೆಚ್ಚಿನ ಸಂಖ್ಯೆಯಲ್ಲಿ ರೈತರು, ವ್ಯಾಪಾರಸ್ಥರು, ಗ್ರಾಮಸ್ಥರು, ಮಹಿಳೆಯರು, ವಿದ್ಯಾರ್ಥಿಗಳು ಸೇರಿದರು. ಈ ಬಹಿರಂಗ ಸಭೆಯನ್ನು ಉದ್ದೇಶಿಸಿ ಚಳವಳಿಯ ಅಧ್ಯಕ್ಷರಾದ ಜಿ.ಮಾದೇಗೌಡರು ಮಾತನಾಡುತ್ತಾ ಮಂಡ್ಯ ಮತ್ತು ಮೈಸೂರು ಜಿಲ್ಲೆಗಳ ನಡುವೆ ಈ ವಿಷಯದಲ್ಲಿ ಘರ್ಷಣೆ ಸಂಭವಿಸಬಾರದು. ನಾಲೆ ನಿರ್ಮಾಣ ಕಾರ್ಯ ಪ್ರಾರಂಭವಾಗುವ ಮೊದಲು ಸತ್ಯಾಂಶಗಳನ್ನು ಕಂಡುಕೊಳ್ಳಬೇಕೆಂದು, ಇಲ್ಲದಿದ್ದರೆ ಮಂಡ್ಯ ಜಿಲ್ಲೆಯಿಂದ ಉಗ್ರ ಹೋರಾಟವನ್ನು ಎದುರಿಸಬೇಕಾಗುತ್ತದೆ ಹಾಗೂ ಮಂಡ್ಯ ಜಿಲ್ಲೆಯ ಜನತೆಯ ಕೋಪಕ್ಕೆ ಗುರಿಯಾಗಬೇಕಾಗುತ್ತದೆ ಎಂಬ ವಿಷಯವನ್ನು ಸಭೆಯ ಮೂಲಕ ಮುಖ್ಯಮಂತ್ರಿ ಡಿ.ದೇವರಾಜ ಅರಸು ಅವರನ್ನು ಕೋರಿಕೆಯ ಮೇರೆಗೆ ಎಚ್ಚರಿಸಿದರು[5]. ಚಳವಳಿ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು ಕೊಟ್ಟ ಕರೆಯ ಮೇರೆಗೆ ಇಡೀ ಜಿಲ್ಲೆಯಲ್ಲಿ ಚಳವಳಿಯ ಕಾವು ಪ್ರಖರಗೊಂಡಿತು. ಸಿಡಿದೆದ್ದ ರೈತರು ಜಿ.ಮಾದೇಗೌಡರ ಯೋಜನೆಯಂತೆ ಪ್ರತಿ ಗ್ರಾಮದಿಂದಲ್ಲೂ ರೈತರು ಶಿಸ್ತುಬದ್ಧವಾಗಿ ಸಿಲ್ವರ್ ಜ್ಯೂಬಿಲಿ ಪಾರ್ಕ್‌ಗೆ ಬಂದು ಚಳವಳಿಯಲ್ಲಿ ಭಾಗವಹಿಸುತ್ತಿದ್ದರು. ಸಮಾಜದ ಎಲ್ಲಾ ವರ್ಗದ ಜನತೆ ಚಳವಳಿಯಲ್ಲಿ ಭಾಗವಹಿಸಿ ಬೆಂಬಲ ನೀಡಿದರು. 17ನೇ ಜೂನ್ 1977ರಂದು ಜಿ.ಮಾದೇಗೌಡರ ನೇತೃತ್ವದಲ್ಲಿ ಸುಮಾರು 200ಕ್ಕೂ ಹೆಚ್ಚು ರೈತರು ಡಿ.ದೇವರಾಜ ಅರಸು ಅವರ ಸರ್ಕಾರದ ವಿರುದ್ಧ ವಿಧಾನಸೌಧದ ಎದುರು ಪಿಕೆಟಿಂಗ್ ನಡೆಸುವುದರ ಮೂಲಕ ಪ್ರತಿಭಟಿಸಿದರು[6]. ಇದಕ್ಕೆ ಸೊಪ್ಪು ಹಾಕದ ಸರ್ಕಾರ ವರುಣಾ ನಾಲಾ ಕಾಮಗಾರಿಯನ್ನು ಸ್ಥಗಿತಗೊಳಿಸಲಿಲ್ಲ. ಈ ಕಾರಣದಿಂದ ಚಳವಳಿಯನ್ನು ತೀವ್ರಗೊಳಿಸಲು ಸೆಪ್ಟಂಬರ್ ವೇಳೆಗೆ ಜಿಲ್ಲೆಯ ರೈತರ ಸಭೆಯನ್ನು ಕರೆದು ವರುಣಾ ನಾಲಾ ವಿರೋಧಿ ಹೋರಾಟ ಸಮಿತಿಯನ್ನು ರಚಿಸಲಾಯಿತು. ಸಮಿತಿಯ ಅಧ್ಯಕ್ಷರಾಗಿ ಕೆ.ವಿ.ಶಂಕರಗೌಡ ಹಾಗೂ ಸಂಚಾಲಕರಾಗಿ ಜಿ.ಮಾದೇಗೌಡ, ಎಚ್.ಡಿ.ಚೌಡಯ್ಯ, ಎಂ.ಮಂಚೇಗೌಡ ಆಯ್ಕೆಯಾಗುವುದರ ಮೂಲಕ ಚಳವಳಿಗೆ ಉಗ್ರ ಸ್ವರೂಪ ನೀಡಿದರು. ಅಕ್ಟೋಬರ್ ವೇಳೆಗೆ ಸಮಿತಿಯ ನೇತೃತ್ವದಲ್ಲಿ ಜಿಲ್ಲೆ ಹಾಗೂ ತಾಲ್ಲೂಕು ಕಛೇರಿ ಎದುರು ಧರಣಿ ನಡೆಸಲಾಯಿತು. ದಿನಾಂಕ 25ನೇ ಅಕ್ಟೋಬರ್ 1977ರಂದು 10,000 ರೈತರು ಮೌನ ಮೆರವಣಿಗೆಯಲ್ಲಿ ಭಾಗವಹಿಸಿದರು. ಯಾವುದೇ ಅಹಿತಕರ

ಘಟನೆ ನಡೆಯಲಿಲ್ಲ. ಈ ಚಳವಳಿ ಇಷ್ಟೊಂದು ಶಿಸ್ತುಬದ್ಧವಾಗಿ ಮತ್ತು ಶಾಂತರೀತಿಯಲ್ಲಿ ಸಾಗಬೇಕಾದರೆ ಅಂದಿನ ಮಂಡ್ಯದ ಜಿಲ್ಲಾಧಿಕಾರಿಯಾಗಿದ್ದ ಚಿರಂಜೀವಿ ಸಿಂಗ್ ಅವರ ಮಾರ್ಗದರ್ಶನ, ಸಲಹೆ ಹಾಗೂ ಜಿ.ಮಾದೇಗೌಡರ ಸಂಘಟನೆಯ ನಿರ್ವಹಣಾ ನಾಯಕತ್ವ ಮತ್ತು ಅಹಿಂಸಾ ತತ್ವಗಳು ಕಾರಣವಾಗಿರುವುದು ವರುಣಾ ನಾಲಾ ವಿರೋಧಿ ಚಳುವಳಿಯಲ್ಲಿ ಕಂಡುಬರುತ್ತದೆ.

ವರುಣಾ ನಾಲಾ ನಿರ್ಮಾಣವನ್ನು ವಿರೋಧಿಸಿ ದಿನಾಂಕ 26ನೇ ಅಕ್ಟೋಬರ್ 1977ರಂದು ಬೃಹತ್ 'ಚೆಡ್ಡಿ ಮೆರವಣಿಗೆ'ಯನ್ನು ಆಯೋಜಿಸಲಾಗಿತ್ತು. ಇಡೀ ದೇಶದಲ್ಲಿಯೇ ಅತ್ಯಂತ ವಿಶಿಷ್ಟ ರೂಪದಲ್ಲಿ ನಡೆದ ಚಡ್ಡಿ ಮೆರವಣಿಗೆ ರಾಷ್ಟ್ರದ ಗಮನ ಸೆಳೆದ ವಿಶೇಷ ಚಳವಳಿಯಾಗಿತ್ತು[7]. ಮಂಡ್ಯ ಜಿಲ್ಲೆಯಲ್ಲಿ 12,000 ಕ್ಕೂ ಹೆಚ್ಚು ರೈತರು ಚೆಡ್ಡಿ ಮೆರಣಿಗೆಯಲ್ಲಿ ಭಾಗವಹಿಸಿದ್ದುದು ಐತಿಹಾಸಿಕ ದಾಖಲೆಯಾಗಿದೆ. ಚಳವಳಿ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು, ಸಂಚಾಲಕರಾದ ಎಚ್.ಡಿ.ಚೌಡಯ್ಯ ಬಿ.ಟಿ.ಶ್ರೀನಿವಾಗೌಡ, ಎಸ್.ಡಿ.ಜಯರಾಂ ಇವರೇ ಮೊದಲಾದ ರೈತ ನಾಯಕರುಗಳು ಹಾಗೂ ನಾಯಕ ಹಿಂಬಾಲಕರೆಂಬ ಭೇದಭಾವವಿಲ್ಲದೇ ಎಲ್ಲಾ ಚಳಿವಳಿಗಾರರು ಚೆಡ್ಡಿ ಧರಿಸಿದರು. ಜೊತೆಗೆ ತಮಟೆ, ನಗಾರಿ ಹಾಗೂ ಓಲಗದ ಸದ್ದುಗಳೊಂದಿಗೆ ಚಡ್ಡಿದಾರಿಗಳು, ಅತ್ಯಂತ ಶಿಸ್ತಿನಿಂದ ಮೂರು ಸಾಲಾಗಿ ನಿಂತು ಅರಸು ಸರ್ಕಾರಕ್ಕೆ ಧಿಕ್ಕಾರ ಕೂಗುತ್ತಾ ಸಿಲ್ವರ್ ಜ್ಯೂಬಿಲಿ ಪಾರ್ಕ್‌ನಿಂದ ಜಿಲ್ಲಾಧಿಕಾರಿ ಕಛೇರಿಗೆ ತಲುಪಿತು. ಜಿ.ಮಾದೇಗೌಡರ ನೇತೃತ್ವದ ಈ ಬೃಹತ್ ಐತಿಹಾಸಿಕ ಚಳವಳಿಯಲ್ಲಿ ಚಡ್ಡಿದಾರಿಗಳಷ್ಟೇ ಸಂಖ್ಯೆಯಲ್ಲಿ ನೋಡುಗರೂ ಸೇರಿದರು. ಆದರೂ ಯಾವುದೇ ಅಹಿತಕರ ಘಟನೆಗೆ ಅವಕಾಶ ನೀಡರಲಿಲ್ಲ. ಚಳವಳಿಯ ಅಧ್ಯಕ್ಷರಾದ ಜಿ.ಮಾದೇಗೌಡರು ನೀಡಿದ ಕರೆಗೆ ಓಗೊಟ್ಟು ಜಿಲ್ಲೆಯ ಮೂಲೆ ಮೂಲೆಯಿಂದ ಮೂರು ಲಕ್ಷಕ್ಕೂ ಹೆಚ್ಚು ರೈತರು, ಶಾಲಾ ವಿದ್ಯಾರ್ಥಿಗಳು, ಶಿಕ್ಷಕರು, ವ್ಯಾಪಾರಸ್ಥರು, ಗ್ರಾಮಸ್ಥರು, ಎಲ್ಲಾ ವರ್ಗದ ಜನರು ಸಕ್ರಿಯವಾಗಿ ಭಾಗವಹಿಸಿದರು[8]. ಮಂಡ್ಯದ ಇತಿಹಾಸದಲ್ಲಿ ಇದೇ ಮೊದಲನೇ ಬಾರಿಗೆ ಬೃಹತ್ ಮೆರವಣಿಗೆಯಾಗಿ ಇತಿಹಾಸದಲ್ಲಿ ದಾಖಲಾಗಿದೆ. ಮಹಿಳೆಯರೂ ಪ್ರತ್ಯೇಕವಾಗಿ ಖಾಲಿ ಕೊಡಗಳನ್ನು ಹೊತ್ತು ದೊಡ್ಡಚಳವಳಿಯನ್ನು ನಡೆಸಿದ್ದೂ ವಿಶೇಷ.

ದಿನಾಂಕ 04ನೇ ನವೆಂಬರ್ 1977 ರಂದು ಬೆಂಗಳೂರಿನಲ್ಲಿ ಅಂದಿನ ಪ್ರಧಾನಿ ಇಂದಿರಾಗಾಂಧಿಯವರು ಭಾಷಣ ಮಾಡುವಾಗ ಜಿ.ಮಾದೇಗೌಡ ಹಾಗೂ ಕೆ.ವಿ.ಶಂಕರಗೌಡರ ನೇತೃತ್ವದಲ್ಲಿ ಸಮಿತಿಯ ಸದಸ್ಯರು ಮತ್ತು ಜಿಲ್ಲೆಯಿಂದ ತೆರಳಿದ್ದ ಚಳವಳಿಗಾರರು ಪ್ರಧಾನಿಯವರ ಗಮನವನ್ನು ಸೆಳೆಯುವ ದೃಷ್ಟಿಯಿಂದ ಕಪ್ಪು ಬಾವುಟ ಪ್ರದರ್ಶಿಸಿ ಪ್ರತಿಭಟನೆ ಮಾಡಿದರು. ಇಷ್ಟಾದರೂ ವರುಣಾ ನಾಲಾ ಕಾಮಗಾರಿ ಸ್ಥಗಿತಗೊಳ್ಳಲಿಲ್ಲ. ಇದರಿಂದ ರೊಚ್ಚಿಗೆದ್ದ ಜಿಲ್ಲೆಯ ಜನತೆ ಮತ್ತು ವರುಣಾ ನಾಲಾ

ವಿರೋಧಿ ಸಮಿತಿಯ ಸದಸ್ಯರು ದಿನಾಂಕ 24ನೇ ನವೆಂಬರ್ 1977ರಂದು 'ಬೆಂಗಳೂರು ಚಲೋ' ಕಾರ್ಯಕ್ರಮವನ್ನು ಏರ್ಪಡಿಸಿತು[9]. ಕಾಲ್ನಡಿಗೆಯ ಜಾಥಾಗೆ ಎರಡು ಸಾವಿರ ರೈತರು ಆರಂಭದಲ್ಲಿ ಭಾಗವಹಿಸಿದರು. ಬೆಂಗಳೂರು ತಲುಪುವಷ್ಟರಲ್ಲಿ ಮಹಿಳೆಯರು, ಮಕ್ಕಳು, ವಿದ್ಯಾರ್ಥಿಗಳು, ಯುವಕರು, ಕಾರ್ಮಿಕರು ಹಾಗೂ ವರ್ತಕರು ಸೇರಿದಂತೆ ವಿಧಾನಸೌಧ ತಲುಪುವ ವೇಳೆಗೆ ಚಳವಳಿಗಾರರ ಸಂಖ್ಯೆ ಹೆಚ್ಚಿನ ಮಟ್ಟದಲ್ಲಿ ಸೇರಿತು. ಈ ರ್‍ಯಾಲಿಯು ವಿಧಾನಸೌಧ ತಲುಪಿದಾಗ ಮುಖ್ಯಮಂತ್ರಿ ಡಿ.ದೇವರಾಜ ಅರಸು ಅವರು ಅಧಿವೇಶನದಲ್ಲಿ ಭಾಗಿಯಾಗಿದ್ದರು. ಈ ಹಿನ್ನೆಲೆಯಲ್ಲಿ ಚಳವಳಿಗಾರರು ಕಬ್ಬನ್‌ಪಾರ್ಕ್‌ನಲ್ಲಿ ಮುಖ್ಯಮಂತ್ರಿಗಳ ಆಗಮನಕ್ಕಾಗಿ ಕಾದರು. ನಂತರ ಮುಖ್ಯ ಮಂತ್ರಿಗಳು ಚಳಿವಳಿಗಾರರು ನಿರತ ಸ್ಥಳಕ್ಕೆ ಬಂದು ಬಾರಿ ಜನಸಮೂಹವನ್ನು ಉದ್ದೇಶಿಸಿ ಬಹಿರಂಗ ಸಭೆಯಲ್ಲಿ ಮಾತನಾಡಿದ ಮುಖ್ಯಮಂತ್ರಿಗಳು ನಾವೇ ಅಧಿಕಾರಕಾರವನ್ನು ಕಳೆದುಕೊಳ್ಳುತ್ತಿದ್ದು, ನಿಮ್ಮಗೆ ಯಾವ ಭರವಸೆ ಕೊಡಲಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು.[10] ಮುಖ್ಯಮಂತ್ರಿಗಳ ಈ ಪ್ರತಿಕ್ರಿಯೆಯು ನಿರಾಶೆ ಹೊಮ್ಮಲು ಕಾರಣವಾಯಿತು. ಅಂತಿಮವಾಗಿ ಮಂಡ್ಯ ಜಿಲ್ಲೆಗೆ ಅನ್ಯಾಯವಾಗದಂತೆ ಕ್ರಮಕೈಗೊಳ್ಳುವುದಾಗಿ ಭರವಸೆ ನೀಡಿದರು.

ವರ್ಷಗಟ್ಟಲೆ ನಡೆದ ಈ ಚಳವಳಿಯ ಗಂಭೀರತೆ ಹೇಗಿತ್ತೆಂದರೆ ಮುಖ್ಯಮಂತ್ರಿಗಳು ಚಳವಳಿಗಾರರ ಅರ್ಭಟಕ್ಕೆ ಬೆದರಿ ಬೆಂಗಳೂರಿನಿಂದ ಮೈಸೂರಿಗೆ ಹೋಗಲು ಮಂಡ್ಯ ಮಾರ್ಗವನ್ನು ಬಿಟ್ಟು, ಬೆಳ್ಳೂರು ನಾಗಮಂಗಲ ಇಲ್ಲವೆ ಕೊಳ್ಳೇಗಾಲ ಮಾರ್ಗವಾಗಿ ಮೈಸೂರಿಗೆ ತಲುಪುತ್ತಿದ್ದರು. ಚಳವಳಿಯ ಗಂಭೀರತೆ ಉಗ್ರವಾಗಿತ್ತು. ವರ್ಷದುದ್ದಕ್ಕೂ ನಡೆದ ವರುಣಾ ನಾಲಾ ಚಳವಳಿ ಅಂತಿಮವಾಗಿ. ಗುರುದೇವರಹಳ್ಳಿ ಮಾದೇಗೌಡ ಒತ್ತಾಯಕ್ಕೆ ಮಣಿದು ಈ ಮಟ್ಟದ ವಿರೋಧವನ್ನು ಮಂಡ್ಯ ಜಿಲ್ಲೆಯಿಂದ ನಿರೀಕ್ಷೆ ಮಾಡದ ಅರಸು ಸರ್ಕಾರ ಅಂತಿಮವಾಗಿ ತಜ್ಞರ ಸಮಿತಿಯೊಂದನ್ನು ನೇಮಿಸಿತು. ಈ ಸಮಿತಿಯ ಆಧಾರದ ಮೇರೆಗೆ ದಿನಾಂಕ 27ನೇ ಮಾರ್ಚ್ 1979ರಂದು ಕರ್ನಾಟಕ ಸರ್ಕಾರ ಆದೇಶವೊಂದನ್ನು ಹೊರಡಿಸಿತು[11]. ಈ ಆದೇಶದ ಪ್ರಕಾರ. ಗುರುದೇವರಹಳ್ಳಿ ಮಾದೇಗೌಡರು ಶಾಸನಸಭೆಯಲ್ಲಿ ಎತ್ತಿದ್ದ ಪ್ರಶ್ನೆಗಳು ವರುಣಾ ನಾಲೆಯ ಚಳುವಳಿ ಹಾಗೂ ವರುಣಾ ನಾಲೆಯ ಕಾಮಗಾರಿಯನ್ನು ವಿರೋಧಿಸಿ ನಡೆದ ರೈತರ ಉಗ್ರಚಳುವಳಿ ಬಗೆಗೆ ಸರ್ಕಾರವು ಕ್ರಮ ಸಂಖ್ಯೆ; ಪಿ.ಡಬ್ಲ್ಯೂಡಿ 17 ಎಂ.ಕೆ.ಎಸ್./79, ದಿನಾಂಕ 27ನೇ ಮಾರ್ಚ್ 1979 ಸರ್ಕಾರದ ಆಜ್ಞೆ ನಿಜವೇ. ಈ ಆಜ್ಞೆಯು ಕೃಷ್ಣರಾಜಸಾಗರದ ಹಾಲಿ ಅಚ್ಚುಕಟ್ಟು ಪ್ರದೇಶದ ಜನರ ಹಿತರಕ್ಷಣೆಯನ್ನು ಕಾಪಾಡಲು ಹೊಣೆಗಾರಿಕೆ ನೀಡಿದೆಯೇ ಎಂದು ಪ್ರಶ್ನಿಸಿದರು. ಇದಕ್ಕೆ ಉತ್ತರಗಳು ಈ ರೀತಿಯಾಗಿ ವ್ಯಕ್ತವಾದವು.

ಎಂಭತ್ತು ಸಾವಿರ ಎಕರೆ ಪ್ರದೇಶಕ್ಕೆ ಮಾತ್ರ ಅನ್ವಯವಾಗುವಂತೆ ನಾಲ್ಕು ಟಿ.ಎಂ.ಸಿ. ನೀರನ್ನು ಜುಲೈ, ಆಗಸ್ಟ್, ಅಕ್ಟೋಬರ್ ತಿಂಗಳಿನಲ್ಲಿ ಮಾತ್ರ ಹರಿಸಲಾಗುತ್ತದೆ ಎಂದು ಆದೇಶಿಸಲಾಯಿತು. ಕೃಷ್ಣರಾಜಸಾಗರದ ಬಲದಂಡೆಯಲ್ಲಿ ವರುಣಾ ನಾಲೆಯನ್ನು ನಿರ್ಮಾಣ ಮಾಡುವುದು. ವಿಶ್ವೇಶ್ವರಯ್ಯ ನಾಲಾ ಅಚ್ಚುಕಟ್ಟು, ಪಿಕಪ್ ನಾಲೆ ಹಾಗೂ ಶಿಂಷಾ ಅಚ್ಚುಕಟ್ಟು ಪ್ರದೇಶದ ಬೇಸಾಯಕ್ಕೆ ತೊಂದರೆಯಾಗದಂತೆ ನೀರನ್ನು ಹರಿಸುವುದು[12]. ಹುಲಿಕೆರೆ ಭುಗದಿಂದ ಹೆಚ್ಚು ನೀರು ಹೊಮ್ಮುವಂತೆ ವಿಸ್ತರಿಸಿ ವಿಶ್ವೇಶ್ವರಯ್ಯ ನಾಲೆಯ ಕೊನೆಯಭಾಗದ ರೈತರಿಗೆ ನೀರು ಸಿಗುವಂತೆ ಮಾಡಿ ತುರಗನೂರು ಸಂಪರ್ಕ ನಾಲೆ ನಿರ್ಮಾಣಕ್ಕೆ ಮುಂದಿನ ಆಯವ್ಯಯದಲ್ಲಿ ಹಣ ಒದಗಿಸುವುದು. ಈ ಮೇಲಿನ ಅಂಶಗಳನ್ನು ಮಂಡ್ಯ ಮತ್ತು ಮೈಸೂರು ಜಿಲ್ಲೆಯ ನಾಯಕರುಗಳು ಮತ್ತು ರೈತರ ಸಮ್ಮುಖದಲ್ಲಿ ತೀರ್ಮಾನಿಸಿ ಸರ್ಕಾರ ಆದೇಶ ಹೊರಡಿಸಿದ ಹಿನ್ನೆಲೆಯಲ್ಲಿ ಚಳವಳಿಯು ಶಾಂತಿಯುತವಾಗಿ ಕೊನೆಗೊಂಡು ಎರಡು ಜಿಲ್ಲೆಗಳ ಬಾಂಧವ್ಯ ಯಥಾಸ್ಥಿತಿ ಮುಂದುವರೆಯಿತು.

**ಗುರುದೇವರಹಳ್ಳಿ ಮಾದೇಗೌಡರ ನೇತೃತ್ವದಲ್ಲಿ ಎರಡನೇ ಹಂತದ ವರುಣಾ ನಾಲಾ ವಿರೋಧ ಚಳುವಳಿ**

1998ರಲ್ಲಿ ಕರ್ನಾಟಕ ರಾಜ್ಯದ ಉಪಮುಖ್ಯಮಂತ್ರಿಗಳು, ಮೈಸೂರು ಜಿಲ್ಲೆಯ ಉಸ್ತುವಾರಿ ಸಚಿವರಾಗಿದ್ದ ಮೈಸೂರು ತಾಲ್ಲೂಕಿನವರಾದ ಸಿದ್ದರಾಮಯ್ಯನವರು 1979ರ ಒಪ್ಪಂದಕ್ಕೆ ವಿರುದ್ಧವಾಗಿ ಈ ಹಿಂದೆ ವಿಶ್ವೇಶ್ವರಯ್ಯ ನಾಲೆ ತೂಬಿಗೆ ಅಳವಡಿಸಲಾಗಿದ್ದ 6x8 ಅಡಿ ಹಳೆಯ ತೂಬಿನ ಜೊತೆಗೆ 2.5 ಕೋಟಿ ರೂ. ವೆಚ್ಚದಲ್ಲಿ ಹೊಸ ತೂಬಿನ ನಿರ್ಮಾಣ ಮಾಡುವುದು. 80 ಸಾವಿರ ಎಕರೆಗೆ ಬದಲಾಗಿ 1.4 ಲಕ್ಷ ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸುವುದು. 4 ಟಿ.ಎಂ.ಸಿ. ನೀರಿಗೆ ಬದಲಾಗಿ 10.5 ಟಿ.ಎಂ.ಸಿ. ನೀರು ಪಡೆಯುವ ಉದ್ದೇಶದಿಂದ ಹೊಸ ತೂಬಿನ ನಿರ್ಮಾಣ ಕಾರ್ಯವನ್ನು ಜೂನ್ 1998 ರಲ್ಲಿ ಉಪಮುಖ್ಯಮಂತ್ರಿಗಳಾಗಿದ್ದ ಸಿದ್ದರಾಮಯ್ಯ ಅವರ ವಿಶೇಷ ಆಸಕ್ತಿಯ ಕಾರಣ ವರುಣಾ ನಾಲಾ ಕಾಮಗಾರಿಯನ್ನು ಪ್ರಾರಂಭಿಸಲಾಯಿತು. ಈ ಹಿನ್ನೆಲೆಯಲ್ಲಿ ಶಾಂತಿಯುತವಾಗಿ ತಟಸ್ಥವಾಗಿದ್ದ ವರುಣಾ ನಾಲಾ ವಿರೋಧಿ ಚಳವಳಿ ಮರುಹುಟ್ಟು ಪಡೆಯಿತು[13]. 1979ರ ಒಪ್ಪಂದದಂತೆ ವರುಣಾ ನಾಲೆಗೆ ಹೊಸ ತೂಬು ನಿರ್ಮಿಸುವುದು ಮತ್ತು 4 ಟಿ.ಎಂ.ಸಿ. ಯಿಂದ 10.5 ಟಿ.ಎಂ.ಸಿ. ನೀರು ಬಳಕೆಗೆ ಸರ್ಕಾರ ಅನುಮೋದನೆ ನೀಡಿರುವುದು ಸ್ಪಷ್ಟ ಉಲ್ಲಂಘನೆ ಮತ್ತು ಮಂಡ್ಯ ಜಿಲ್ಲೆಯ ರೈತರಿಗೆ ಮಾರಕ ಹಾಗೂ 80 ವರ್ಷದಷ್ಟು ಹಳೆಯದಾದ ಕೃಷ್ಣರಾಜ ಅಣೆಕಟ್ಟೆಗೆ ಹೊಸ ತೂಬನ್ನು ನಿರ್ಮಾಣ ಮಾಡುವುದು ಅಪಾಯವಾಗುವ ಸಾಧ್ಯತೆಯೇ ಹೆಚ್ಚು ಇರುವುದರಿಂದ ಮಂಡ್ಯ ಜಿಲ್ಲೆಯ ರೈತರು ಜಿ.ಮಾದೇಗೌಡರ ನೇತೃತ್ವದಲ್ಲಿ ವರುಣಾ ನಾಲಾ ಚಳವಳಿಯನ್ನು

ಪ್ರಾರಂಭಿಸಬೇಕಾಯಿತು. 1990ರಲ್ಲೇ ಅಸ್ತಿತ್ವಕ್ಕೆ ಬಂದ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು ಎರಡನೇ ಹಂತದ ವರುಣಾ ನಾಲಾ ವಿರೋಧಿ ಚಳವಳಿಗೆ ಚಾಲನೆ ನೀಡಿ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯು 26ನೇ ಜೂನ್ 1998ರಂದು ಕೃಷ್ಣರಾಜ ಸಾಗರ ಚಲೋ ಚಳವಳಿಗೆ ಕರೆ ಕೊಟ್ಟಿತು. ಈ ಕರೆಗೆ ಓಗೊಟ್ಟು ಮಂಡ್ಯ ಜಿಲ್ಲೆಯ ಅಸಂಖ್ಯಾತ ರೈತರು, ನಾಗರಿಕರು, ಕಾರ್ಮಿಕರು, ವರ್ತಕರು, ವಿದ್ಯಾರ್ಥಿಗಳು ಹಾಗೂ ಮಹಿಳೆಯರು ಸೇರಿದಂತೆ ಕೃಷ್ಣರಾಜ ಸಾಗರ ಅಣ್ಣೆಕಟ್ಟಿನ ಪ್ರದೇಶದಲ್ಲಿ ಜಮಾಯಿಸಿದರು[14]. ಸಾಕಷ್ಟು ವರ್ಷಗಳಿಂದ ಮಡುಗಟ್ಟಿದ ಮಂಡ್ಯ ಜಿಲ್ಲೆಯ ಜನತೆಯ ಕೋಪ ಉಗ್ರರೂಪ ಪಡೆದು ಕೃಷ್ಣರಾಜ ಸಾಗರದ ಕಾಲುವೆ ನಿರ್ಮಾಣ ಕಾಮಗಾರಿ ಯಂತ್ರೋಪಕರಣಗಳು, ಪರಿಕರಣಗಳು, ಹಲವಾರು ಬೆಲೆಬಾಳುವ ವಾಹನಗಳು ಬೆಂಕಿಗೆ ಆಹುತಿಯಾದವು. ರೈತರು ದಾಂಧಲೆಗೆ ಇಳಿದು ಸಿಕ್ಕ ಸಿಕ್ಕ ವಸ್ತುಗಳಿಗೆ ಬೆಂಕಿ ಹಚ್ಚಿದರು. ಈ ಸಂದರ್ಭದಲ್ಲಿ ಜಿ.ಮಾದೇಗೌಡರು ಗಾಂಧಿತತ್ವದ ಮೂಲಕ ಹೋರಾಟಮಾಡಬೇಕೆ ಹೊರತು ಹಿಂಸೆಗೆ ಅವಕಾಶ ನೀಡಬಾರದೆಂದು ಚಳುವಳಿಗಾರರಲ್ಲಿ ಮನವಿ ಮಾಡಿದರು. ಆದರೂ ಚಳುವಳಿಗಾರರಲ್ಲಿ ವರುಣಾನಾಲಾ ವಿರುದ್ದ ಹೋರಾಟ ಉಗ್ರರೂಪ ತಾಳಿದ್ದರಿಂದ ಹಿಂಸೆಗೆ ಅವಕಾಶವಾಯಿತು. ಚಳವಳಿಗಾರರು ಸರ್ಕಾರದ ಕೋಪಕ್ಕೆ ತುತ್ತಾಗಿ ಪೊಲೀಸರು ಗಾಳಿಯಲ್ಲಿ ಗುಂಡು ಹಾರಿಸುವ ಮುಖಾಂತರ ಚಳವಳಿಗಾರರ ದಾಂಧಲೆಯನ್ನು ಹತೋಟಿಗೆ ತಂದರು. ಈ ದಾಂಧಲೆಯಿಂದ ಆದ ಸರ್ಕಾರಿ ಹಾಗೂ ಖಾಸಗಿ ಆಸ್ತಿಪಾಸ್ತಿ ನಷ್ಟಕ್ಕೆ ಸಂಬಂಧಿಸಿದಂತೆ ಮಂಡ್ಯ ಜಿಲ್ಲೆಯ ರೈತ ಹಿತರಕ್ಷಣಾ ಸಮಿತಿ ಅಧ್ಯಕ್ಷ ಜಿ.ಮಾದೇಗೌಡರು, ಎಂ.ಎಸ್.ಆತ್ಮಾನಂದ, ಎಚ್.ಡಿ.ಚೌಡಯ್ಯ, ಕೆ.ಬೋರಯ್ಯ, ಬಿ.ಟಿ.ಶ್ರೀನಿವಾಗೌಡ, ಸುನಂದ ಜಯರಾಮ ಸೇರಿದಂತೆ ಒಟ್ಟು 17 ಮಂದಿ ನಾಯಕರು ಹಾಗೂ 1500 ಮಂದಿ ರೈತರ ಮೇಲೆ ಪೊಲೀಸ್‌ನವರು. ಮೊಕದ್ದಮೆ ದಾಖಲು ಮಾಡಿದರು. ಜಿ.ಮಾದೇಗೌಡರ ಚಳವಳಿಯ ತೀವ್ರತೆಗೆ ಬೆಚ್ಚಿದ ಸರ್ಕರ ಅಂತಿಮವಾಗಿ 10ನೇ ಜುಲೈ 1998 ರಂದು[15] ಈ ಹಿಂದಿನ 1979ರ ಒಪ್ಪಂದಕ್ಕೆ ಮಂಡ್ಯ–ಮೈಸೂರು ಜಿಲ್ಲೆಯ ರೈತರು ರಾಜಕೀಯ ನಾಯಕರು ಹಾಗೂ ರೈತ ನಾಯಕರು ಬದ್ಧವಾಗಿರುವಂತೆ ಸೂಚಿಸಿತು. ಇದು ಜಿ.ಮಾದೇಗೌಡ ನೇತೃತ್ವದ ಹೋರಾಟಕ್ಕೆ ದೊರೆತ ಜಯ ಹಾಗೂ ಇವರ ಚಿಂತನಾತ್ಮಕ ಹೋರಾಟದ ಪ್ರತಿಬಿಂಬವಾಗಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

## 4.2 ಕಾವೇರಿ ನದಿನೀರಿನ ಹಂಚಿಕೆಯ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

ರೈತಹಿತ ರಕ್ಷಣಾ ಸಮಿತಿಯ ಅಧ್ಯಕ್ಷರಾಗಿ ನಡೆಸಿದ ಹೋರಾಟಗಳಲ್ಲಿ ಕಾವೇರಿ ನದಿ ನೀರು ಹಂಚಿಕೆ ಹೋರಾಟ ಪ್ರಮುಖವಾದುದ್ದು. ಕರ್ನಾಟಕದ ದಕ್ಷಿಣ ಭಾಗದ ಜೀವನದಿ ಕಾವೇರಿಯಾಗಿದ್ದು, ಕೊಡಗಿನ ತಲಕಾವೇರಿಯಲ್ಲಿ ಜನಿಸಿ ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಸಮೃದ್ಧವಾಗಿ ಹರಿದು ತಮಿಳುನಾಡಿನ ಮೆಟ್ಟೂರು ಜಲಾಶಯದ ಮೂಲಕ ಬಂಗಾಳಕೊಲ್ಲಿಯಲ್ಲಿ ಲೀನವಾಗುತ್ತದೆ. ಕಾವೇರಿ ನದಿಯ ಉಗಮದಿಂದ ಅಂತ್ಯದ ವರೆಗೂ ಹಲವಾರು ಉಪನದಿಗಳನ್ನು ಸೃಷ್ಟಿಸಿದೆ. ಉಪನದಿಗಳಲ್ಲಿ ಪ್ರಮುಖವಾಗಿ ಲೋಕಪಾವನಿ, ಶಿಂಷಾ, ಲಕ್ಷ್ಮಣತೀರ್ಥ, ಹೇಮಾವತಿ, ನದಿಳಾಗಿವೆ. ಈ ನದಿಗಳ ಮೂಲಕ ಇತರೆ ಉಪನದಿಗಳನ್ನು ತನ್ನೊಡಲಿಗೆ ಸೇರಿಸಿಕೊಂಡು ಕರ್ನಾಟಕದಲ್ಲಿ 481 ಕಿಲೋ ಮೀಟರ್ ಉದ್ದ ಹರಿಯುತ್ತದೆ. ಮೇಕೆದಾಟುವಿನ ಮೂಲಕ ತಮಿಳುನಾಡು ಪ್ರವೇಶಿಸುತ್ತದೆ[16]. ಕಾವೇರಿ ನದಿ ನೀರು ಸಹಸ್ರಾರು ಜನರ ಜೀವನಾಡಿಯಾಗಿದೆ. ಕೃಷಿಕರಿಗೆ, ದನಕರುಗಳಿಗೆ, ಪ್ರಾಣಿ ಪಕ್ಷಿಗಳಿಗೆ, ಕಾರ್ಖಾನೆಗಳಿಗೆ ಬಳಸುವುದೂ ಸೇರಿದಂತೆ ಸಾರ್ವಜನಿಕರ ಬಾಯಾರಿಕೆಯನ್ನು ನಿವಾರಿಸುವ ಮೂಲಕ ನೀರಿನ ಹಾಹಾಕಾರವನ್ನು ಪ್ರಾಕೃತಿಕವಾಗಿ ನಿವಾರಿಸಿ ಮಂಡ್ಯ ಮತ್ತು ಮೈಸೂರು ಪ್ರಾಂತ್ಯಕ್ಕೆ ಮನೆ ದೇವತೆಯೇ ಆಗಿದ್ದಾಳೆ. ಹಲವಾರು ಗ್ರಾಮಗಳಲ್ಲಿ ಕಾವೇರಿಯನ್ನು ದೇವತೆಯಂತೆ ಪ್ರತಿಷ್ಠಾಪಿಸಿ ಆರಾಧಿಸುತ್ತಿದ್ದಾರೆ. ಇಂತಹ ಪವಿತ್ರ ಕಾವೇರಿ ಮಾತೆಯನ್ನು ತಮಿಳುನಾಡಿನ ರಾಜಕೀಯ ಪಕ್ಷಗಳು ತಮ್ಮ ರಾಜಕೀಯ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಪದೇ ಪದೇ ನ್ಯಾಯಾಲಯಕ್ಕೆ ಮೊರೆ ಹೋಗುವುದರ ಮೂಲಕ ನೀರಿನ ಹಂಚಿಕೆ ಸಮಸ್ಯೆ ಉಂಟುಮಾಡುವುದು ವಿಪರ್ಯಾಸದ ವಾಡಿಕೆಯಾಗಿದೆ. ಇದಕ್ಕೆ ಪೂರಕವೆಂಬಂತೆ ಕರ್ನಾಟಕ ಸರ್ಕಾರವು ನ್ಯಾಯಾಲಯದ ಆದೇಶದಂತೆ ಹಾಗೂ ಕೇಂದ್ರ ಸರ್ಕಾರದ ಒತ್ತಡಗಳಿಗೆ ಮಣಿದು ಕಾವೇರಿ ನದಿ ನೀರು ಬಿಡುವ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯಲ್ಲಿ ಜನಗಳಲ್ಲಿ ಹೋರಾಟವಾಗಿ ಮಾರ್ಪಡುತ್ತದೆ. ಗಡಿವಿವಾದದಂತೆ ಜಲವಿವಾದವು ಬಗೆಹರಿಯದ ಸಮಸ್ಯೆಯಾಗಿ ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ನಡುವಿನ ಬಾಂಧವ್ಯಕ್ಕೆ ಧಕ್ಕೆಯಾಗಿದೆ. ಕಾವೇರಿ ನದೀ ನೀರಿನ ವಿವಾದ ಸೃಷ್ಟಿಯಾದಾಗಲೆಲ್ಲಾ ಇಡೀ ದೇಶದ ಗಮನವನ್ನು ಮಂಡ್ಯ ಜಿಲ್ಲೆಯು ಸೆಳೆಯುತ್ತದೆ. ಹಾಗೆಯೇ ಕಾವೇರಿ ಜಲವಿವಾದ ಉಂಟದಾಗಲೆಲ್ಲ ಇಡೀ ಮಂಡ್ಯ ಜಿಲ್ಲೆಯ ಜನತೆಗೆ ತಕ್ಷಣ ನೆನಪಾಗುವುದೇ ರಾಜಕೀಯ ಹಾಗೂ ರೈತಪರ ಹೋರಾಟದ ನೇತೃತ್ವ ವಹಿಸಿಕೊಳ್ಳುವ ನಾಯಕ ಜಿ.ಮಾದೇಗೌಡರು. ಮಂಡ್ಯ ಜಿಲ್ಲೆಗೆ ಜೀವಂತ ಸಮಸ್ಯೆಯಾಗಿರುವ ಕಾವೇರಿ ಜಲವಿವಾದ ಪ್ರತಿ ಎರಡು ಮೂರು ವರ್ಷಗಳಿಗೊಮ್ಮೆ ತಲೆದೋರುತ್ತದೆ. 1990 ರಿಂದೀಚೆಗೆ ಕಾವೇರಿ ಚಳವಳಿ ರಾಜಕೀಯ ಸ್ವರೂಪ ಪಡೆದುಕೊಳ್ಳುತ್ತಿದ್ದು ಉದ್ದೇಶಪೂರ್ವಕವಾಗಿ ವಿವಾದ

ಹುಟ್ಟುಹಾಕಲಾಗುತ್ತಿದೆ. ಇಂತಹ ಸಂದರ್ಭದಲ್ಲಿ ಮಂಡ್ಯ ಜಿಲ್ಲೆಯಲ್ಲಿ ಜಿ.ಮಾದೇಗೌಡರು ಮುಂಖಡತ್ವ ವಹಿಸಿ ಅನೇಕ ಹೋರಾಟಗಳನ್ನು ರೂಪಿಸಿ ಕಾವೇರಿ ನದೀ ನೀರು ತಮಿಳುನಾಡಿಗೆ ಹರಿದು ಹೋಗದಂತೆ ತಡೆಯುವಲ್ಲಿ ಅಲ್ಪಮಟ್ಟಿಗೆ ಯಶಸ್ವಿಯಾಗಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ.

**ಕಾವೇರಿ ಜಲವಿವಾದದ ಹಿನ್ನೆಲೆ**

ಕಾವೇರಿ ನದೀ ನೀರಿನ ಹಂಚಿಕೆಯ ವಿವಾದ ಶತಮಾನಗಳಷ್ಟು ಹಳೆಯದು. 1803ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಕೆರೆಯ ನೀರಾವರಿ ಯೋಜನೆ ಆರಂಭಿಸಿದಾಗಲೇ ಮದ್ರಾಸ್ ಪ್ರೆಸಿಡೆನ್ಸಿ ಆಕ್ಷೇಪಣೆ ಎತ್ತುವ ಮೂಲಕ ಜಲವಿವಾದಕ್ಕೆ ನಾಂದಿ ಹಾಡಿತು. ಬ್ರಿಟಿಷ್ ಅಧೀನದಲ್ಲಿದ್ದ ಮೈಸೂರು ಸಂಸ್ಥಾನ ಯಾವುದೇ ನೀರಾವರಿ ಯೋಜನೆ ಕೈಗೊಳ್ಳಬೇಕಾದರೂ ಪ್ರೆಸಿಡೆನ್ಸಿಯ ಒಪ್ಪಿಗೆ ಪಡೆಯಬೇಕಾಗಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗೂ ವಿಶ್ವೇಶ್ವರಯ್ಯನವರು 1910ರಲ್ಲಿ ಕಾವೇರಿ ನದಿಗೆ ಅಣೆಕಟ್ಟೆಯನ್ನು ಕಟ್ಟಲು ಯೋಜನೆಯೊಂದನ್ನು ಸಿದ್ಧಪಡಿಸಿದರು. ಇದನ್ನು ಮದ್ರಾಸ್ ಸರ್ಕಾರ ವಿರೋಧಿಸಿತು. 1914ರಲ್ಲಿ ಹೆಚ್.ಡಿ.ಗ್ರಿಪನ್ಸ್ ನೇತೃತ್ವದ ನ್ಯಾಯಮಂಡಳಿ ಮದ್ರಾಸ್ ಸರ್ಕಾರದ ಆಕ್ಷೇಪಣೆಗಳನ್ನು ತಿರಸ್ಕರಿಸಿ ಕೃಷ್ಣರಾಜಸಾಗರ ಅಣೆಕಟ್ಟು ನಿರ್ಮಿಸಿಕೊಳ್ಳಲು ಮೈಸೂರು ಸಂಸ್ಥಾನಕ್ಕೆ ಅನುಮತಿ ನೀಡಿತು. ಅಣೆಕಟ್ಟು ಎತ್ತರವನ್ನು 60 ಅಡಿಗೆ ನಿಗದಿಗೊಳಿಸಬೇಕೆಂಬ ಮದ್ರಾಸ್ ಸರ್ಕಾರದ ನಿಲುವಿಗೆ ಬದಲಾಗಿ 124 ಅಡಿಗೆ ನಿಗದಿ ಮಾಡುವಲ್ಲಿ ವಿಶ್ವೇಶ್ವರಯ್ಯನವರು ಯಶಸ್ವಿಯಾದರು. 1924ರಲ್ಲಿ ನಡೆದ ಒಪ್ಪಂದದ ಪ್ರಕಾರ 3 ಲಕ್ಷದ 1 ಸಾವಿರ ಎಕರೆ ಭೂಮಿಗೆ ನೀರೊದಗಿಸುವ ಸಾಮರ್ಥ್ಯ ಹೊಂದಿರುವ ಮೆಟ್ಟೂರು ಜಲಾಶಯವನ್ನು ನಿರ್ಮಿಸಿಕೊಳ್ಳಲು ಮದ್ರಾಸ್ ಸರ್ಕಾರಕ್ಕೆ ಅವಕಾಶ ಮಾಡಿಕೊಟ್ಟಿತು. ಆದರೆ ಮೈಸೂರು ಸಂಸ್ಥಾನಕ್ಕೆ ಕೇವಲ 1,25,000 ಎಕರೆ ಪ್ರದೇಶಕ್ಕೆ ನೀರೊದಗಿಸುವ ಅಣೆಕಟ್ಟು ನಿರ್ಮಿಸಿಕೊಳ್ಳಲು ಹಲವು ನಿಬಂಧನೆಗಳೊಂದಿಗೆ ಒಪ್ಪಿಗೆ ನೀಡಿತು. 1924 ರ ಈ ಒಪ್ಪಂದವು ಐವತ್ತು ವರ್ಷಗಳವರೆಗೆ ಅಂದರೆ 1974ಕ್ಕೆ ಮುಕ್ತಾಯಗೊಳ್ಳುತ್ತಿದ್ದುದರಿಂದ ಈ ವೇಳೆಗಾಗಲೇ ತಮಿಳುನಾಡು ಸರ್ಕಾರ ನಿಗದಿಗಿಂತ ಹೆಚ್ಚಿನ ಪ್ರದೇಶವನ್ನು ನೀರಾವರಿಗೆ ವಿಸ್ತರಿಸಿಕೊಂಡಿತು. ಇದನ್ನೇ ಆಧರಿಸಿ ಕರ್ನಾಟಕ ರಾಜ್ಯ ಹಾರಂಗಿ, ಕಬಿನಿ, ಹೇಮಾವತಿ ಜಲಾಶಯಗಳ ನಿರ್ಮಾಣ ಯೋಜನೆಯನ್ನು ಕೈಗೆತ್ತಿಕೊಂಡಿತು. ಇದಕ್ಕೆ ತಕರಾರು ಎಂಬಂತೆ 1971ರಲ್ಲಿ ಮದ್ರಾಸ್ ಸರ್ಕಾರ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲೇರಿತು. 1924ರ ಒಪ್ಪಂದ 1974ರಲ್ಲಿಯೇ ಕೊನೆಗೊಂಡಿತು. ಈ ನಿಟ್ಟಿನಲ್ಲಿ 1983ರಲ್ಲಿ ತಮಿಳುನಾಡಿನ ರೈತರು. 1990 ರಲ್ಲಿ ತಮಿಳುನಾಡು ಸರ್ಕಾರವು ನ್ಯಾಯಮಂಡಳಿ ರಚಿಸುವಂತೆ ಸರ್ವೋಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದರು. ಈ

ಸಂಬಂಧ 1990 ಜೂನ್ 6 ರಂದು ಕೇಂದ್ರ ಸರ್ಕಾರ ಕಾವೇರಿ ಜಲವಿವಾದ ನ್ಯಾಯ ಮಂಡಳಿಯನ್ನು ರಚಿಸಿತು[17].

**ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ರಚನೆ**

ತಮಿಳುನಾಡಿನ ಒತ್ತಾಯಕ್ಕೆ ಮಣಿದು ಕೇಂದ್ರ ಸರ್ಕಾರವು ಕಾವೇರಿ ಜಲವಿವಾದ ನ್ಯಾಯಮಂಡಳಿಯನ್ನು ರಚಿಸಿದಾಗ ಕರ್ನಾಟಕದ ಜನತೆ ಎಚ್ಚೆತ್ತುಕೊಂಡು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯಾ ನಂತರದಲ್ಲಿ ಅಂದರೆ ಪ್ರಸ್ತುತದವರೆಗೆ ಕೇಂದ್ರ ಸರ್ಕಾರ ಅನುಸರಿಸಿದ ಮಲತಾಯಿ ಧೋರಣೆಯಿಂದ ಕರ್ನಾಟಕಕ್ಕೆ ಅನ್ಯಾಯವಾಗಿರುವುದು ಎಲ್ಲರಿಗೂ ತಿಳಿದ ವಿಚಾರವಾಗಿರುವುದರಿಂದ ಮುಂದಿನ ದಿನಗಳಲ್ಲಿ ಕಾವೇರಿ ನಮ್ಮ ಕೈತಪ್ಪಬಾರದು ಎಂಬ ಸದುದ್ದೇಶದಿಂದ ರೈತನಾಯಕ, ಗಾಂಧಿವಾದಿ ಜಿ.ಮಾದೇಗೌಡರು ಎಲ್ಲಾ ಪಕ್ಷಗಳ ಮತ್ತು ಸಂಘ ಸಂಸ್ಥೆಗಳ ಮುಖಂಡರ ಸಭೆಯನ್ನು ದಿನಾಂಕ 10ನೇ ಜೂನ್ 1990 ರಂದು ಏರ್ಪಡಿಸಿದರು. ಈ ಸಭೆಯಲ್ಲಿ ಎಲ್ಲಾ ಪಕ್ಷದ ಮುಖಂಡರು ಹಾಗೂ ಸಂಘ ಸಂಸ್ಥೆಗಳ ಪ್ರಮುಖರು ಸೇರಿ ಸುದೀರ್ಘವಾಗಿ ಚರ್ಚಿಸಿ ಕಾವೇರಿ ನದಿ ನೀರಿನ ವಿವಾದಕ್ಕೆ ಸಂಬಂಧಿಸಿದಂತೆ ಹಾಗೂ ರೈತರ ಕಲ್ಯಾಣಕ್ಕಾಗಿ ಸಂಘವನ್ನು ರಚಿಸಲು ನಿರ್ಣಯ ಕೈಗೊಂಡು 'ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿ' ಎಂಬ ಸಂಘವನ್ನು ರಚಿಸಲಾಯಿತು. ಈ ಸಮಿತಿಯ ಅಧ್ಯಕ್ಷರಾಗಿ ಜಿ.ಮಾದೇಗೌಡರನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಪಕ್ಷಾತೀತವಾಗಿ ಹಾಗೂ ಜಾತ್ಯಾತೀತವಾಗಿ ಎಲ್ಲರನ್ನೂ ಸಮಿತಿಯ ಸದಸ್ಯರನ್ನಾಗಿ ಮಾಡಿಕೊಳ್ಳಲಾಯಿತು[18]. ರೈತರ ಸಮಸ್ಯೆಗಳು ಗಂಭೀರ ಸಮಸ್ಯೆಗಳಾದ್ದರಿಂದ ಇಂಥವುಗಳ ವಿರುದ್ಧ ಅಹಿಂಸಾತ್ಮಕವಾಗಿ ಮತ್ತು ಕ್ರಮಬದ್ಧವಾಗಿ ಹೋರಾಟ ನಡೆಸುವುದು ಅವಶ್ಯಕವಾಗಿತ್ತು. ಈ ಸಂಬಂಧ ಹೋರಾಟಕ್ಕೆ ಜನರ ಸಂಘಟನೆ ಮತ್ತು ನಾಯಕತ್ವ ಅವಶ್ಯಕವಾಗಿತ್ತು. ಇಂತಹ ಸಂದರ್ಭದಲ್ಲಿ ಗುರುದೇವರಹಳ್ಳಿ ಮಾದೇಗೌಡರು ಸಮಿತಿಯ ಅಧ್ಯಕ್ಷರಾಗುವ ಮೂಲಕ ರೈತರನ್ನು ಸಾಮಾನ್ಯ ಜನರನ್ನು ಸಂಘಟಿಸಿ ಹೋರಾಟಕ್ಕೆ ಸ್ಪೂರ್ತಿ ನೀಡಿದರು.

**ಮಂಡ್ಯ ಜಿಲ್ಲಾ ಹಿತರಕ್ಷಣಾ ಸಮಿತಿಯ ಧ್ಯೇಯೋದ್ದೇಶಗಳು**

ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯು ರೈತರ ಕಲ್ಯಾಣಕ್ಕಾಗಿ ಅಳವಡಿಸಿಕೊಂಡಿರುವ ಅನೇಕ ಧ್ಯೇಯೋದೇಶಗಳ ಜೊತೆಗೆ ಕಾವೇರಿ ನದೀ ನೀರಿಗೆ ಸಂಬಂಧಿಸಿದಂತೆ ಈ ಕೆಳಗಿನ ಧ್ಯೇಯೋದ್ದೇಶಗಳನ್ನು ಹೊಂದಿರುವುದನ್ನು ತಿಳಿಯಬಹುದಾಗಿದೆ. ಕಾವೇರಿ ಜಲಾನಯನ ಪ್ರದೇಶದಲ್ಲಿ ಕೈಗೊಂಡಿರುವ ಎಲ್ಲಾ ಕಾಮಗಾರಿಗಳನ್ನು ತ್ವರಿಗತಿಯಲ್ಲಿ ಪೂರೈಸಲು ಹೆಚ್ಚು ಹಣವನ್ನು ಕರ್ನಾಟಕ ಸರ್ಕಾರ ಒದಗಿಸುವಂತೆ ಸೂಕ್ತ ಏರ್ಪಾಡು ಮಾಡುವುದು. ಸಮಿತಿಯ ವತಿಯಿಂದ ಕಾವೇರಿ

ನದಿಯ ನೀರಿನ ಹಂಚಿಕೆಯ ಸಂಬಂಧದಲ್ಲಿ ಕಾವೇರಿ ಜಲಾನಯನ ಪ್ರದೇಶದ ರೈತರಿಗೆ ನ್ಯಾಯಯುತವಾಗಿ ದೊರಕಬೇಕಾದ ನೀರಿನ ಪಾಲಿಗಾಗಿ ಎಲ್ಲಾ ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು[19].

ಈ ಉದ್ದೇಶಗಳೊಂದಿಗೆ ಸ್ಥಾಪನೆಯಾದ ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿಯು ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ರೈತರ ಸಮಸ್ಯೆಗಳಿಗೆ ಅಹಿಂಸಾತ್ಮಕವಾಗಿ ಹೋರಾಟ ನಡೆಸಲು ತೀರ್ಮಾನಿಸಿತು. ವಿಶೇಷವಾಗಿ ಕಾವೇರಿ ನದಿ ನೀರಿನ ಹೋರಾಟದಲ್ಲಿ ಕೇಂದ್ರ ಸರ್ಕಾರದ ಮತ್ತು ರಾಜ್ಯ ಸರ್ಕಾರದ ರೈತ ವಿರೋಧಿ ಧೋರಣೆಯ ವಿರುದ್ಧ ಹೋರಾಡಲು ಜನತೆಯನ್ನು ಸಜ್ಜಗೊಳಿಸಿದರು. ಕಾವೇರಿ ನದಿ ನೀರಿನ ವಿಚಾರದಲ್ಲಿ ರಾಜ್ಯಕ್ಕೆ ಅನ್ಯಾಯವಾಗದಂತೆ ಎಚ್ಚರವಹಿಸಿದರು. ಕಾವೇರಿ ಜಲವಿವಾದ ನ್ಯಾಯ ಮಂಡಳಿಯ ರಚನೆಯಿಂದ ತೃಪ್ತವಾಗದ ತಮಿಳುನಾಡು ಸರ್ಕಾರ ನ್ಯಾಯಮಂಡಳಿಯ ಮಧ್ಯಂತರ ಆದೇಶಕ್ಕಾಗಿ ಒತ್ತಾಯಿಸಿ ಸರ್ವೋಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿತ್ತು. ಈ ಸಂದರ್ಭದಲ್ಲಿ ಜಿ.ಮಾದೇಗೌಡರು ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ಕಾವೇರಿ ಕಣಿವೆಯ ರೈತರನ್ನು ಸದರಿ ಮೊಕದ್ದಮೆಯಲ್ಲಿ ಕಕ್ಷಿಗಾರರನ್ನಾಗಿ ಪರಿಗಣಿಸಿ ಅವರ ಮನವಿಯನ್ನೂ ಸಹ ಕೇಳಬೇಕೆಂದು ರೈತರ ಪರವಾಗಿ ಅರ್ಜಿ ಸಲ್ಲಿಸಿದರು. ಇವರ ಈ ಅರ್ಜಿಯನ್ನು ನ್ಯಾಯಾಲಯ ವಜಾ ಮಾಡಿತು. ಇದರಿಂದ ಧೃತಿಗೆಡದ ಜಿ.ಮಾದೇಗೌಡರು ಕಾನೂನು ತಜ್ಞರ ಸಲಹೆಗಳನ್ನು ಪಡೆದು ಕರ್ನಾಟಕ ಸರ್ಕಾರದ ವಕೀಲರ ಮೂಲಕ ವಾದ ಮಾಡಿಸಿದರು. ಅಂತಿಮವಾಗಿ ತೀರ್ಪು ಕರ್ನಾಟಕದ ವಿರುದ್ಧವಾಗಿ ಬಂತು. ಅದೂ ಏನೇ ಆಗಲಿ ಜಿ.ಮಾದೇಗೌಡರು ರೈತರ ಹಿತರಕ್ಷಿಸಲು ನ್ಯಾಯಾಂಗದ ಮೂಲಕ ಹೋರಾಟ ನಡೆಸಿರುವುದು ರೈತರ ಕಾಳಜಿಯ ಬಗೆಗೆ ಇರುವ ಕಾಳಜಿ ವ್ಯಕ್ತವಾಗುತ್ತದೆ. ಕೇಂದ್ರ ಸರ್ಕಾರದ ಮಲತಾಯಿ ಧೋರಣೆಯಿಂದಾಗಿ ಸ್ಥಾಪನೆಯಾದ ನ್ಯಾಯಮಂಡಳಿಯಿಂದ 1991 ಜೂನ್ 25 ರಂದು ಮಧ್ಯಂತರ ತೀರ್ಪು ಪ್ರಕಟಿಸಿತು[20]. ಈ ತೀರ್ಪಿನ ಪ್ರಕಾರ ಕರ್ನಾಟಕವು ಪ್ರತಿ ವರ್ಷ ಜೂನ್‌ನಿಂದ ಮೇ ತಿಂಗಳವರೆಗೆ ಒಟ್ಟು 205 ಟಿ.ಎಂ.ಸಿ. ನೀರನ್ನು ತಮಿಳುನಾಡಿನ ಮೆಟ್ಟೂರು ಅಣೆಕಟ್ಟೆಗೆ ಬಿಡುವಂತೆ ಆದೇಶಿಸಿತು. ಜೊತೆಗೆ ಕಾವೇರಿ ಜಲಾಯನ ಪ್ರದೇಶದಲ್ಲಿ 11.2 ಲಕ್ಷ ಎಕರೆಗಿಂತ ಹೆಚ್ಚು ಭೂ ಪ್ರದೇಶದಲ್ಲಿ ನೀರಾವರಿಯನ್ನು ವಿಸ್ತರಿಸಬಾರದೆಂಬ ಕಟ್ಟಪ್ಪಣೆಯನ್ನು ಹೊರಡಿಸಿತು[21]. ಕರ್ನಾಟಕದ ಕಾವೇರಿ ಜಲಾಶಯಗಳಲ್ಲಿ ಯಾವುದೇ ಪ್ರಮಾಣದ ನೀರಿನ ಸಂಗ್ರಹವಿರಲಿ ತಮಿಳು ನಾಡಿಗೆ 205 ಟಿ.ಎಂ.ಸಿ. ನೀರು ಬಿಡಬೇಕೆಂಬ ಅವೈಜ್ಞಾನಿಕ ತೀರ್ಪು ಕರ್ನಾಟದ ಅದರಲ್ಲೂ ಮಂಡ್ಯ ಜಿಲ್ಲೆಯ ರೈತರು ಹಾಗೂ ಸಾರ್ವಜನಿಕರನ್ನು ಕೆರಳಿಸಿತು. ಇದರಿಂದ ಕಾವೇರಿ ನದಿನೀರಿನ ವಿವಾದ ಹೊಸ ರೂಪ ಪಡೆಯಿತು. ಈ ಮಧ್ಯಂತರ ತೀರ್ಪಿನಿಂದ ಅನ್ಯಾಯಕ್ಕೆ ಒಳಗಾದ ಕರ್ನಾಟಕದ ಕಾವೇರಿ ಕಣಿವೆಯ ಜನತೆ ಮಂಡ್ಯ ಜಿಲ್ಲಾ ರೈತರ

ಹಿತರಕ್ಷಣಾ ಸಮಿತಿಯ ನೇತೃತ್ವದಲ್ಲಿ ಹೋರಾಟ ರೂಪಿಸಿತು. ಈ ಚಳವಳಿಯಲ್ಲಿ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರ ನಾಯಕತ್ವ ಮತ್ತು ಅವರು ಚಳವಳಿಯನ್ನು ಮುನ್ನಡೆಸಿದ ರೀತಿಯೇ ಉಲ್ಲೇಖಾರ್ಹವಾಗಿರುವುದನ್ನು ಸಂಶೋಧನೆಯಿಂದ ಕಾಣಬಹುದಾಗಿದೆ.

ರೈತರ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಹಲವಾರು ಉದ್ದೇಶಗಳೊಂದಿಗೆ ಅಸ್ಥಿತ್ವಕ್ಕೆ ಬಂದ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯು ಇಂದಿಗೂ ರಾಷ್ಟ್ರದ ಹಾಗೂ ರಾಜ್ಯದ ಆಕರ್ಷಣೆಯ ಸಂಘಟನೆಯಾಗಿದೆ. ಜಿ.ಮಾದೇಗೌಡರಂತಹ ಜಾತ್ಯತೀತ, ಪಕ್ಷಾತೀತ ಹಾಗೂ ಗಾಂಧೀವಾದಿ ಆದರ್ಶ ನಾಯಕರಿಂದಾಗಿ ಈ ಸಮಿತಿಯು ರಾಷ್ಟ್ರಮಟ್ಟದಲ್ಲಿ ಗುರುತಿಸಿ ಕೊಂಡಿದೆ. ತಮಿಳುನಾಡು ಹಾಗೂ ಕರ್ನಾಟಕ ಸರ್ಕಾರಕ್ಕೆ ಸಿಂಹ ಸ್ವಪ್ನವಾಗಿದೆ. ಕಾವೇರಿ ನೀರಿನ ವಿವಾದ ಭುಗಿಲೆದ್ದಾಗಲೆಲ್ಲ ಈ ಸಮಿತಿಯು ಬಾರಿ ಜನಸ್ತೋಮವನ್ನುಳ್ಳ ಅಹಿಂಸಾತ್ಮಕ ಚಳವಳಿಗೆ ತಕ್ಷಣಕ್ಕೆ ಸಜ್ಜಾಗಿ ಹೋರಾಟ ರೂಪಿಸುತ್ತದೆ. ಅತ್ಯಂತ ಶಕ್ತಿಯುತವಾದ ಸಂಘಟನೆ ಮತ್ತು ನಾಯಕತ್ವವನ್ನು ಒಳಗೊಂಡ ಈ ಸಮಿತಿಯು ಜೂನ್ 1991ರ ನ್ಯಾಯಮಂಡಳಿಯ ಮಧ್ಯಂತರ ತೀರ್ಪಿನ ವಿರುದ್ಧ 26ನೇ ಜುಲೈ 1991ರಂದು ಕರ್ನಾಟಕ ಬಂದ್‌ಗೆ ಕರೆ ನೀಡಿ ಬಂದ್ ಯಶಸ್ವಿಯಾಯಿತು[22]. 06ನೇ ಸೆಪ್ಟಂಬರ್ 1991 ರಂದು ಕರ್ನಾಟಕ ಪರ ವಕೀಲರಾದ ನಾರಿಮನ್ ಅವರು ನ್ಯಾಯ ಮಂಡಳಿಯಲ್ಲಿ ವಿಸ್ತೃತವಾದ ವಾದ ಮಂಡಿಸಿದರು. ಅಂತಿಮವಾಗಿ 22ನೇ ನವೆಂಬರ್ 1991ರಲ್ಲಿ ನ್ಯಾಯ ಮಂಡಳಿ ತನ್ನ ತೀರ್ಪನ್ನು ಪ್ರಕಟಿಸಿತು. ಈ ತೀರ್ಪಿನಿಂದ ಕರ್ನಾಟಕಕ್ಕೆ ಬಾರಿ ಅನ್ಯಾಯವಾದ್ದರಿಂದ ಪ್ರತಿಭಟನಾತ್ಮಕವಾಗಿ ಜಿ.ಮಾದೇಗೌಡರು ಕಾವೇರಿ ನದಿನೀರು ಕರ್ನಾಟಕದಿಂದ ತಮಿಳುನಾಡಿಗೆ ಹರಿಯುತ್ತಿದ್ದು ಕಾವೇರಿ ನದಿ ನೀರನ್ನು ಬಳಸಲು ಕರ್ನಾಟಕವೇನು ತಮಿಳುನಾಡಿನಿಂದ ಭಿಕ್ಷೆ ಬೇಡಬೇಕಾಗಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದರು. ಆ ಸಂದರ್ಭದಲ್ಲಿ ಸಂಸದರಾಗಿದ್ದ ಜಿ.ಮಾದೇಗೌಡರು 25ನೇ ನವೆಂಬರ್ 1991ರಲ್ಲಿ ಈ ತೀರ್ಪಿನ ವಿರುದ್ಧ ಕರ್ನಾಟಕ ಬಂದ್‌ಗೆ ಕರೆ ನೀಡಿದರು. ದಿನಾಂಕ 11ನೇ ಡಿಸೆಂಬರ್ 1991ರಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪು ಗೆಜೆಟ್ ಆದಾಗ ಇದನ್ನು ವಿರೋಧಿಸಿ ರಾಜ್ಯದಾದ್ಯಂತ ಬಂದ್ ಆಚರಿಸಲಾಯಿತು. ಮೂರು ದಿನಗಳ ಕಾಲ ನಡೆದ ಈ ಚಳವಳಿಯನ್ನು ನಿಯಂತ್ರಿಸಲು ಪೊಲೀಸರು ನಡೆಸಿದ ಗೋಲಿಬಾರ್ ಮತ್ತು ಕರ್ಫ್ಯೂನಿಂದಾಗಿ ಕರ್ನಾಟಕದ 18 ಮಂದಿ ಅಸುನೀಗಿದರು. ಆದರೆ ಮಂಡ್ಯದಲ್ಲಿ ನಡೆದ ಹೋರಾಟದಲ್ಲಿ ಜಿ.ಮಾದೇಗೌಡರು ಅನುಸರಿಸಿದ ಅಹಿಂಸಾ ಮಾರ್ಗದಿಂದಾಗಿ ಯಾವುದೇ ಸಾವು–ನೋವು ಸಂಭವಿಸಲಿಲ್ಲ ಹಾಗೂ ಸರ್ಕಾರಿ ಅಥವಾ ಖಾಸಗಿ ಆಸ್ತಿಗೆ ಚಳವಳಿಗಾರರಿಂದ ನಷ್ಟ ಉಂಟಾಗಲಿಲ್ಲ. ಅಷ್ಟೊಂದು ಶಿಸ್ತುಬದ್ಧವಾಗಿ ಹೋರಾಟವನ್ನು ಜಿ.ಮಾದೇಗೌಡರು ರೂಪಿಸಿದರು. ಈ ಹೋರಾಟದಲ್ಲಿ ಜನತೆ "ರಕ್ತ ಕೊಟ್ಟರು ನೀರು

ಬಿಡೆವು" ಎಂಬ ಘೋಷಣೆಯೊಂದಿಗೆ ಹೋರಾಟವನ್ನು ಶಾಂತಿ ರೀತಿಯಿಂದ ಮುಂದುವರೆಸಿದರು. ಕರ್ನಾಟಕದಿಂದ ತಮಿಳುನಾಡಿಗೆ ನೀರು ಹರಿಯದಿದ್ದರೆ ನ್ಯಾಯಾಂಗ ನಿಂದನೆ ಎದುರಿಸಬೇಕಾಗುತ್ತದೆ ಎಂದು ತಿಳಿಸಿದ ಅಂದಿನ ಪ್ರಧಾನಮಂತ್ರಿ ಪಿ.ವಿ.ನರಸಿಂಹರಾವ್ ಅವರು ಅಂದಿನ ಮಂಡ್ಯ ಜಿಲ್ಲೆಯ ಸಂಸದ ಜಿ.ಮಾದೇಗೌಡರನ್ನು ಒಳಗೊಂಡಂತೆ ಕರ್ನಾಟಕದ ಕಾಂಗ್ರೆಸ್‌ನ ಎಲ್ಲಾ ಸಂಸದರನ್ನು ದೆಹಲಿಗೆ ಆಹ್ವಾನಿಸಿ ಚರ್ಚಿಸಿದರು. ಈ ಸಂದರ್ಭದಲ್ಲಿ ಜಿ.ಮಾದೇಗೌಡರು ಕಾವೇರಿ ನೀರನ್ನು ತಮಿಳುನಾಡಿಗೆ ಹರಿಸಲು ಸಾಧ್ಯವಿಲ್ಲವೆಂದು ತಿಳಿಸಿದರು. ಇದಕ್ಕೆ ಕೇಂದ್ರ ಸರ್ಕಾರ ಮಣಿಯದಿದ್ದಾಗ ಲೋಕಸಭಾ ಸ್ಥಾನಕ್ಕೆ ಜಿ.ಮಾದೇಗೌಡರು ರಾಜಿನಾಮೆ ನೀಡಿ ಬೀದಿಗಿಳಿದು ಹೋರಾಟವನ್ನು ಆರಂಭಿಸಿದ್ದಾರೆ. ಇದೇ ವಿವಾದದಿಂದಾಗಿ ಅಂದಿನ ಮುಖ್ಯಮಂತ್ರಿ ಎಸ್.ಬಂಗಾರಪ್ಪ ಅವರು ಮುಖ್ಯಮಂತ್ರಿ ಸ್ಥಾನಕ್ಕೆ ರಾಜಿನಾಮೆ ನೀಡಿದರು. ಇಷ್ಟೆಲ್ಲಾ ಪ್ರಯತ್ನಗಳು ನಡೆದರೂ ಆದೇಶ ರದ್ದಾಗಲಿಲ್ಲ.

1991ರ ನ್ಯಾಯಮಂಡಳಿಯ ತೀರ್ಪಿನ ಮಧ್ಯಂತರ ಆದೇಶಕ್ಕೆ ಅನುಗುಣವಾಗಿ ಅಂದಿನ ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಗಳಾದ ಹೆಚ್.ಡಿ.ದೇವೇಗೌಡರು ದಿನಾಂಕ 27ನೇ ಆಗಸ್ಟ್ 1995 ರಂದು ಕೃಷ್ಣರಾಜ ಸಾಗರ ಅಣೆಕಟ್ಟೆಯಿಂದ 5 ಟಿ.ಎಂ.ಸಿ. ನೀರನ್ನು ತಮಿಳುನಾಡಿಗೆ ಹರಿಸಿದರು. ಮೊದಲಿನಿಂದಲೂ ನ್ಯಾಯಮಂಡಲಿ ಆದೇಶವನ್ನು ಪ್ರಬಲವಾಗಿ ವಿರೋಧಿಸುತ್ತಿದ್ದ 1991ರ ನ್ಯಾಯಮಂಡಲಿ ತೀರ್ಪಿನ ಮಧ್ಯಂತರ ಆದೇಶಕ್ಕೆ ಅನುಗುಣವಾಗಿ ಅಂದಿನ ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಗಳಾದ ಹೆಚ್.ಡಿ.ದೇವೇಗೌಡರು ದಿನಾಂಕ 27ನೇ ಆಗಸ್ಟ್ 1995 ರಂದು ಕೃಷ್ಣರಾಜ ಸಾಗರ ಅಣೆಕಟ್ಟೆಯಿಂದ 5 ಟಿ.ಎಂ.ಸಿ. ನೀರನ್ನು ತಮಿಳುನಾಡಿಗೆ ಹರಿಸಿದರು. ಮೊದಲಿನಿಂದಲೂ ನ್ಯಾಯಮಂಡಲಿ ಆದೇಶವನ್ನು ಪ್ರಬಲವಾಗಿ ವಿರೋಧಿಸುತ್ತಿದ್ದ ಹೆಚ್.ಡಿ.ದೇವೇಗೌಡರು ಏಕಾಏಕಿ ಯಾರ ಗಮನಕ್ಕೂ ತರದೇ ತಮಿಳುನಾಡಿಗೆ 5 ಟಿ.ಎಂ.ಸಿ. ನೀರು ಬಿಟ್ಟಿದ್ದು ಮಂಡ್ಯ, ಮೈಸೂರು, ಬೆಂಗಳೂರು ಭಾಗದ ಜನತೆಯನ್ನು ಕೆರಳಿಸಿತು ಹಾಗೂ ಪ್ರಶ್ನಿಸುವಂತಾಯಿತು. ಈ ಸಂದರ್ಭದಲ್ಲಿ ಸಂಸದರಾಗಿದ್ದ ಜಿ.ಮಾದೇಗೌಡರು, ಕರ್ನಾಟಕ ಪ್ರದೇಶ ಕಾಂಗ್ರೆಸ್ (ಐ) ಸಮಿತಿಯಲ್ಲಿ ಪ್ರಭಾವಿ ನಾಯಕರಾಗಿದ್ದ ಆಸ್ಕರ್ ಫರ್ನಾಂಡೀಸ್, ಎಸ್.ಎಂ.ಕೃಷ್ಣ, ಎಂ.ಎಸ್.ಆತ್ಮಾನಂದ ಇನ್ನೂ ಮುಂತಾದ ಪ್ರಮುಖ ರೈತ ನಾಯಕರು ಜಿ.ಮಾದೇಗೌಡರ ನೇತೃತ್ವದಲ್ಲಿ ದಿಟ್ಟತನದಿಂದ ಹೋರಾಟ ನಡೆಸಿ ತಮಿಳುನಾಡಿಗೆ ಹರಿಯುತ್ತಿದ್ದ ನೀರನ್ನು ನಿಲ್ಲಿಸುವಲ್ಲಿ ಯಶಸ್ವಿಯಾದರು. ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಜಿ.ಮಾದೇಗೌಡರ ನೇತೃತ್ವದಲ್ಲಿ ವಿವಿಧ ಸಂಘ ಸಂಸ್ಥೆಗಳು ಹಾಗೂ ಪ್ರಮುಖ ರೈತ ನಾಯಕರಾದ ಪ್ರೊ. ಎಂ.ಡಿ.ನಂಜುಂಡಸ್ವಾಮಿ, ಹೆಚ್.ಶ್ರೀನಿವಾಸ್, ಎನ್.ಸುಂದರೇಶ್ ಹಾಗೂ ರಾಜಕೀಯ ಮುಖಂಡರಾದ ಜೆ.ಹೆಚ್.ಪಟೇಲ್, ಆರ್.ಗುಂಡೂರಾವ್, ಎಂ.ಪಿ.ಪ್ರಕಾಶ್,

ಬಿ.ಎಸ್.ಬಚ್ಚೇಗೌಡ, ಎಂ.ಸಿ.ನಾಣಯ್ಯ, ಪಿ.ಜಿ.ಆರ್.ಸಿಂಧ್ಯಾ, ಬಿ.ಎಸ್.ಯಡಿಯೂರಪ್ಪ, ವಾಟಾಳ್ ನಾಗರಾಜ್, ಡಿ.ಬಿ.ಚಂದ್ರೇಗೌಡ ಸೇರಿದಂತೆ ನಾಡಿನ ಎಲ್ಲಾ ರೈತ ಮುಖಂಡರು, ರಾಜಕೀಯ ನಾಯಕರು ಮಂಡ್ಯದ ಸರ್.ಎಂ.ವಿಶ್ವೇಶ್ವರಯ್ಯ ಕ್ರೀಡಾಂಗಣದಲ್ಲಿ ಸುಮಾರು 50 ಸಾವಿರಕ್ಕೂ ಮೇಲ್ಪಟ್ಟ ಜನತಾ ಸಮಾವೇಶವು ಜರುಗಿ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿ ಆಶ್ರಯದಲ್ಲಿ ಸೇರಿದ ಐತಿಹಾಸಿಕ ಸಭೆಯ ಸಮಾವೇಶವಾಗಿ ದಾಖಲಾಯಿತು. ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿ ದಿನಾಂಕ 31ನೇ ಆಗಸ್ಟ್ 1995ನೇ ಗುರುವಾರ ಸಂಜೆ 3 ಗಂಟೆಗೆ ನಗರದ ಸಿಲ್ವರ್ ಜ್ಯೂಬಿಲಿ ಪಾರ್ಕಿನಲ್ಲಿ ನಡೆದ ಭಾರಿ ಬಹಿರಂಗ ಸಭೆಯಲ್ಲಿ ಜಿ.ಮಾದೇಗೌಡರ ನೇತೃತ್ವದಲ್ಲಿ ಸರ್ವಾನುಮತದಿಂದ ಕೈಗೊಂಡ ನಿರ್ಣಯಗಳು. ರಾಜ್ಯ ವಿಧಾನ ಮಂಡಲದ ಎರಡು ಸದನಗಳು ಸರ್ವಾನುಮತದಿಂದ ಕೈಗೊಂಡ ನಿರ್ಣಯವನ್ನು ನಿರ್ಲಕ್ಷಿಸಿ ಅನಾವೃಷ್ಟಿಯ ನಡುವೆಯೂ ನೀರನ್ನು ತಮಿಳುನಾಡಿಗೆ ಬಿಡಲಾಗುತ್ತಿರುವುದನ್ನು ಸರ್ಕಾರ ಕೂಡಲೇ ನಿಲ್ಲಿಸಬೇಕೆಂದು ಸಭೆಯು ಒತ್ತಾಯಿಸುತ್ತದೆ. ರಾಷ್ಟ್ರೀಯ ಜಲನೀತಿ ರೂಪಿಸಿ ನ್ಯಾಯ ಮಂಡಳಿಗೆ ಮಾರ್ಗಸೂಚಿಗಳನ್ನು ಒದಗಿಸುವುದು ಹಾಗೂ ಕಾವೇರಿ ನ್ಯಾಯ ಮಂಡಳಿಯ ಕಾರ್ಯಾಚರಣೆಯನ್ನು ಅಮಾನತ್ತುಗೊಳಿಸಬೇಕೆಂದು ಈ ಸಭೆ ಕೇಂದ್ರ ಸರ್ಕಾರವನ್ನು ಒತ್ತಾಯಿಸುತ್ತದೆ. ಕಾವೇರಿ ಜಲಾನಯನ ಪ್ರದೇಶದ ಅಣೆಕಟ್ಟೆಗಳಿಂದ ರಾತ್ರೋ ರಾತ್ರಿ ಮುಚ್ಚುಮರೆಯಿಂದ 5 ಟಿ.ಎಂ.ಸಿ. ನೀರನ್ನು ರಾಜ್ಯ ಸರ್ಕಾರವು ತಮಿಳುನಾಡಿಗೆ ಬಿಟ್ಟು ಕೋಟ್ಯಂತರ ರೂಪಾಯಿ ನಷ್ಟವಾಗಿರುವ ಪೂರ್ಣ ಖರ್ಚನ್ನು ಸರ್ಕಾರದ ಖಜಾನೆಯಿಂದಲೇ ತೆರಿಗೆ ತುಂಬಿಕೊಡುವಂತೆ ರಾಜ್ಯ ಸರ್ಕಾರ ಒಪ್ಪಿ ಸರ್ಕಾರಿ ಆದೇಶ ಹೊರಡಿಸಬೇಕೆಂದು ಈ ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನಿಸಲಾಯಿತು. ಕಾವೇರಿ ಜಲಾನಯನ ಪ್ರದೇಶದಲ್ಲಿರುವ ಎಲ್ಲಾ ನಗರ ಹಾಗೂ ಗ್ರಾಮೀಣ ಪ್ರದೇಶಗಳ ಜನರಿಗೆ ಕುಡಿಯುವ ನೀರಿನ ತೊಂದರೆಯುಂಟಾದರೆ ಅದಕ್ಕೂ ಸಹ ರಾಜ್ಯ ಸರ್ಕಾರವೇ ಜವಾಬ್ದಾರರಾಗಬೇಕೆಂದು ಈ ಸಭೆಯಲ್ಲಿ ಸರ್ವಾನುಮತ ದಿಂದ ತೀರ್ಮಾನಿಸಲಾಯಿತು.[23] ಮಾನ್ಯ ಮುಖ್ಯಮಂತ್ರಿಗಳು ತಮಗೆ ಎಲ್ಲಾ ಜಿಲ್ಲೆಯವರು ಗೊತ್ತು. ಕೆಲವು ವ್ಯಕ್ತಿಗಳು ರಾಜಕೀಯ ದುರುದ್ದೇಶದಿಂದ ಶಾಲಾ ಮಕ್ಕಳನ್ನು ಎತ್ತಿ ಕಟ್ಟಿ ಇಲ್ಲಸಲ್ಲದ ಪ್ರಚೋದನೆಯನ್ನು ಹಬ್ಬಿಸುತ್ತಿದ್ದಾರೆ ಎಂಬ ಬೇಜವಾಬ್ದಾರಿ ಹೇಳಿಕೆಯನ್ನು ಸಭೆ ಸರ್ವಾನುಮತದಿಂದ ಖಂಡಿಸುತ್ತದೆ. ಕಾವೇರಿ ಜಲಾನಯನ ಪ್ರದೇಶದ ಜಲಾಶಯಗಳಿಂದ ಇದೇ ರೀತಿ ರಾತ್ರೋ ರಾತ್ರಿ ಅಕ್ರಮವಾಗಿ ನೀರು ಬಿಟ್ಟ ಸಂದರ್ಭದಲ್ಲಿ ಎಲ್ಲಾ ನಗರದ ಮತ್ತು ಗ್ರಾಮೀಣ ಪ್ರದೇಶದ ಜನತೆಯನ್ನು ಜಾಗೃತಿಗೊಳಿಸುವ ಸಭೆ ಸಮಾರಂಭಗಳನ್ನು ಕೃಷ್ಣ ಕಾವೇರಿ ಜಲಾನಯನ ಸಮನ್ವಯ ಸಮಿತಿ ಆಶ್ರಯದಲ್ಲಿ ನಡೆಸುವಂತೆಯೂ ಸರ್ಕಾರದ ವಿರುದ್ಧ ಒಳಗೊಂಡಂತೆ ಅಸಹಕಾರ ಚಳವಳಿಯನ್ನು ಹಮ್ಮಿಕೊಳ್ಳುವಂತೆಯೂ ಹಾಗೂ ಎಲ್ಲಾ ಬೇಡಿಕೆಗಳು

ಈಡೇರುವವರೆವಿಗೂ ರಾಜ್ಯಾದ್ಯಂತ ಶಾಂತಿಯುತ ಹೋರಾಟವನ್ನು ಮುಂದುವರಿಸ ಬೇಕೆಂದು ಈ ಸಭೆಯು ಸರ್ವಾನುಮತದಿಂದ ತೀರ್ಮಾನಿಸುತ್ತದೆ ಎಂದು ನಿರ್ಣಯ ಗಳನ್ನು ಕೈಗೊಳ್ಳಲಾಯಿತು.

ದಿನಾಂಕ 03ನೇ ಸೆಪ್ಟಂಬರ್ 1995 ರಂದು ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯು ರೈತ ಸಭಾಂಗಣದಲ್ಲಿ ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ಎಲ್ಲಾ ರಾಜಕೀಯ ಪಕ್ಷಗಳ ಹಾಗೂ ಸಂಘ ಸಂಸ್ಥೆಗಳ ಪ್ರತಿನಿಧಿಗಳ ನೇತೃತ್ವದಲ್ಲಿ ಸಭೆ ಸೇರಿ ಕೈಗೊಂಡ ನಿರ್ಣಯಗಳು. ರಾಷ್ಟ್ರೀಯ ಜಲನೀತಿ ರೂಪಿತವಾಗುವವರೆವಿಗೆ ಕಾವೇರಿ ನ್ಯಾಯ ಮಂಡಳಿಯ ಕಾರ್ಯಕಲಾಪಗಳನ್ನು ಸ್ಥಗಿತಗೊಳಿಸಬೇಕೆಂದು ಸಭೆಯು ತೀರ್ಮಾನಿಸಿತು. ರಾಜ್ಯದ ನೀರಾವರಿ ಸಮಸ್ಯೆಗಳ ಬಗ್ಗೆ ಪರಿಹಾರ ಕಂಡುಕೊಳ್ಳಲು ಕೃಷ್ಣ ಜಲಾನಯನ ಪ್ರದೇಶದಲ್ಲಿ ಯಾವುದೇ ಕಾಮಗಾರಿಗಳು ಇದುವರೆವಿಗೂ ನಡೆಯದೆ ಕಾಮಗಾರಿಯು 2000ನೇ ಇಸವಿಯ ಒಳಗಡೆ ಕೆಲಸ ಸಂಪೂರ್ಣವಾಗಬೇಕಾದ್ದರಿಂದ ರಾಜ್ಯದ ಎಲ್ಲಾ ಸಂಸದರು, ಶಾಸಕರು ಹಾಗೂ ಇತರೆ ಮುಖಂಡರ ಸಭೆಯನ್ನು ಕರೆಯಲು ಕಾವೇರಿ ಕೃಷ್ಣ ಸಮನ್ವಯ ಸಮಿತಿ ಅಧ್ಯಕ್ಷರಾದ ಜಿ.ಮಾದೇಗೌಡರಿಗೆ ಅಧಿಕಾರವನ್ನು ನೀಡಲಾಯಿತು. 27ನೇ ಜುಲೈ 1992ರ ಮೈಸೂರಿನ ಜನಾಂದೋಲನ ಸಭೆಯಲ್ಲಿ ಹೆಚ್.ಡಿ.ದೇವೇಗೌಡರು. ನ್ಯಾಯ ಮಂಡಳಿಯ ಸದಸ್ಯರು ಸ್ವಯಂ ಪ್ರೇರಣೆಯಿಂದ ರಾಜೀನಾಮೆ ನೀಡದಿದ್ದರೆ ನ್ಯಾಯಮಂಡಳಿಯ ಕಾರ್ಯಕಲಾಪಗಳನ್ನು ಬಹಿಷ್ಕರಿಸಿ ಎಂದು ಸರ್ಕಾರಕ್ಕೆ ಕರೆಕೊಟ್ಟಿದ್ದರು[24]. ಈ ಮೇಲಿನ ನಿರ್ಣಯಗಳೊಂದಿಗೆ ಸಭೆಯು ಅಂತ್ಯಗೊಂಡಿತು.

1995 ರಿಂದ 2000ವರೆಗೆ ವರುಣನ ಕೃಪೆಯು ಕರ್ನಾಟಕದ ಪಾಲಿಗೆ ಉತ್ತಮವಾಗಿದ್ದರಿಂದ ಕಾವೇರಿ ವಿವಾದ ಕಂಡುಬರಲಿಲ್ಲ. ಈ ಅವಧಿಯಲ್ಲಿ ತಮಿಳುನಾಡಿನ ನಿರೀಕ್ಷೆಗಿಂತಲೂ ಹೆಚ್ಚು ನೀರು ಹರದಿದ್ದುದರಿಂದ ತಮಿಳುನಾಡು ನೀರಿಗಾಗಿ ಕೇಂದ್ರದ ಅಥವಾ ಕರ್ನಾಟಕ ರಾಜ್ಯದ ಮುಂದೆ ಅಹವಾಲು ಸಲ್ಲಿಸಿರಲಿಲ್ಲ. ಆದ ಕಾರಣ ಎರಡು ರಾಜ್ಯಗಳ ಜನತೆ ಸಮೃದ್ಧಿಯಿಂದ ಜೀವನ ನಡೆಸುತ್ತಾ ಕೃಷಿ ಚಟುವಟಿಕೆಯಲ್ಲಿ ನಿರತರಾಗಿದ್ದರು. 2001ನೇ ಇಸವಿಯಲ್ಲಿ ಕರ್ನಾಟಕ ಭೀಕರ ಸ್ವರೂಪದ ಬರಗಾಲವನ್ನು ಅನುಭವಿಸಿತು. ದೀರ್ಘಕಾಲ ಮಳೆ ಇಲ್ಲದೇ ಕಾವೇರಿ ಕಣಿವೆಯ ಅಣೆಕಟ್ಟೆಗಳಲ್ಲಿ ಕೃಷ್ಣರಾಜ ಸಾಗರ, ಕಬಿನಿ, ಹೇಮಾವತಿ ಮತ್ತು ಹಾರಂಗಿ ಅಣೆಕಟ್ಟೆಗಳು ನೀರಿನ ಕೊರತೆ ಕಂಡುಬಂದಿತು. ಕಾವೇರಿ ನದಿ ಬರಡಾಯಿತು. ಕರ್ನಾಟಕದ ಜನತೆ ವಿಶೇಷವಾಗಿ ಮಂಡ್ಯ, ಮೈಸೂರು, ಹಾಸನ ಜಿಲ್ಲೆಗಳಲ್ಲಿ ಕೃಷಿ ಹಾಗೂ ಜನ ಜಾನುವಾರುಗಳಲ್ಲಿ ಕುಡಿಯುವ ನೀರಿಗೆ ತೊಂದರೆ ಉಂಟಾಯಿತು. ಬೆಂಗಳೂರಿನ ಜನತೆಗೆ ಕುಡಿಯುವ ನೀರಿಗೆ ಹಾಹಾಕಾರ ಬಂದೊದಗಿತು. ಇಂತಹ

ಸಂದಿಗ್ಧ ಸಮಯದಲ್ಲಿ ತಮಿಳುನಾಡು ಸರ್ಕಾರ ದಿನಾಂಕ 09ನೇ ಜುಲೈ 2002ರಂದು ಸುಪ್ರಿಂಕೋರ್ಟ್‌ಗೆ ದಾವೆ ಹೂಡಿ 2001ರಲ್ಲಿ ಬಾಕಿ ಉಳಿಸಿಕೊಂಡಿರುವ ನೀರನ್ನು ಕರ್ನಾಟಕ ಸರ್ಕಾರ ಬಿಡಬೇಕೆಂದು ಕೋರಿತು. ದಿನಾಂಕ 11ನೇ ಜುಲೈ 2002ರಂದು ಕರ್ನಾಟಕ ಸರ್ಕಾರವು ಅರ್ಜಿ ಸಲ್ಲಿಸಿ ಕಾವೇರಿ ಅಣೆಕಟ್ಟುಗಳಲ್ಲಿ ನೀರಿನ ಸಂಗ್ರಹವಿಲ್ಲದ್ದನ್ನು ನ್ಯಾಯಾಲಯಕ್ಕೆ ಮನವರಿಕೆ ಮಾಡಿಕೊಟ್ಟಿತು. ಅದರೂ ಸಹ ದಿನಾಂಕ 03ನೇ ಸೆಪ್ಟಂಬರ್ 2002ರಂದು ಕರ್ನಾಟಕದ ವಿರುದ್ಧ ತಮಿಳುನಾಡಿನ ಪರವಾಗಿ ಎಂಬಂತೆ ಪ್ರತಿದಿನ ಕರ್ನಾಟಕವು ತಮಿಳುನಾಡಿನ ಮೆಟ್ಟೂರು ಅಣೆಕಟ್ಟೆಗೆ 1.25 ಟಿ.ಎಂ.ಸಿ. ನೀರು ಬಿಡಬೇಕೆಂದು ನ್ಯಾಯಾಲಯ ಆದೇಶಿಸಿತು[25].

ಸರ್ವೋಚ್ಚ ನ್ಯಾಯಾಲಯದ ಈ ಆದೇಶದಿಂದ ಮಂಡ್ಯ ಜಿಲ್ಲೆಯ ರೈತರಿಗೆ ಬರಸಿಡಿಲು ಬಡಿದಂತಾಯಿತು. ಜಿ.ಮಾದೇಗೌಡರ ನೇತೃತ್ವದಲ್ಲಿ ಕಾವೇರಿ ನೀರಿನ ತೀರ್ಪಿನ ವಿರೋಧಿ ಚಳವಳಿಗೆ ಗ್ರಾಮಾಂತರ ಜನತೆ, ಮಹಿಳೆಯರು, ವಿದ್ಯಾರ್ಥಿಗಳು, ವರ್ತಕರು, ಕಲಾವಿದರು, ಸಾಹಿತಿಗಳು, ವಕೀಲರು, ಸಂಘ–ಸಂಸ್ಥೆಗಳು, ರೈತ ಸಂಘದ ನಾಯಕರು ಭಾಗವಹಿಸಿ ನ್ಯಾಯಾಲಯದ ನಿರ್ಧಾರವನ್ನು ವಿರೋಧಿಸಿದರು. ತಕ್ಷಣಕ್ಕೆ ಕಾವೇರಿ ಸಭೆ ಕರೆಯಬೇಕೆಂದರು. ಇದಕ್ಕೆ ರೈತ ಹಿತರಕ್ಷಣಾ ಸಮಿತಿಯ ಹೋರಾಟವು ಜಿ.ಮಾದೇಗೌಡರ ನೇತೃತ್ವದಲ್ಲಿ ಎಸ್.ಎಂ.ಕೃಷ್ಣ ಸರ್ಕಾರದ ಮೇಲೆ ಒತ್ತಡ ಹೇರಿದ್ದೆ ಕಾರಣವೆಂದು ಹೇಳಬಹುದು. ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರು ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರಿಗೆ ಪತ್ರ ಬರೆದು ಮನವಿ ಮಾಡಿದರು ಹಾಗೂ ಸಚಿವ ಸಂಪುಟ ಸಭೆಯಲ್ಲಿ ರಾಜ್ಯದ ಹಿತರಕ್ಷಣೆಗೆ ತಾವು ಯಾವುದೇ ತ್ಯಾಗಕ್ಕೂ ಸಿದ್ಧ ಎಂದು ಹೇಳಿದರು. ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರು ಕರೆದಿದ್ದ ಸರ್ವ ಪಕ್ಷ ಸಭೆಯಲ್ಲಿ ಜಿ.ಮಾದೇಗೌಡರು ಸೇರಿದಂತೆ ಪ್ರಮುಖ ರೈತ ನಾಯಕರು ಹಾಗೂ ರಾಜಕೀಯ ನಾಯಕರುಗಳಾದ ಎಂ.ಎಸ್.ಆತ್ಮಾನಂದ, ಬಿ.ಟಿ.ಶ್ರೀನಿವಾಸಗೌಡ, ಕೆ.ಎಸ್.ಪುಟ್ಟಣ್ಣಯ್ಯ, ಪ್ರೊ. ಎಂ.ಡಿ.ನಂಜುಂಡಸ್ವಾಮಿ, ಪಿ.ಜಿ.ಆರ್. ಸಿಂಧ್ಯಾ ಭಾಗವಹಿಸಿ ಯಾವುದೇ ಕಾರಣಕ್ಕೂ ತಮಿಳುನಾಡಿಗೆ ನೀರು ಬಿಡಬಾರದು ಎಂದು ಆಗ್ರಹಿಸಿದರು. ಇದಕ್ಕೆ ಮುಖ್ಯಮಂತ್ರಿಗಳು ನೀರು ಬಿಡುವುದಿಲ್ಲವೆಂದು ಆಶ್ವಾಸನೆ ನೀಡಿದರು. ಸರ್ವಪಕ್ಷ ಸಭೆ ಮುಕ್ತಾಯವಾದ ಬಳಿಕ ರಾತ್ರಿ ಸಂಪುಟ ಸಭೆ ಸೇರಿ ನೀರು ಬಿಡುವುದರ ಬಗ್ಗೆ ಸಾಧಕ–ಬಾಧಕಗಳನ್ನು ಚರ್ಚಿಸಲಾಯಿತು. ಹಲವು ಪ್ರತಿರೋಧಗಳ ನಡವೆಯೂ ಸುಪ್ರೀಂ ಕೋರ್ಟ್ ತೀರ್ಪಿನ ಅನ್ವಯ ಕರ್ನಾಟಕ ಕೃಷ್ಣರಾಜ ಸಾಗರ ಅಣೆಕಟ್ಟೆಯಿಂದ ತಮಿಳುನಾಡಿನ ಮೆಟ್ಟೂರು ಅಣೆಕಟ್ಟೆಗೆ ನೀರನ್ನು ಹರಿಸಲಾಯಿತು.

ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ದಿನಾಂಕ 05ನೇ ಸೆಪ್ಟಂಬರ್ 2002ರಂದು ಮಂಡ್ಯ ಜಿಲ್ಲಾ ಹಿತರಕ್ಷಣಾ ಸಮಿತಿಯು ತುರ್ತು ಸಭೆ ಕರೆದು ತಮಿಳುನಾಡಿಗೆ ನೀರು

ಬಿಡುವುದನ್ನು ವಿರೋಧಿಸಿ ಜಿಲ್ಲೆಯಾದ್ಯಂತ ಹೋರಾಟ ನಡೆಸಲು ನಿರ್ಣಯ ಕೈಗೊಳ್ಳಲಾಯಿತು. ಸಮಿತಿಯ ನಿರ್ಣಯದಂತೆ ದಿನಾಂಕ 6ನೇ ಸೆಪ್ಟಂಬರ್ 2002ರಂದು ಸಿಲ್ವರ್ ಜ್ಯೂಬಿಲಿ ಪಾರ್ಕ್‌ನಲ್ಲಿ ಸದರಿ ಉಪವಾಸ ಸತ್ಯಾಗ್ರಹ ಪ್ರಾರಂಭಿಸಲಾಯಿತು. ದಿನಾಂಕ 07ನೇ ಸೆಪ್ಟಂಬರ್ 2002 ರಂದು ಮಂಡ್ಯ ಜಿಲ್ಲಾ ಬಂದ್‌ಗೆ ಕರೆ ನೀಡಿ ಕೇಂದ್ರ ಸರ್ಕಾರದ ಕಛೇರಿಗಳ ಮುಂದೆ ಪಿಕೆಟಿಂಗ್ ನಡೆಸಲಾಯಿತು. ಈ ಎಲ್ಲಾ ಸಂದರ್ಭಗಳಲ್ಲೂ ಜಿ.ಮಾದೇಗೌಡರು ಯಾವುದೇ ರಾಜಕೀಯ ಮರ್ಜಿಗೆ ಒಳಗಾಗದೇ ನ್ಯಾಯಾಲಯದ ತೀರ್ಪನ್ನು ವಿರೋಧಿಸುವ ಮೂಲಕ ರೈತರ ಹಿತ ಕಾಪಾಡುವ ದಿಟ್ಟತನ ತೋರಿಸಿದರು. ರೈತರು ವಿದ್ಯಾರ್ಥಿಗಳು ಹಾಗೂ ಮಹಿಳೆಯರು ಬೀದಿಗಿಳಿದು ಹೋರಾಟ ಮಾಡಿದರು. ತಮಿಳುನಾಡಿಗೆ ಹರಿಯುತ್ತಿರುವ ನೀರು ನಿಲ್ಲದೇ ಇದ್ದಾಗ ಜಿ.ಮಾದೇಗೌಡರು ಅಹಿಂಸಾತ್ಮಕವಾಗಿ ಉಗ್ರ ಪ್ರತಿಭಟನೆ ಮಾಡುವಂತೆ ರೈತ ಸಮುದಾಯಕ್ಕೆ ಕರೆಕೊಟ್ಟರು. ಈ ಕರೆಗೆ ಓಗೊಟ್ಟ ಜಿಲ್ಲೆಯ ಜನತೆ ಜಾಗೃತಿಗೊಂಡು ಹೋರಾಟದಲ್ಲಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು. ಚಳವಳಿಯ ಕಾವು ಜಿಲ್ಲೆಯಾದ್ಯಂತ ವ್ಯಾಪಕವಾಗಿ ಹರಡಿತು. ಈ ಚಳುವಳಿಯು ದಿನಾಂಕ 6 ನೇ ಸೆಪ್ಟಂಬರ್ 2002 ರಿಂದ ಪುನರಾರಂಭವಾಗಿ 22ನೇ ನವೆಂಬರ್ 2002ರ ತನಕ ಒಟ್ಟು 76 ದಿವಸಗಳು ನಡೆಯಿತು. ಇಷ್ಟೆಲ್ಲಾ ಹೋರಾಟಗಳು, ಧರಣಿಗಳು, ಸತ್ಯಾಗ್ರಹಗಳು ಹಾಗೂ ಮೆರವಣಿಗೆಗಳು ನಡೆದರೂ ತಮಿಳುನಾಡಿಗೆ ಹರಿಯುವ ನೀರನ್ನು ಕರ್ನಾಟಕ ಸರ್ಕಾರ ನಿಲ್ಲಿಸದಿದ್ದುದರ ವಿರುದ್ಧ ದಿನಾಂಕ 18ನೇ ಸೆಪ್ಟಂಬರ್ 2002ರಂದು ಮೈಸೂರು ತಾಲ್ಲೂಕಿನ ಬೀಚನಹಳ್ಳಿ ಗ್ರಾಮದ ರೈತನಾಯಕ, ಗ್ರಾಮ ಪಂಚಾಯಿತಿ ಸದಸ್ಯರಾದ ಗುರುಸ್ವಾಮಿ ಸೇರಿದಂತೆ ಐದು ಮಂದಿ ಕಬಿನಿ ಜಲಾಶಯಕ್ಕೆ ಧುಮುಕಿದರು. ಇವರಲ್ಲಿ ನಾಲ್ಕು ಜನರನ್ನು ರಕ್ಷಣೆ ಮಾಡಲಾಯಿತು. ಆದರೆ ಗುರುಸ್ವಾಮಿ ಅವರು ಕಬಿನಿ ಜಲಾಶಯದಲ್ಲಿ 100 ಮೀಟರ್‌ವರೆಗೆ ತೇಲುತ್ತಾ ಹೋಗಿ ಆತ್ಮಾಹುತಿಯಾದರು[26]. ಈ ವಿಷಯ ರಾಜ್ಯದಾದ್ಯಂತ ಹರಡಿ ಜನತೆ ಮತ್ತಷ್ಟು ಆಕ್ರೋಶಗೊಂಡು ತಾಳ್ಮೆ ಕಳೆದುಕೊಂಡರು. ಪರಿಸ್ಥಿತಿಯನ್ನು ಅವಲೋಕಿಸಿದ ಸರ್ಕಾರ ನೀರಿನ ಹರಿವಿನ ಪ್ರಮಾಣವನ್ನು ಕಡಿಮೆ ಮಾಡಿತು. ಕಬಿನಿ ಜಲಾಶಯಗಳ ಹೋರಾಟದಲ್ಲಿ ಹುತಾತ್ಮ ಗುರುಸ್ವಾಮಿ ನಾಯಕನಾದರೆ ರೈತರ ನಾಯಕ ಜಿ.ಮಾದೇಗೌಡರು ಕಾವೇರಿ ಚಳವಳಿಯಲ್ಲಿ ವಿಭಿನ್ನ ನಾಯಕರಾಗಿ ಹೊರಹೊಮ್ಮಿದರು.

ದಿನಾಂಕ 19ನೇ ಸೆಪ್ಟಂಬರ್ 2002ರಂದು ಮಂಡ್ಯ ಜಿಲ್ಲಾಧಿಕಾರಿಗಳ ಕಛೇರಿ ಎದುರು ಪಿಕೆಟಿಂಗ್ ನಡೆಸುತ್ತಿದ್ದ ಜಿಲ್ಲಾ ರೈತ ಹಿತರಕ್ಷಣಾ ಸಮಿತಿ ಅಧ್ಯಕ್ಷರಾದ ಜಿ.ಮಾದೇಗೌಡರು ಬಿ.ಟಿ.ಶ್ರೀನಿವಾಸಗೌಡ, ಎಂ.ಎಸ್.ಆತ್ಮಾನಂದ, ಕೆ.ಟಿ.ಶ್ರೀಕಂಠೇಗೌಡ, ಎನ್.ರಾಜು ಸೇರಿದಂತೆ 141 ಮಂದಿ ರೈತರನ್ನು ಬಂಧಿಸಿ ಬಿಡುಗಡೆಗೊಳಿಸಿದರು. ಕಾವೇರಿ ಹೋರಾಟ ದಿನೇದಿನೇ ರಾಜಕೀಯ ತಿರುವು ಪಡೆದು ಕೊಳ್ಳುತ್ತಿರುವುದನ್ನು

ಸೂಕ್ಷ್ಮವಾಗಿ ಅರಿತ ಜಿ.ಮಾದೇಗೌಡರು ರೈತರನ್ನು ಹಾಗೂ ಸಾರ್ವಜನಿಕರನ್ನು ಜಾಗೃತವಾಗುವಂತೆ ಸಲಹೆಕೊಟ್ಟರು. ಈ ಹೋರಾಟಕ್ಕೆ ವಕೀಲರು, ವೈದ್ಯರು, ಸಾಹಿತಿಗಳು, ಶಿಕ್ಷಕರು, ಉಪನ್ಯಾಸಕರು, ನೀರಾವರಿ ತಜ್ಞರು, ಮಾಲೀಕರು, ಕಲಾವಿದರು ಬೆಂಬಲ ಸೂಚಿಸಿದರು. ಇಷ್ಟೆಲ್ಲಾ ಉಗ್ರ ರೂಪ ತಾಳಿದ ಚಳುವಳಿಗೆ ಬಗ್ಗದ ಕೇಂದ್ರ ಸರ್ಕಾರ ರಾಜ್ಯ ಸರ್ಕಾರದ ಮೇಲೆ ಒತ್ತಡ ಹೇರುತ್ತಲೇ ಇತ್ತು. ಚಳವಳಿಯಲ್ಲಿ ನಿರತರಾಗಿದ್ದ ಜಿ.ಮಾದೇಗೌಡರಿಗೆ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರು ಮೊಬೈಲ್ ಮೂಲಕ ಸಂಪರ್ಕಿಸಿ ಪರಿಸ್ಥಿತಿಯನ್ನು ನಿಭಾಯಿಸಿ ಎಂದು ಕೋರಿಕೊಳ್ಳುತ್ತಾರೆ. ಇದಕ್ಕೆ ಕೋಪಗೊಂಡ ಜಿ.ಮಾದೇಗೌಡರು ಎಸ್.ಎಂ.ಕೃಷ್ಣ ಅವರಿಗೆ ನೀವು ರೈತರ ರಕ್ಷಣೆಗೆ ವಿರುದ್ಧವಾಗಿ ಯಾವುದೇ ಕಾರಣಕ್ಕೂ ಒಂದು ಹನಿ ನೀರು ಬಿಡಬಾರದು. ರೈತರ ಬಗ್ಗೆ ಕಾಳಜಿ ಇದ್ದರೆ ಮುಖ್ಯಮಂತ್ರಿ ಸ್ಥಾನಕ್ಕೆ ರಾಜಿನಾಮೆ ಕೊಟ್ಟು ಚಳವಳಿಗೆ ಧುಮುಕಿ ಜನ ನಿಮ್ಮನ್ನು ಮೆಚ್ಚಿಕೊಳ್ಳುತ್ತಾರೆ. ಸುಪ್ರೀಂಕೋರ್ಟ್ ಆದೇಶವನ್ನು ಧಿಕ್ಕರಿಸಿ ನೀರು ಬಿಡುವುದಿಲ್ಲವೆಂದು ಘೋಷಿಸಿ ನೀವು ಇತಿಹಾಸದ ಪುಟಗಳನ್ನು ಸೇರುತ್ತೀರ. ಜನತೆ ನಿಮ್ಮನ್ನು ಮತ್ತೆ ಮುಖ್ಯಮಂತ್ರಿಯಾಗಿ ಮಾಡುತ್ತಾರೆ. ಇದಕ್ಕೆ ವಿರುದ್ಧವೆಂಬಂತೆ ರೈತರ ಹಿತರಕ್ಷಣೆಯನ್ನು ಬಲಿಕೊಡಬೇಡಿ ಎಂದು ಎಚ್ಚರಿಕೆಯೊಂದಿಗೆ ಸಲಹೆ ನೀಡಿದರು. ಇದಕ್ಕೆ ಒಪ್ಪಿದ ಎಸ್.ಎಂ.ಕೃಷ್ಣ ಅವರು ನಿಮ್ಮ ಬಯಕೆಯಂತೆ ನೀರು ಬಿಡದಿರುವ ನಿರ್ಧಾರ ಪ್ರಕಟಿಸುತ್ತೇನೆ. ಯಾವುದೇ ಕಾರಣಕ್ಕೂ ರಾಜಿನಾಮೆ ಸಲ್ಲಿಸುವುದಿಲ್ಲ. ನ್ಯಾಯಾಂಗ ನಿಂದನೆ ಆಧಾರದ ಮೇಲೆ ನ್ಯಾಯಾಂಗವೇ ಸರ್ಕಾರವನ್ನು ವಜಾಗೊಳಸಲಿ ಎಂದು ಜಿ.ಮಾದೇಗೌಡರಿಗೆ ತಿಳಿಸಿದರು[27]. ಆದರೆ ಕಾಂಗ್ರೆಸ್‌ನ ಹೈಕಮಾಂಡ್ ನಿರ್ದೇಶನದಂತೆ ಹಾಗೂ ದಿನಾಂಕ 01ನೇ ನವೆಂಬರ್ 2002ರಂದು ನ್ಯಾಯಾಲಯದ ಕಟ್ಟುನಿಟ್ಟಿನ ಆದೇಶದಂತೆ ತಮಿಳುನಾಡಿಗೆ ಪ್ರತಿದಿನ 9000 ಕ್ಯೂಸೆಕ್ಸ್ ನೀರನ್ನು ಬಿಡಬೇಕಾಯಿತು[28]. ಈ ನಿರ್ಣಯದ ವಿರುದ್ಧ ಹೋರಾಟ ಮಂಡ್ಯ ಜಿಲೆಯಾದ್ಯಂತ ಉಗ್ರ ಸ್ವರೂಪ ಪಡೆಯಿತು. ಶಾಲಾ–ಕಾಲೇಜುಗಳಿಗೆ ರಜೆ ಘೋಷಿಸಲಾಯಿತು. ಈ ತೀರ್ಪಿನ ವಿರುದ್ಧ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರು ಬೆಂಗಳೂರಿನಿಂದ ಕಬಿನಿವರೆಗೆ ಪಾದಯಾತ್ರೆಗೆ ಮುಂದಾದರು. ಇದನ್ನು ಆಡಳಿತ ಮತ್ತು ಪ್ರತಿಪಕ್ಷದವರು ವಿರೋಧಿಸಿದರು ಹಾಗೂ ಪಾದಯಾತ್ರೆಯನ್ನು ತಿರಸ್ಕರಿಸುವಂತೆ ಜನತೆಗೆ ಕರೆಕೊಟ್ಟರು. ಇದು ಕಾಂಗ್ರೆಸ್ ಕಡೆಗೆ ಜನರನ್ನು ಸೆಳೆಯುವ ತಂತ್ರ ಎಂದು ಟೀಕಿಸಿದರು. ಜಿ.ಮಾದೇಗೌಡರು ಎಸ್.ಎಂ.ಕೃಷ್ಣ ಅವರ ಪಾದಯಾತ್ರೆಯನ್ನು ಕಟುವಾಗಿ ಟೀಕಿಸಿದರು. ತಮಿಳುನಾಡಿಗೆ ನೀರು ಬಿಟ್ಟು, ಒಬ್ಬ ರೈತನ ಪ್ರಾಣವನ್ನು ತೆಗೆದುಕೊಂಡ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರು ಆಡುತ್ತಿರುವ ನಾಟಕ ಜನತೆಗೆ ಗೊತ್ತಿದೆ ಎಂದು ತಿಳಿಸುತ್ತಾರೆ ಎಸ್.ಎಂ.ಕೃಷ್ಣ ಅವರಿಗೆ ಪಾದಯಾತ್ರೆ ಕೈಬಿಡುವಂತೆ ತಿಳಿಸಿದ್ದರು. ಪ್ರತಿ ಪಕ್ಷಗಳು

ತೆಗೆದುಕೊಳ್ಳುವ ನಿಲುವಿಗೆ ಬದ್ದರಾಗಿರುತ್ತೇವೆ ಹಾಗೂ ಚಳವಳಿಯು ಮುಂದುವರಿಯುತ್ತದೆ ಎಂದು ಘೋಷಿಸಿದರು.

ಇಷ್ಟೆಲ್ಲಾ ಬೆಳವಣಿಗೆಗಳಾದರೂ ಇದನ್ನು ಲೆಕ್ಕಿಸದೆ ಎಸ್.ಎಂ.ಕೃಷ್ಣ ಅವರು, ಮಠಾಧೀಶರು, ಕಲಾವಿದರು, ಚಿತ್ರರಂಗದವರು ಹಾಗೂ ಹಿಂಬಾಲಕರ ಜೊತೆ 9 ದಿನಗಳು ಪಾದಯಾತ್ರೆ ಕೈಗೊಂಡು ಯಾವುದೇ ಅಹಿತಕರ ಘಟನೆ ನಡೆಯದಂತೆ ಮುಂಜಾಗ್ರತೆ ವಹಿಸಿ ಪಾದಯಾತ್ರೆಯು ಮಂಡ್ಯದಲ್ಲಿ ಕೊನೆಗೊಂಡಿತು. ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರ ನೇತೃತ್ವದಲ್ಲಿ ಚಳವಳಿ ಮುಂದುವರಿಯಿತು. ಚಳವಳಿಯನ್ನು ನಿಲ್ಲಿಸಲು ಸರ್ಕಾರ ಸೆಕ್ಷನ್ 144ನ್ನು ಜಾರಿಗೊಳಿಸಿತು. ಈ ನಿಯಮದ ಅನ್ವಯ ರೈತರು, ಹೋರಾಟಗಾರರು ಹಾಗೂ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿ ಅಧ್ಯಕ್ಷ ಜಿ.ಮಾದೇಗೌಡರನ್ನು ಬಂಧಿಸಿ ಜೈಲಿಗೆ ಹಾಕಲಾಯಿತು. ದಿನಾಂಕ 02ನೇ ನವೆಂಬರ್ 2002ರಂದು ಬಿಡುಗಡೆಗೊಂಡ ಜಿ.ಮಾದೇಗೌಡರಿಗೆ ಜಿಲ್ಲೆಯ ಜನತೆಯಿಂದ ಅದ್ದೂರಿ ಸ್ವಾಗತ ಸಿಕ್ಕಿತು. ನಂತರ ಜಿ.ಮಾದೇಗೌಡರು ಕಾವೇರಿ ನದಿ ನೀರಿನ ವಿಚಾರದಲ್ಲಿ ಶ್ವೇತ ಪತ್ರ ಹೊರಡಿಸುವಂತೆ ಅಗ್ರಹಿಸಿ ಚಳವಳಿಯನ್ನು ಮುಂದುವರಿಸಿದರು. ದಿನಾಂಕ 25ನೇ ನವೆಂಬರ್ 2002ರಂದು ಕಾವೇರಿ ಉಸ್ತುವಾರಿ ಸಮಿತಿ ಸಭೆ ಮತ್ತು ದಿನಾಂಕ 29ನೇ ನವೆಂಬರ್ 2002ರಂದು ಕಾವೇರಿ ಪ್ರಾಧಿಕಾರದ ಸಭೆ ಇದ್ದು, ಇಲ್ಲಿ ಎರಡು ರಾಜ್ಯಗಳ ಬಿಕ್ಕಟ್ಟು ಬಗೆಹರಿಯುತ್ತದೆ ಎಂಬ ನಿಲುವನ್ನು ನ್ಯಾಯಾಲಯದ ಪೀಠ ಪ್ರಕಟಿಸಿತು[29] ಈ ಹಿನ್ನೆಲೆಯಲ್ಲಿ ಸುದೀರ್ಘವಾಗಿ ನಡೆದ 76 ದಿನಗಳ ಕಾವೇರಿ ಚಳವಳಿಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಯಿತು. ದಿನಾಂಕ 29ನೇ ನವೆಂಬರ್ 2002ರಂದು ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯು ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ಮುಂದಿನ ಹೋರಾಟಗಳ ಬಗ್ಗೆ ಚರ್ಚಿಸಲಾಯಿತು. ನಂತರ ಚಳವಳಿಗೆ ಸಹಕರಿಸಿದ ಎಲ್ಲರಿಗೂ ಅಭಿನಂದನೆ ಸಲ್ಲಿಸಿದ ಜಿ.ಮಾದೇಗೌಡರು ಕಾವೇರಿ ಪ್ರಾಧಿಕಾರದ ತೀರ್ಪು ರಾಜ್ಯಕ್ಕೆ ಮಾರಕವಾದಲ್ಲಿ ಪುನಃ ಅಹಿಂಸಾತ್ಮಕ ಹೋರಾಟಕ್ಕೆ ಸಜ್ಜಾಗಬೇಕಾಗುತ್ತದೆ ಎಂದು ಮನವಿ ಮಾಡಿದರು.

2003ರಂದು ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಸದಸ್ಯರು, ರೈತ ಸಂಘದ ನಾಯಕರು ಹಾಗೂ ಆಡಳಿತ ಪಕ್ಷದ ಮತ್ತು ಪ್ರತಿಪಕ್ಷದ ಮಂಡ್ಯ ಜಿಲ್ಲೆಯ ಶಾಸಕರು ರೈತರ ಬೆಳೆ ಪರಿಹಾರ ಸೇರಿದಂತೆ ಹಲವಾರು ಬೇಡಿಕೆಗಳ ಈಡೇರಿಕೆಗಾಗಿ ಹಾಗೂ ರೈತರ ಸಮಸ್ಯೆಗಳ ಬಗ್ಗೆ ವಿಸ್ತೃತವಾಗಿ ಚರ್ಚಿಸಿದರು. ಈ ಕೆಳಕಂಡ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟು ಪರಿಹರಿಸಿಕೊಳ್ಳಲು ನಿರ್ಣಯಿಸಿದರು.

ಜಿಲ್ಲೆಯಲ್ಲಿ ಸಂಭವಿಸಿರುವ ಬೆಳೆ ನಷ್ಟಕ್ಕೆ ಪರಿಹಾರ, ರೈತರ ಕೃಷಿ ಸಾಲ ಮನ್ನಾ. ಮುಂದಿನ ಮುಂಗಾರು ಬೆಳೆಗೆ ಹೊಸ ಸಾಲ. ಕೃಷಿ ಕಾರ್ಮಿಕರಿಗೆ ಉದ್ಯೋಗ ಸೃಷ್ಟಿ. ಗ್ರಾಮೀಣ ಪ್ರದೇಶದ ಕೃಷಿ ಪಂಪ್‌ಸೆಟ್‌ಗಳಿಗೆ ಸಮರ್ಪಕ ವಿದ್ಯುತ್ ಪೂರೈಕೆ. ಬಿಲ್ ಪಾವತಿಸಿದ ರೈತರ ಪಂಪ್ ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಡಿತ ಮಾಡುವುದುನ್ನು ನಿಲ್ಲಿಸಬೇಕು. ಬ್ಯಾಂಕುಗಳಿಂದ ಸಾಲ ಪಡೆದಿರುವ ರೈತರ ಟ್ರಾಕ್ಟರ್ ಜಪ್ತಿ ಕೈಬಿಡಬೇಕು ಎನ್ನುವ ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿ ಮಾರ್ಚ್ ಮೂರನೇ ವಾರದಲ್ಲಿ ಮಂಡ್ಯದಿಂದ ಬೆಂಗಳೂರುವರೆಗೆ ಪಾದಯಾತ್ರೆ ನಡೆಸಿ ವೈಫಲ್ಯಗಳನ್ನು ಜನತೆಗೆ ತಿಳಿಸಲು ಹೋಬಳಿ ಕೇಂದ್ರಗಳಲ್ಲಿ ಜನಜಾಗೃತಿ, ತಮಿಳುನಾಡಿಗೆ ನೀರು ಬಿಡುಗಡೆಯನ್ನು ಸಮರ್ಥಿಸಿಕೊಂಡು ಸಭೆ ನಡೆಸಿದ ಕಾಂಗ್ರೆಸ್ ಶಾಸಕರನ್ನು ಸಾರ್ವಜನಿಕವಾಗಿ ಪ್ರಶ್ನಿಸಲು ಜನತೆಗೆ ಕರೆ ನೀಡಿದರು ಹಾಗೂ ಪ್ರಮುಖ ನಿರ್ಣಯಗಳನ್ನು ಕೈಗೊಳ್ಳಲಾಯಿತು[30]. ಈ ಸಭೆಯಲ್ಲಿ ಹೆಚ್.ಡಿ.ಚೌಡಯ್ಯ, ಹೆಚ್.ಹೊನ್ನಪ್ಪ, ಕೆ.ಎಸ್.ಪುಟ್ಟಣ್ಣಯ್ಯ, ಬಿ.ಟಿ.ಶ್ರೀನಿವಾಸಗೌಡ, ಎಂ.ಎಸ್.ಸಿದ್ದರಾಜು, ಪ್ರಭಾವತಿಜಯರಾಂ, ಜೆ.ಬಿ.ಶಿವಕುಮಾರ್, ಬಿ.ಸಿ.ಶಿವಾನಂದ, ಸಿದ್ದರಾಮೇಗೌಡ, ಸುನಂದಾಜಯರಾಂ, ಕೆ.ಎಸ್.ನಂಜುಂಡೇಗೌಡ, ಎಂ.ಲಿಂಗಯ್ಯ, ಪ್ರಧಾನ ಕಾರ್ಯದರ್ಶಿ ಎನ್.ರಾಜು, ಕೆ.ಎಂ.ಚನ್ನೇಗೌಡ, ರವೀಂದ್ರ ಕುಮಾರ್, ಬೇಕರಿ ರಮೇಶ್, ಸಿ.ಎಂ.ದ್ಯಾವಪ್ಪ ಮತ್ತಿತರರು ಹಾಜರಿದ್ದು ಸಭೆಯನ್ನು ಯಶಸ್ವಿಗೊಳಿಸಿದರು.[31] ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ದಿನಾಂಕ 26ನೇ ಮಾರ್ಚ್ 2003ರಂದು ನಡೆದ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯಿಂದ ಸಭೆ ನಡೆಯಿತು. ರೈತರ ವಿವಿಧ ಬೇಡಿಕೆಗಳ ಪರಿಹಾರಕ್ಕಾಗಿ ಸರ್ಕಾರವನ್ನು ಒತ್ತಾಯಿಸಿ ದಿನಾಂಕ 14ನೇ ಮಾರ್ಚ್ 2003ರಂದು ಮಂಡ್ಯದಿಂದ ಬೆಂಗಳೂರಿಗೆ ಪಾದಯಾತ್ರೆಯ ಮೂಲಕ ತಲುಪಿ ಮುಖ್ಯಮಂತ್ರಿಗಳ ಮನೆಯ ಮುಂದೆ ಧರಣಿ ನಡೆಸಲು ಸರ್ವಾನುಮತದಿಂದ ತೀರ್ಮಾನಿಸಲಾಯಿತು.

ದಿನಾಂಕ 12.02.2003ರಂದು ರೈತರ ಹಿತರಕ್ಷಣಾ ಸಮಿತಿಯ ಸಭೆಯಲ್ಲಿ ಚರ್ಚಿಸಿ ಸರ್ಕಾರದ ಮುಂದೆ ಬೇಡಿಕೆಗಳನ್ನಿಟ್ಟು ಈಡೇರಿಸಿಕೊಳ್ಳಲು ನಿರ್ಧರಿಸಿದ ಎಲ್ಲಾ ಬೇಡಿಕೆಗಳನ್ನು ಸರ್ಕಾರ ಪರಿಹರಿಸಲು ಸಮ್ಮತಿಸಿತು. ಈ ಸಂಬಂಧ ದಿನಾಂಕ 14ನೇ ಏಪ್ರಿಲ್ 2003 ರಿಂದ ಮಂಡ್ಯದಿಂದ ಕೈಗೊಂಡಿದ್ದ ಪಾದಯಾತ್ರೆ ರದ್ದು ಮಾಡಲಾಯಿತು. ಆದರೆ ಪೂರ್ವ ನಿಗದಿಯಂತೆ ಬೆಳೆ ಪರಿಹಾರ ಸೇರಿದಂತೆ ನಾನಾ ಬೇಡಿಕೆಗಳ ಈಡೇರಿಕೆಗೆ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ಅವರೊಂದಿಗೆ ವಿಧಾನಸೌಧದಲ್ಲಿ ದಿನಾಂಕ 18ನೇ ಏಪ್ರಿಲ್ 2003ರಂದು ಬೆಳಿಗ್ಗೆ 11 ಗಂಟೆಗೆ ಮಂಡ್ಯದಿಂದ ಬಂದಿದ್ದ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು, ರೈತ ಸಂಘದ ಮುಖಂಡರು ಹಾಗೂ ಮಂಡ್ಯ ಜಿಲ್ಲೆಯ ವಿವಿಧ ಪಕ್ಷದ ಶಾಸಕರು ಹಾಜರಿದ್ದರು. ಮುಖ್ಯಮಂತ್ರಿಗಳು ಹಸನ್ಮುಖಿಯಾಗಿ ಬಂದು ಮೊದಲನೇ ಕುರ್ಚಿಯಲ್ಲಿ

ಕುಳಿತಿದ್ದ ಜಿ.ಮಾದೇಗೌಡರನ್ನು ಚೆನ್ನಾಗಿದ್ದೀರಾ ಎಂದು ವಿಚಾರಿಸಿ ಎಲ್ಲರಿಗೂ ಹಸ್ತಲಾಘವ ಮಾಡಿದರು. ನಂತರ ಹಿತರಕ್ಷಣಾ ಸಮಿತಿ ಮಂಡಿಸಿದ ಎಲ್ಲಾ ಬೇಡಿಕೆಗಳನ್ನು ಈಡೇರಿಸಲು ಕ್ರಮಕೈಗೊಳ್ಳುವುದಾಗಿ ಆಶ್ವಾಸನೆ ನೀಡಿದರು.

**ಕಾವೇರಿ ನ್ಯಾಯ ಮಂಡಳಿ ಅಂತಿಮ ತೀರ್ಪು**

ದಿನಾಂಕ 5ನೇ ಫೆಬ್ರವರಿ 2007ನೇ ಸೋಮವಾರ ನೀಡಿದ ಒಂದು ಸಾವಿರ ಪುಟದ ನ್ಯಾಯ ಮಂಡಳಿ ತೀರ್ಪು ಕರ್ನಾಟಕದ ಜನತೆಯ ಪಾಲಿಗೆ ಮರಣ ಶಾಸನವಾಗಿತ್ತು. ತಮಿಳುನಾಡಿನ ರೈತರು ಹರ್ಷ ಚಿತ್ತರಾದರೆ. ಮಂಡ್ಯ ಜಿಲ್ಲೆಯ ಜನತೆಯು ದಿಗ್ಭ್ರಮೆ ವ್ಯಕ್ತಪಡಿಸಿ ಕಂಗಾಲಾದರು. ನ್ಯಾಯ ಮಂಡಳಿಯ ತ್ರಿರ್ಪು ಕರ್ನಾಟಕ ಹಾಗೂ ಮಂಡ್ಯ ಜಿಲ್ಲೆಯಾದ್ಯಂತ ಹರಡಿತು. ಈ ತೀರ್ಪು ಅಕ್ಷರಶಃ ಮಂಡ್ಯ ಜಿಲ್ಲೆಗೆ ಶಾಪವಾಗಿ ಪರಿಣಮಿಸಿತು. ನ್ಯಾಯ ಮಂಡಳಿಯ ಸಭಾಂಗಣದಲ್ಲಿ ವಕೀಲರು, ಪತ್ರಕರ್ತರಿಂದ ತುಂಬಿದ್ದಾಗ ನ್ಯಾಯಮೂರ್ತಿಗಳಾದ ಎಸ್.ಎಸ್.ರಾವ್ ಮತ್ತು ಸುಧೀರ್ ನಾರಾಯಣನ್ ಜೊತೆ ಅಧ್ಯಕ್ಷರಾದ ಎಸ್.ಪಿ.ಸಿಂಗ್ ಆಗಮಿಸಿ ಅಂತಿಮ ತೀರ್ಪನ್ನು ಪ್ರಕಟಿಸಿದರು. ಕಾವೇರಿ ನ್ಯಾಯ ಮಂಡಳಿಯ ತೀರ್ಪು ಹೊರಬಿದ್ದ ತಕ್ಷಣವೇ ಕರ್ನಾಟಕ ರಾಜ್ಯದ ಕಾವೇರಿ ಕಣಿವೆಯ ಜಿಲ್ಲೆಗಳಲ್ಲಿ ತೀರ್ಪಿನ ವಿರುದ್ಧ ಕೇಂದ್ರ ಸರ್ಕಾರಿ ಕಛೇರಿಗಳ ಮುಂದೆ ಪ್ರತಿಭಟಿಸಿದರು. ರೈಲ್ವೆ ನಿಲ್ದಾಣಕ್ಕೆ ಆಗಮಿಸಿ ರೈಲನ್ನು ತಡೆಯುವುದರ ಮೂಲಕ ಕೇಂದ್ರ ಸರ್ಕಾರಕ್ಕೆ ಬಿಸಿ ಮುಟ್ಟಿಸಿದರು. ದಿನಾಂಕ 06ನೇ ಫೆಬ್ರವರಿ 2007ರಂದು ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು ಈ ತೀರ್ಪಿನ ವಿರುದ್ದ ಹೋರಾಟ ರೂಪಿಸಲು ಸಭೆ ಕರೆದರು. ಈ ಸಭೆಯಲ್ಲಿ ನೀರಾವರಿ ತಜ್ಞ ಎಚ್.ಎನ್.ನಂಜೇಗೌಡ, ಬಿ.ಟಿ.ಶ್ರೀನಿವಾಸಗೌಡ, ಎಂ.ಎಸ್.ಆತ್ಮಾನಂದ, ಕೆ.ಬೋರಯ್ಯ, ಸುನಂದಾ ಜಯರಾಂ ಹಾಗೂ ಮತ್ತಿತರರು ಭಾಗವಹಿಸಿ ಸುದೀರ್ಘವಾಗಿ ತೀರ್ಪಿನ ಬಗ್ಗೆ ಚರ್ಚಿಸಿ ತೀರ್ಮಾನಗಳನ್ನು ಕೈಗೊಂಡರು.

ಕಾವೇರಿ ನದಿ ನೀರು ಹಂಚಿಕೆ ಕುರಿತು ನ್ಯಾಯ ಮಂಡಲಿ ಕೊಟ್ಟಿರುವ ತೀರ್ಪು ನ್ಯಾಯ ಸಮ್ಮತವಲ್ಲ. ಕರ್ನಾಟಕ, ತಮಿಳುನಾಡಿಗಿಂತಲೂ ಹೆಚ್ಚು ಬರಗಾಲಕ್ಕೆ ತುತ್ತಾಗುವುರಿಂದ ಅಧಿಕ ನೀರು ಹಂಚಿಕೆ ಮಾಡಬೇಕಾಗಿತ್ತು. ಈಗ ಕೊಟ್ಟಿರುವ ತೀರ್ಪಿನಲ್ಲಿ ಯಾವ ಪರಿಶೀಲನೆಯನ್ನು ಮಾಡದೆ ಇರುವುದರಿಂದ ರಾಜ್ಯಕ್ಕೆ ಅನ್ಯಾಯವಾಗಿದೆ. ನೀರನ್ನು ನ್ಯಾಯ ಸಮ್ಮತವಾಗಿ ಹಂಚಬೇಕು ಎನ್ನುವ ಅಂತರರಾಜ್ಯ ನದಿ ನೀರಿನ ಹಂಚಿಕೆ ಸೂತ್ರವನ್ನು ನ್ಯಾಯ ಮಂಡಳಿ ಪರಿಗಣನೆಗೆ ತೆಗೆದುಕೊಂಡಿಲ್ಲ. ರೈತರು ತಮ್ಮ ಹಕ್ಕನ್ನು ಕಾಪಾಡಿಕೊಳ್ಳಲು ಚಳವಳಿಯನ್ನು ಮಾಡುವುದು ಅನಿವಾರ್ಯ ವಾಗಿರುವು ದರಿಂದ ಏನೇ ಚಳವಳಿ ಕೈಗೊಂಡರೂ ಅದು ಅಹಿಂಸಾತ್ಮಕವಾಗಿ, ಶಾಂತಿ

ಯುತವಾಗಿ, ಸಾರ್ವಜನಿಕರ ಹಿತಕ್ಕೆ ಭಂಗ ಬಾರದಂತೆ ಮಾಡಬೇಕು. ಜನಾಂಗೀಯ ಘರ್ಷಣೆಯಾಗದಂತೆ ಎಚ್ಚರವಹಿಸಬೇಕೆಂದು ನಿರ್ಣಯಿಸಲಾಯಿತು[32].

ಸಮಿತಿಯು ತೆಗೆದುಕೊಂಡ ನಿರ್ಣಯದಂತೆ ಚಳವಳಿ ಪ್ರಾರಂಭವಾಯಿತು ದಿನೇ ದಿನೇ ಕಾವು ಪಡೆದು ಜಿ.ಮಾದೇಗೌಡರ ನೇತೃತ್ವದಲ್ಲಿ ವಿವಿಧ ರೀತಿಯ ಪ್ರತಿಭಟನೆಗಳು ನಡೆದವು. ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಯಲ್ಲಿ ರೈತರಿಂದ ರಸ್ತೆ ತಡೆ ಚಳವಳಿಗಳು ನಡೆದವು. ಈ ಚಳವಳಿಗೆ ಮಠಾಧಿಪತಿಗಳೂ, ಚಿತ್ರರಂಗದ ಕಲಾವಿದರು, ವಕೀಲರು, ವರ್ತಕರು, ಸಾಹಿತಿಗಳು, ವೈದ್ಯರು, ನಾಗರಿಕರು ಬೆಂಬಲ ಸೂಚಿಸಿದರು. ಈ ತೀರ್ಪಿನ ವಿರುದ್ದದ ಚಳವಳಿಯಲ್ಲಿ ಪಕ್ಷಾತೀತವಾಗಿ ಎಲ್ಲಾ ಪಕ್ಷ ಮುಖಂಡರು. ಭಾಗವಹಿಸಿ ಅಹಿಂಸಾತ್ಮಕವಾಗಿ ಚಳವಳಿಯಲ್ಲಿ ಭಾಗವಹಿಸಿದರು. ವಿವಿಧ ಕಡೆ ಉರುಳು ಸೇವೆ, ಅರಬೆತ್ತಲೆ ಮೆರವಣಿಗೆ, ರಸ್ತೆಯಲ್ಲಿ ಅಡಿಗೆ ಮಾಡಿ ಊಟ ಮಾಡುವುದು ಸಾಮಾನ್ಯವಾಗಿತ್ತು. ಇದೇ ರೀತಿ ಚಳವಳಿ ಮುಂದುವರಿಯಿತು. ಮಂಡ್ಯ ಜಿಲ್ಲೆಯ ಸಂಸದ, ಕೇಂದ್ರ ಸಚಿವ ಅಂಬರೀಷ್ ಅವರು ಜಿ.ಮಾದೇಗೌಡರು ಧರಣಿ ಕುಳಿತಿದ್ದ ಸಿಲ್ವರ್ ಜ್ಯೂಬಿಲಿ ಪಾರ್ಕಿನಲ್ಲಿ ಭೇಟಿ ಮಾಡಿ ರೈತರ ಸಭೆಯನ್ನು ಸರ್.ಎಂ.ವಿಶ್ವೇಶ್ವರಯ್ಯ ಕ್ರೀಡಾಂಗಣದಲ್ಲಿ ನಿಮ್ಮ ನೇತೃತ್ವದಲ್ಲಿ ನಡೆಯುವಂತೆ ಕೋರಿಕೊಂಡರು. ಇವರ ಕೋರಿಕೆಗೆ ಪ್ರತಿಕ್ರಿಯಿಸಿದ ಜಿ.ಮಾದೇಗೌಡರು ರೈತರ ಸಭೆ ಇದೇ ಪಾರ್ಕಿನಲ್ಲಿ ನಡೆಯಲಿ ಎಂದು ಹೇಳುತ್ತಾ ಕಾವೇರಿ ವಿಷಯದಲ್ಲಿ ಮಂಡ್ಯದಲ್ಲಿ ರಾಜಕೀಯ ಮಾಡುವುದು ಬೇಡ, ನಿಮ್ಮ ಕೆಲಸವನ್ನು ಮಾಡಿ ಎಂದು ತಿಳಿಸಿದರು. ಇದರಿಂದ ಜಿ.ಮಾದೇಗೌಡರು ರೈತರ ವಿಚಾರದಲ್ಲಿ ಯಾವುದೇ ರಾಜಿ ಮಾಡಿಕೊಳ್ಳುವ ಮನೋಭಾವದವರಲ್ಲ ಎಂಬುದು ತಿಳಿದುಬರುತ್ತದೆ. ಅಂಬರೀಷ್ ಅವರು ಸರ್.ಎಂ.ವಿಶ್ವೇಶ್ವರಯ್ಯ ಕ್ರೀಡಾಂಗಣದಲ್ಲಿ ಸಭೇಯನ್ನುದ್ದೇಶಿಸಿ ಮಾಡನಾಡುತ್ತ ಸಚಿವ ಹಾಗೂ ಸಂಸದ ಸ್ಥಾನಕ್ಕೆ ರಾಜಿನಾಮೆ ನೀಡಿದ್ದೇನೆಂದು ಘೋಷಿಸಿದರು. ಇವರ ರಾಜೀನಾಮೆ ಘೋಷಣೆಗೆ ಸಂಬಂಧಿಸಿದಂತೆ ಜಿ.ಮಾದೇಗೌಡರು ಪ್ರತಿಕ್ರಿಯಿಸುತ್ತಾ ರಾಜೀನಾಮೆ ನೀಡಿದ್ದೇನೆಂದು ಮನೆಯಲ್ಲಿ ಕುಳಿತುಕೊಳ್ಳುವುದಕ್ಕಿಂತ ನಮ್ಮೊಂದಿಗೆ ಬಂದು ಚಳವಳಿಯಲ್ಲಿ ಭಾಗವಹಿಸಲೆಂದು ಕರೆಕೊಟ್ಟರು.

ಚಳುವಳಿ ನಿರತ ಜಿ.ಮಾದೇಗೌಡರನ್ನು ಅಂದಿನ ಮಂಡ್ಯ ಜಿಲ್ಲಾ ಉಸ್ತುವಾರಿ ಸಚಿವರಾಗಿದ್ದ ಎನ್.ಚಲುವರಾಯಸ್ವಾಮಿ ಅವರು ಭೇಟಿ ಮಾಡಿ ಸರ್ಕಾರ ತಕ್ಷಣದಲ್ಲೇ ಸುಪ್ರೀಂ ಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸಲು ಉದ್ದೇಶಿಸಿದ್ದು ಈ ಹಿನ್ನೆಲೆಯಲ್ಲಿ ಪ್ರತಿಭಟನೆ ಕೈಬಿಡುವಂತೆ ಮನವಿ ಮಾಡಿದರು. ಮನವಿಯನ್ನು ತಿರಸ್ಕರಿಸಿದ ಜಿ.ಮಾದೇಗೌಡರು ನನ್ನ ಪ್ರಾಣ ಹೋದರು ಪರವಾಗಿಲ್ಲ ರೈತರಿಗೆ ನ್ಯಾಯ

ಸಿಗುವವರೆಗೆ ಪ್ರತಿಭಟನೆ ಮುಂದುವರಿಸುವುದಾಗಿ ಹೇಳಿದರು ಇಂತಹ ಹೇಳಿಕೆಗಳು ಅವರ ನಿಸ್ವಾರ್ಥತೆಯನ್ನು ತಿಳಿಸುತ್ತದೆ.

**ಚಳವಳಿ ಸ್ಥಗಿತಕ್ಕೆ ಜಿ.ಮಾದೇಗೌಡರ ಕರೆ**

ದಿನಾಂಕ 05ನೇ ಫೆಬ್ರವರಿ 2007ನೇ ಸೋಮವಾರದಿಂದ ಪ್ರಾರಂಭವಾದ ಕಾವೇರಿ ನ್ಯಾಯ ಮಂಡಳಿ ತೀರ್ಪಿನ ವಿರುದ್ಧದ ಚಳವಳಿ ದಿನಾಂಕ 04ನೇ ಮೇ 2007ರವರೆಗೆ ಒಟ್ಟು 89 ದಿನಗಳ ಕಾಲ ನಡೆದು ಐತಿಹಾಸಿಕ ಚಳವಳಿಯಾಗಿ ಇತಿಹಾಸದಲ್ಲಿ ದಾಖಲಾಯಿತು. ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಯ ಅಧ್ಯಕ್ಷರಾದ ಜಿ.ಮಾದೇಗೌಡರ ನಾಯಕತ್ವದಲ್ಲಿ ಗಾಂಧೀಜಿ ಅವರು ಹಾಕಿಕೊಟ್ಟ ಅಹಿಂಸಾ ಮಾರ್ಗದಲ್ಲಿ ಚಳವಳಿ ನಡೆಯಿತು. ದಿನಾಂಕ 4ನೇ ಮೇ 2007ರಂದು ಚಳವಳಿಯಲ್ಲಿ ಭಾಗವಹಿಸಿದ ಎಲ್ಲಾ ವರ್ಗದ ಜನತೆಯನ್ನು ಉದ್ದೇಶೀಸಿ ಮಾತನಾಡಿದ ಜಿ.ಮಾದೇಗೌಡರು ಈ ಚಳವಳಿಗೆ ಮಹಿಳೆಯರು, ಮಕ್ಕಳು, ಅಂಗವಿಕಲರು, ವೃದ್ಧರು ಭಾಗವಹಿಸಿದಾರೆ. ಆದರೆ ನಮ್ಮ ಕರೆಗೆ ಆಡಳಿತ ನಡೆಸುವ ದೊರೆಗಳು ಹೃದಯ ಹೀನರಾಗಿದಾರೆ ಎಂದು ನೊಂದು ನುಡಿದರು. ಇಷ್ಟೆಲ್ಲಾ ಪ್ರತಿಭಟನೆ ನಡೆದರೂ ಕೇಂದ್ರ ಸರ್ಕಾರ ನಮ್ಮ ಸಮಸ್ಯೆಗೆ ಸ್ಪಂದಿಸಲಿಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದ್ದರು. ಕಾವೇರಿ ಕಣಿವೆಯ ಜಿಲ್ಲೆಗಳಾದ ಮಂಡ್ಯ, ಮೈಸೂರು, ಹಾಸನ, ಚಾಮರಾಜನಗರ ಹಾಗೂ ಬೆಂಗಳೂರಿನ ಚಳವಳಿಗಾರರು ಸುಪ್ರೀಂಕೋರ್ಟಿನಲ್ಲಿ ಮೇಲ್ಮನವಿ ಸಲ್ಲಿಸಿದ್ದಾರೆ. ಈ ಹಿನ್ನಲೆಯಲ್ಲಿ ಚಳವಳಿಯನ್ನು ರಾಜ್ಯದ ಎಲ್ಲಾ ಭಾಗದಲ್ಲಿಯೂ ದಿನಾಂಕ 05ನೇ ಮೇ 2007ರಂದು ತಾತ್ಕಾಲಿಕವಾಗಿ ಸ್ಥಗಿತಗೊಳಿಸಬೇಕು. ನ್ಯಾಯ ಸಿಗದಿದ್ದರೆ ಕಾವೇರಿ ನದಿ ನೀರಿಗಾಗಿ 'ಮಾಡು ಇಲ್ಲವೆ ಮಡಿ' ಹೋರಾಟಕ್ಕೆ ಸಿದ್ಧರಾಗಿಬೇಕು ಎಂದು ಕರೆ ನೀಡಿದರು. ಜಿ.ಮಾದೇಗೌಡರ ಕರೆಗೆ ಓಗೊಟ್ಟು ಚಳವಳಿಗಾರರು ಚಳವಳಿಯನ್ನು ಅಂತ್ಯಗೊಳಿಸಿದರು.

**2012ರಲ್ಲಿ ಮತ್ತೆ ಭುಗಿಲೆದ್ದ ಕಾವೇರಿ ಚಳವಳಿ**

2007 ರಿಂದ 2012 ರವರೆಗೆ ಮಳೆಗಾಲ ಅನುಕೂಲಕರವಾಗಿದ್ದುದರಿಂದ ಕರ್ನಾಟಕ ಮತ್ತು ತಮಿಳುನಾಡು ಎರಡು ರಾಜ್ಯಗಳಲ್ಲಿ ನೀರಿನ ಸಮಸ್ಯೆ ತಲೆದೋರಿರಲಿಲ್ಲ. 2012ರಲ್ಲಿ ಭೀಕರ ಬರಗಾಲ ಕರ್ನಾಟಕದಲ್ಲಿ ಕಂಡುಬಂದಿದ್ದರಿಂದ ಕಾವೇರಿ ಜಲಾನಯನ ಪ್ರದೇಶದಲ್ಲಿ ನೀರಿಗೆ ಹಾಹಾಕಾರ ಉಂಟಾಗಿದ್ದರೂ ತಮಿಳುನಾಡು ಸರ್ಕಾರ ಪ್ರತಿ ವರ್ಷದಂತೆ ಈ ವರ್ಷವೂ 25 ಟಿ.ಎಂ.ಸಿ. ನೀರು ಬಿಡುಗಡೆ ಮಾಡುವಂತೆ ಕರ್ನಾಟಕಕ್ಕೆ ಸೂಚಿಸಬೇಕೆಂದು ಅಂದಿನ ಪ್ರಧಾನಿ ನೇತೃತ್ವದ ಕಾವೇರಿ ನದೀ ಪ್ರಾಧಿಕಾರಕ್ಕೆ ಒತ್ತಡ ತಂದಿತು. ಇದಕ್ಕೆ ಸ್ಪಂದಿಸಿದ ನದಿ ಪ್ರಾಧಿಕಾರದ

ವಿರುದ್ಧ ಸುಪ್ರೀಂಕೋರ್ಟ್ ಮೆಟ್ಟಿಲೇರಿದ ತಮಿಳುನಾಡು ಸರ್ಕಾರ ಪ್ರಧಾನಿಯವರಿಗೆ ನಿರ್ದೇಶನ ನೀಡಬೇಕೆಂದು ಕೋರಿತು. ಸರ್ವೋಚ್ಚ ನ್ಯಾಯಾಲಯವು 13ನೇ ಆಗಸ್ಟ್, 2012 ಹಾಗೂ 3ನೇ ಸೆಪ್ಟಂಬರ್ 2012ರಂದು ಕಾವೇರಿ ನದೀ ನೀರಿನ ವಿವಾದದ ಬಗ್ಗೆ ವಿಚಾರಣೆ ನಡೆಸಿತು. ನ್ಯಾಯಾಲಯಕ್ಕೆ ಕೇಂದ್ರ ಸರ್ಕಾರವು ಪ್ರಮಾಣ ಪತ್ರ ಸಲ್ಲಿಸಿ ಸೆಪ್ಟಂಬರ್ 19ರಂದು ಸಭೆ ನಿಗದಿಪಡಿಸಲಾಗಿದೆ ಎಂಬ ಮಾಹಿತಿಯನ್ನು ತಿಳಿಸಿತು. ಈ ಸಂಬಂಧ ಎರಡು ರಾಜ್ಯಗಳಿಗೆ ಸಮಸ್ಯೆ ಇತ್ಯರ್ಥಗೊಳಿಸುವಂತೆ ನ್ಯಾಯಾಲಯ ಸೂಚಿಸಿ ಒಂದು ವೇಳೆ ನಿರ್ಧಾರಕ್ಕೆ ಬಾರದಿದ್ದಲ್ಲಿ ನ್ಯಾಯಾಲಯ ಸ್ವತಂತ್ರವಾಗಿ ತೀರ್ಪು ನೀಡಲಾಗುವುದು ಎಂಬ ಎಚ್ಚರಿಕೆ ನೀಡಿ ಆದೇಶಿಸಿತು.

07ನೇ ಸೆಪ್ಟಂಬರ್ 2012ರಂದು ತಮಿಳುನಾಡು ಸರ್ಕಾರ ಪ್ರತಿನಿತ್ಯ 2 ಟಿ.ಎಂ.ಸಿ. ನೀರು ಬಿಡುವಂತೆ ಕರ್ನಾಟಕಕ್ಕೆ ಸೂಚಿಸಬೇಕೆಂದು ಸರ್ವೋಚ್ಚ ನ್ಯಾಯಾಲಯಕ್ಕೆ ಮಧ್ಯಂತರ ಆದೇಶ ಕೋರಿ ಮನವಿ ಸಲ್ಲಿಸಿತು. ಮನವಿಯನ್ನು ಆಲಿಸಿದ ಸರ್ವೋಚ್ಚ ನ್ಯಾಯಾಲಯ 10ನೇ ಸೆಪ್ಟೆಂಬರ್ 2012ಕ್ಕೆ ವಿಚಾರಣೆ ಮುಂದೂಡಿತು. 10ನೇ ಸೆಪ್ಟೆಂಬರ್ 2012 ರಂದು ಕರ್ನಾಟಕ ಪರ ವಕೀಲರಾದ ನಾರಿಮನ್ ಮತ್ತು ಅನಿಲ್ ದಿವಾನ್ ಅವರು ಸರ್ವೋಚ್ಚ ನ್ಯಾಯಾಲಯದಲ್ಲಿ ಮಧ್ಯಂತರ ಆದೇಶ ನೀಡದಂತೆ ಮನವಿ ಮಾಡಿಕೊಂಡರು. ಇದಕ್ಕೆ ಸಕಾರಾತ್ಮಕವಾಗಿ ಸ್ಪಂದಿಸಿದ ಸರ್ವೋಚ್ಚ ನ್ಯಾಯಾಲಯ ನೀರಿನ ಪ್ರಮಾಣವನ್ನು ಹೆಚ್ಚಿಸಿ ಬಿಡುಗಡೆ ಮಾಡುವಂತೆ ಸಲಹೆ ನೀಡಿದರು. ಇದಕ್ಕೆ ಒಪ್ಪಿಕೊಂಡ ಕರ್ನಾಟಕ ಪರ ವಕೀಲರು 12ನೇ ಸೆಪ್ಟೆಂಬರ್ 2012 ರಿಂದ ಸೆಪ್ಟೆಂಬರ್ 20 ರವರೆಗೆ ನಿತ್ಯ 10 ಸಾವಿರ ಕ್ಯೂಸೆಕ್ ನೀರು ಬಿಡುಗಡೆ ಮಾಡಲು ಒಪ್ಪಿರುತ್ತೇವೆ ಎಂದು ಲಿಖಿತ ರೂಪದಲ್ಲಿ ನ್ಯಾಯ ಪೀಠಕ್ಕೆ ತಿಳಿಸಿದರು[33]. ಕಾವೇರಿ ನದಿಯಿಂದ ಪ್ರತಿನಿತ್ಯ 10 ಸಾವಿರ ಕ್ಯೂಸೆಕ್ ನೀರನ್ನು 9 ದಿನಗಳ ಕಾಲ ತಮಿಳುನಾಡಿಗೆ ಹರಿಸಬೇಕೆಂಬ ಸುಪ್ರಿಂಕೋರ್ಟ್ ತೀರ್ಪಿನ ಸುದ್ದಿಯನ್ನ ದೃಶ್ಯ ಮಾಧ್ಯಮಗಳ ಮೂಲಕ ತಿಳಿದ ಮಂಡ್ಯ ಜಿಲ್ಲೆಯ ಜನತೆ ತಕ್ಷಣಕ್ಕೆ ವಿವಿಧ ಕಡೆ ಪ್ರತಿಭಟನೆ ನಡೆಸಿದರು. ವಿಷಯ ತಿಳಿದ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು ತೀವ್ರವಾಗಿ ಆತಂಕಗೊಂಡರು ಹಾಗೂ ಜನರಿಗೆ ಹೋರಾಟಕ್ಕೆ ಸಿದ್ಧಗೊಳ್ಳಲು ಕರೆ ನೀಡಿದರು. ಜಿಲ್ಲೆಯ ಎಲ್ಲಾ ರೈತ ನಾಯಕರು ಅವರವರ ಗ್ರಾಮಗಳಲ್ಲಿ ಹಾಗೂ ಬೆಂಗಳೂರು ಮೈಸೂರು ರಸ್ತೆಯಲ್ಲಿ ಉಗ್ರ ಪ್ರತಿಭಟನೆ ನಡೆಸಿದರು. ಅನೇಕ ಸಂಘ ಸಂಸ್ಥೆಗಳು ಬೆಂಬಲ ವ್ಯಕ್ತಪಡಿಸಿದವು. ತಕ್ಷಣ ರೈತ ನಾಯಕ ಗುರುದೇವರಹಳ್ಳಿ ಮಾದೇಗೌಡರು ಮುಖ್ಯಮಂತ್ರಿ ಜಗದೀಶ್‌ಶೆಟ್ಟರ್ ಅವರನ್ನು ಸಂಪರ್ಕಿಸಿ ಯಾವುದೇ ಕಾರಣಕ್ಕೂ ಸುಪ್ರೀಂಕೋರ್ಟ್‌ನ ಮಧ್ಯಂತರ ಆದೇಶವನ್ನು ಪಾಲಿಸಬಾರದು ಎಂದು ತಾಕೀತು ಮಾಡಿದರು. ಈ ವಿಷಯದ ಬಗ್ಗೆ 12 ಸೆಪ್ಟಂಬರ್ 2012ರಂದು ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರ ನೇತೃತ್ವದಲ್ಲಿ ಸಭೆ ಸೇರಿ

ಹೋರಾಟದ ರೂಪುರೇಷೆಗಳ ಬಗ್ಗೆ ಚರ್ಚಿಸಿದರು. ನಮ್ಮ ರಾಜ್ಯದ ಎಲ್ಲಾ ಮುಖ್ಯಮಂತ್ರಿಗಳು ತಮ್ಮ ಕುರ್ಚಿ ಉಳಿಸಿಕೊಳ್ಳಲು ತಮಿಳುನಾಡಿಗೆ ನೀರು ಬಿಡಲು ಆದೇಶ ಮಾಡಿದ್ದಾರೆ. ಈ ಬಾರಿ ಅದಕ್ಕೆ ಅವಕಾಶ ನೀಡಬಾರದು ಉಗ್ರ ಪ್ರತಿಭಟನೆ ಅನಿವಾರ್ಯವಾಗಿದ್ದು, ಸಿದ್ಧರಾಗಿ ಎಂದು ಕರೆಕೊಟ್ಟರು ಹಾಗೂ ಕೆಲವು ಮಹತ್ವದ ನಿರ್ಣಯಗಳನ್ನು ಸಭೆಯಲ್ಲಿ ಕೈಗೊಳ್ಳಲಾಯಿತು.

ಕರ್ನಾಟಕ ಸರ್ಕಾರವು ರೈತರ ಹಿತವನ್ನು ಕಡೆಗಣಿಸಿ ತಮಿಳುನಾಡಿಗೆ ಪ್ರತಿನಿತ್ಯ 10 ಸಾವಿರ ಕ್ಯೂಸೆಕ್ ನೀರು ಬಿಡುವುದಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಪ್ರಮಾಣ ಪತ್ರ ಸಲ್ಲಿಸಿರುವುದಕ್ಕೆ ಈ ಸಭೆ ಉಗ್ರವಾಗಿ ಖಂಡಿಸುತ್ತದೆ. 2012ರ ಸೆಪ್ಟೆಂಬರ್ 19ರಂದು ನಡೆಯಲಿರುವ ಕಾವೇರಿ ನದಿ ಪ್ರಾಧಿಕಾರ ಸಭೆಯಲ್ಲಿ ರಾಜ್ಯದ ಹಿತಕ್ಕೆ ಧಕ್ಕೆ ಉಂಟಾಗುವ ಪರಿಸ್ಥಿತಿ ಬಂದರೆ ರಾಜ್ಯ ಸರ್ಕಾರ ಅದಕ್ಕೆ ತಲೆಬಾಗಬಾರದೆಂದು ಈ ಸಭೆ ಒತ್ತಾಯಿಸುತ್ತದೆ. ರಾಜ್ಯ ಸರ್ಕಾರ ತಮಿಳುನಾಡಿಗೆ ನೀರು ಬಿಡಬಾರದೆಂದು ಒತ್ತಡ ತರಲು ಸೆಪ್ಟಂಬರ್ 19 ರವರೆಗೆ ನಿರಂತರ ಧರಣಿ ನಡೆಸಲು ಸಭೆ ತೀರ್ಮಾನಿಸಿತು. ರಾಜ್ಯದ ಸಂಸತ್ ಸದಸ್ಯರುಗಳು, ಕೇಂದ್ರ ಸಚಿವರುಗಳು ಪ್ರಧಾನಿಯವರನ್ನು ಭೇಟಿಮಾಡಿ ಜಿಲ್ಲೆಯ ಬರಪರಿಸ್ಥಿತಿಯನ್ನು ಕೇಂದ್ರ ಸರ್ಕಾರಕ್ಕೆ ಮನವರಿಕೆ ಮಾಡಿಕೊಡಬೇಕೆಂದು ಸಭೆ ಒತ್ತಾಯಿಸುತ್ತದೆ. ಧರಣಿ ಸತ್ಯಾಗ್ರಹ ನಡೆಯುವ ಸ್ಥಳವನ್ನು ಈ ಹಿಂದೆ ಚಳವಳಿ ಕೇಂದ್ರವಾಗಿದ್ದ ಸಿಲ್ವರ್ ಜ್ಯೂಬಿಲಿ ಪಾರ್ಕ್ ಬದಲಿಗೆ ಜಿಲ್ಲಾ ಕಛೇರಿಯ ಮುಂಭಾಗದ ವಿಶ್ವೇಶ್ವರಯ್ಯ ಪ್ರತಿಮೆ ಮುಂಭಾಗ ಧರಣಿ ನಡೆಸಲು ತೀರ್ಮಾನಿಸಲಾಯಿತು[34]. ಈ ಸಭೆಯಲ್ಲಿ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷ ಜಿ.ಮಾದೇಗೌಡ, ಮಂಡ್ಯ ಕ್ಷೇತ್ರದ ಅಂದಿನ ಲೋಕಸಭಾ ಸದಸ್ಯರು, ವಿಧಾನಸಭೆಯ ಹಾಗೂ ವಿಧಾನ ಪರಿಷತ್ ಸದಸ್ಯರು ಹಾಗೂ ಇತರರು ಸಭೆಯಲ್ಲಿ ಹಾಜರಿದ್ದರು.

ಜಿ.ಮಾದೇಗೌಡರ ನೇತೃತ್ವದಲ್ಲಿ ಅಪಾರ ಸಂಖ್ಯೆಯ ರೈತರು, ವಿದ್ಯಾರ್ಥಿಗಳು, ವರ್ತಕರು ಸಂಘಟಿತರಾಗಿ ಜಿಲ್ಲಾಧಿಕಾರಿಗಳ ಕಛೇರಿಯ ಮುಂಭಾಗದ ವಿಶ್ವೇಶ್ವರಯ್ಯ ಪ್ರತಿಮೆಯ ಮುಂಭಾಗ ಸಾಂಕೇತಿಕ ರಸ್ತೆ ತಡೆ ನಡೆಸಿ ಪ್ರತಿಭಟನೆಗೆ ಚಾಲನೆ ನೀಡಲಾಯಿತು. ಆದರೂ ಪೂರ್ವ ನಿಗಧಿಯಂತೆ ಸೆಪ್ಟೆಂಬರ್ 12ರ ಮಧ್ಯರಾತ್ರಿ ಕಾವೇರಿ ನದಿಯ ನೀರನ್ನು ತಮಿಳುನಾಡಿಗೆ ಹರಿಸಲು ಪ್ರಾರಂಭಿಸಲಾಯಿತು. ಇದರಿಂದ ಕೋಪಗೊಂಡ ರೈತನಾಯಕರು ಜಿ.ಮಾದೇಗೌಡರ ನೇತೃತ್ವದಲ್ಲಿ ಸರ್.ಎಂ.ವಿಶ್ವೇಶ್ವರಯ್ಯ ಪ್ರತಿಮೆ ಮುಂಭಾಗ 13ನೇ ಸೆಪ್ಟಂಬರ್ 2012 ರಿಂದ ಉಗ್ರ ಚಳವಳಿ ಪ್ರಾರಂಭಿಸಿತು. ಈ ತೀರ್ಪಿಗೆ ಕಾರಣರಾದ ಸುಪ್ರೀಂಕೋರ್ಟ್, ತಮಿಳುನಾಡು, ಕರ್ನಾಟಕದ ವಕೀಲರಾದ ನಾರಿಮನ್ ಹಾಗೂ ಕರ್ನಾಟಕದ ರೈತರ ಹಿತ ಸಂರಕ್ಷಿಸದ ಮುಖ್ಯಮಂತ್ರಿ

ಜಗದೀಶ್‌ಶೆಟ್ಟರನ್ನು ಟೀಕಿಸುತ್ತಾ. ಧಿಕ್ಕಾರ ಕೂಗುತ್ತಾ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದರು. ಮತ್ತೇ ಚಳುವಳಿಯನ್ನು ಆರಂಭಿಸಲು ಕರೆ ನೀಡಿದರು. ಚಳವಳಿಯ ನಾಯಕತ್ವ ವಹಿಸಿದ ಜಿ.ಮಾದೇಗೌಡರು ಸೆಪ್ಟಂಬರ್ 19 ರವರೆಗೆ ಧರಣಿ ಸತ್ಯಾಗ್ರಹವನ್ನು ನಡೆಸುತ್ತಾರೆ ಹಾಗೂ ಮಂಡ್ಯ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಧರಣಿ ನಡೆಯಲಿ ಎಂದು ಘೋಷಿಸಿ ಚಳವಳಿಗಾರರನ್ನು ಹುರಿದುಂಬಿಸಿದರು. ಸೆಪ್ಟೆಂಬರ್ 14 ರಂದು ಚಳವಳಿ ಮುಂದುವರಿಸಿದ ಜಿ.ಮಾದೇಗೌಡರು ಸೆಪ್ಟೆಂಬರ್ 15 ರಂದು ಮಂಡ್ಯ ಜಿಲ್ಲಾ ಬಂದ್‌ಗೆ ಕರೆಕೊಟ್ಟರು. ಬಂದ್ ಸಂಪೂರ್ಣವಾಗಿ ಯಶಸ್ವಿಯಾಯಿತು. ರೈತ ಹಿತರಕ್ಷಣಾ ಸಮಿತಿಯ ವತಿಯಿಂದ ಕಪ್ಪುಪಟ್ಟಿ ಧರಿಸಿ ಪ್ರತಿಭಟನೆಯ ತೀವ್ರತೆಯನ್ನು ಹೆಚ್ಚಿಸಿದರು. ಸೆಪ್ಟೆಂಬರ್ 16 ರಂದು ಧರಣಿ ಸತ್ಯಾಗ್ರಹದ ವೇದಿಕೆಯಲ್ಲಿ ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ಸಭೆ ನಡೆದು ಕೆಲವು ನಿರ್ಣಯಗಳನ್ನು ಕೈಗೊಂಡಿತು. ಬೆಂಗಳೂರಿನ ಮುಖ್ಯಮಂತ್ರಿ ಗೃಹ ಕಛೇರಿ ಕೃಷ್ಣದಲ್ಲಿ ಜಗದೀಶ್ ಶೆಟ್ಟರರ ಅಧ್ಯಕ್ಷತೆಯಲ್ಲಿ ನಡೆದ ಸರ್ವಪಕ್ಷ ಸಭೆ ಕೈಗೊಂಡ ಸರ್ಕಾರದ ನಿರ್ಧಾರವನ್ನು ಸಭೆಯು ಅಭಿನಂದಿಸಿ ಬೆಂಬಲ ಘೋಷಿಸಿತು. ಒಂದು ವೇಳೆ ನೀರು ಬಿಡುವ ಸ್ಥಿತಿ ಎದುರಾದರೆ ರಾಜ್ಯದ ಎಲ್ಲಾ ಸಂಸದರು, ರಾಜ್ಯಸಭೆ ಸದಸ್ಯರು, ರಾಜ್ಯವನ್ನು ಪ್ರತಿನಿಧಿಸುತ್ತಿರುವ ಕೇಂದ್ರ ಸಚಿವರು ಹಾಗೂ ಮುಖ್ಯಮಂತ್ರಿಗಳು ಸಹ ರಾಜೀನಾಮೆ ನೀಡಿ ನಮ್ಮೊಡನೆ ಹೋರಾಟಕ್ಕೆ ಇಳಿಯಲು ಬದ್ಧರಾಗಬೇಕು ಎಂದು ತಿಳಿಸಿದರು.

ದೆಹಲಿಯಲ್ಲಿ ಸೆಪ್ಟಂಬರ್ 19 ರಂದು ನಡೆಯಲಿರುವ ಕಾವೇರಿ ನದಿ ಪ್ರಾಧಿಕಾರದ ಸಭೆಯಲ್ಲಿ ರಾಜ್ಯ ಸರ್ಕಾರ ರಾಜ್ಯದ ಬರ ಪರಿಸ್ಥಿತಿಯನ್ನು ಸಮರ್ಥವಾಗಿ ಮನವರಿಕೆ ಮಾಡಿಕೊಡಬೇಕು. ಯಾವುದೆ ಕಾರಣಕ್ಕೂ ರಾಜ್ಯ ಸರ್ಕಾರ ತಮಿಳುನಾಡಿಗೆ ನೀರು ಬಿಡಲು ಸಮ್ಮತಿಸಬಾರದು ಎಂದು ಸಭೆ ಆಗ್ರಹಿಸಿತು. ತಮಿಳುನಾಡಿನ ಮೆಟ್ಟೂರು ಜಲಾಶಯದಲ್ಲಿ 40 ಟಿಎಂಸಿಯಷ್ಟು ನೀರು ಸಂಗ್ರಹವಿದೆ. ಆ ನೀರು ಅಲ್ಲಿನ ಸಾಂಬಾ ಬೆಳೆಗೆ ಸಾಕಾಗುತ್ತದೆ. ಹಿಂಗಾರು ಮಳೆಯಿಂದ ಹೆಚ್ಚು ಪ್ರಮಾಣದಲ್ಲಿ ಮೆಟ್ಟೂರು ಅಣೆಕಟ್ಟೆಗೆ ನೀರು ಬರುವ ಸಂಭವವಿದೆ. ಆದರೆ ಕರ್ನಾಟಕದಲ್ಲಿ ಮುಂಗಾರು ಮಳೆ ಕೈಕೊಟ್ಟಿರುವುದರಿಂದ ಕನ್ನಂಬಾಡಿ ಕಟ್ಟೆಯಲ್ಲಿ ಕೇವಲ 26 ಟಿಎಂಸಿ ನೀರಿದೆ. ಇದು ಕೃಷಿಗೆ ಹಾಗೂ ಕುಡಿಯಲು ಸಾಲದು. ಈ ಸಂಕಷ್ಟದ ಪರಿಸ್ಥಿತಿಯನ್ನು ರಾಜ್ಯ ಸರ್ಕಾರ ಕಾವೇರಿ ನದಿ ಪ್ರಾಧಿಕರ ಸಭೆಗೆ ಮನವರಿಕೆ ಮಾಡಿಕೊಡಬೇಕೆಂದು ಅಗ್ರಹಿಸಿತು. ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿ ಸೆಪ್ಟೆಂಬರ್ 19 ರವರೆಗೆ ಶಾಂತಿಯುತವಾಗಿ, ಅಹಿಂಸಾತ್ಮಕವಾಗಿ ಚಳವಳಿ ನಡೆಸಿಕೊಂಡು ಬರುತ್ತದೆ. ಕಾವೇರಿ ನದೀ ಪ್ರಾಧಿಕಾರದ ಸಭೆಯಲ್ಲಿ ರಾಜ್ಯಕ್ಕೆ ಅನ್ಯಾಯವಾಗುವ ತೀರ್ಮಾನ ಕೈಗೊಂಡರೆ ಮುಂದಿನ ದಿನಗಳಲ್ಲಿ ಉಗ್ರ ಸ್ವರೂಪದ ಚಳವಳಿ ನಡೆಸಲು ಸಭೆ ತೀರ್ಮಾನಿಸಿತು. ಈ ಮೇಲಿನ ಪ್ರಮುಖ ನಿರ್ಣಯಗಳನ್ನು ಮುಖ್ಯಮಂತ್ರಿಗಳಿಗೆ, ರಾಜ್ಯದ ಕೇಂದ್ರ ಸಚಿವರಿಗೆ ಹಾಗೂ ಲೋಕಸಭಾ

ಸದಸ್ಯರಿಗೆ ಕಳುಹಿಸಲು ಸಭೆ ನಿರ್ಧರಿಸಿತು[35]. ಸಭೆಯಲ್ಲಿ ಸಮಿತಿ ಉಪಾಧ್ಯಕ್ಷ ಎಂ.ಎಸ್.ಆತ್ಮಾನಂದ, ಪ್ರಧಾನ ಕಾರ್ಯದರ್ಶಿ ಎನ್.ರಾಜು, ಇತರರು ಸೇರಿದ್ದರು. 17ರಂದು ಮುಂದುವರೆದ ಧರಣಿ ಸತ್ಯಾಗ್ರಹದಲ್ಲಿ ಅನೇಕ ರಾಜಕೀಯ ನಾಯಕರು, ವಿದ್ಯಾರ್ಥಿಗಳು, ಹಲವು ಸಂಘ–ಸಂಸ್ಥೆಗಳು ಭಾಗವಹಿಸಿ ಬೆಂಬಲ ಸೂಚಿಸಿದರು. ಹೀಗೆ ಶಾಂತ ರೀತಿಯಲ್ಲಿಯೇ ಧರಣಿ ಸತ್ಯಾಗ್ರಹ ನಡೆಯಿತು. 19ನೇ ಸೆಪ್ಟಂಬರ್ 2012ರಂದು ಪೂರ್ವ ನಿಗಧಿಯಂತೆ ಒಂಬತ್ತು ವರ್ಷಗಳ ತರುವಾಯ ಅಂದಿನ ಪ್ರಧಾನಿ ಮನಮೋಹನ್‌ಸಿಂಗ್ ನೇತೃತ್ವದಲ್ಲಿ ಸಭೆ ನಡೆಯಿತು. ನಾಲ್ಕು ರಾಜ್ಯಗಳ ನಿಯೋಗವಿದ್ದ ಈ ಪ್ರಾಧಿಕಾರದ ಸಭೆಯಲ್ಲಿ ಕರ್ನಾಟಕದಿಂದ ಮುಖ್ಯಮಂತ್ರಿ ಜಗದೀಶ್‌ಶೆಟ್ಟರ್, ಸಚಿವ ಬಸವರಾಜಬೊಮ್ಮಾಯಿ ಉಪಮುಖ್ಯಮಂತ್ರಿ. ಆರ್.ಅಶೋಕ್ ಭಾಗವಹಿಸಿ ರಾಜ್ಯದ ನೀರಿಲ್ಲದ ಪರಿಸ್ಥಿತಿಯನ್ನು ಪ್ರಾಧಿಕಾರದ ಸಭೆಗೆ ಮನವರಿಕೆ ಮಾಡಿಕೊಟ್ಟರು.

ಇದಕ್ಕೆ ಒಪ್ಪದ ತಮಿಳುನಾಡು ಸರ್ಕಾರ ಪ್ರತಿನಿತ್ಯ 1 ಟಿ.ಎಂ.ಸಿ. ನೀರು ಬಿಡುವಂತೆ ಒತ್ತಾಯಿಸಿತು. 2 ರಾಜ್ಯಗಳ ಅಹವಾಲು ಆಲಿಸಿದ ಪ್ರಧಾನಿಗಳು ಸಮನ್ವಯಕ್ಕೆ ಬರುವಂತೆ ಸೂಚಿಸಿ ಸಭೆ ಮುಂದೂಡಿದ್ದರು. ಮತ್ತೆ ಸಭೆ ಸೇರಿದಾಗ ಒಮ್ಮತಕ್ಕೆ ಬಾರದನ್ನ ಗಮನಿಸಿದ ಪ್ರಧಾನಿ ಕರ್ನಾಟವು ಸೆಪ್ಟೆಂಬರ್ 21 ರಿಂದ ಅಕ್ಟೋಬರ್ 15 ರವರೆಗೆ ಪ್ರತಿನಿತ್ಯ 9000 ಕ್ಯೂಸೆಕ್ ನೀರು ಹರಿಸಬೇಕೆಂದು ಸೂಚಿಸಿದರು[36] ಈ ಸೂಚನೆಯನ್ನು 2 ಸರ್ಕಾರಗಳೂ ಒಪ್ಪಲಿಲ್ಲ. ಪ್ರಧಾನಿಯವರ ಸೂಚನೆ ಮಂಡ್ಯದ ಜನತೆಗೆ ಮತ್ತೆ ಹೋರಾಟಕ್ಕೆ ನಾಂದಿಯಾಯಿತು, ಪ್ರತಿಭಟನೆ ಆರಂಭಿಸಿದರು. ರೈಲು ಮತ್ತು ಬಸ್ಸುಗಳನ್ನು ತಡೆದು ರಸ್ತೆಗೆ ಬೆಂಕಿ ಹಾಕಿದರು. ಈ ಆಘಾತಕಾರಿ ವಿಷಯದ ಬಗ್ಗೆ ಚರ್ಚಿಸಲು 20ನೇ ಸೆಪ್ಟಂಬರ್ 2012ರಂದು ಜಿ.ಮಾದೇಗೌಡರ ನೇತೃತ್ವದಲ್ಲಿ ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿಯು ತುರ್ತು ಸಭೆ ನಡೆಸಿತು. ಪ್ರಧಾನಿಯವರ ಆದೇಶ ಖಂಡಿಸಿದ ಸಭೆ ನೀರು ಬಿಡುವುದಿಲ್ಲ ಎಂದಿರುವ ಮುಖ್ಯಮಂತ್ರಿಗಳು ತಮ್ಮ ನಿಲುವಿನಿಂದ ಹಿಂದೆ ಸರಿಯಬಾರದೆಂದು ಆಗ್ರಹಿಸಿದರು ಜಿ.ಮಾದೇಗೌಡರ ನೇತೃತ್ವದಲ್ಲಿ ಹೋರಾಟಕ್ಕಿಳಿದ ಜಿಲ್ಲೆಯ ರೈತ ನಾಯಕರು ಹಾಗೂ ರಾಜಕೀಯ ವ್ಯಕ್ತಿಗಳು ಪಕ್ಷಾತೀತವಾಗಿ ಪ್ರಧಾನಿಯವರ ನಿಲುವು ಹಾಗೂ ತಮಿಳುನಾಡಿನ ಹಠಮಾರಿತನವನ್ನು ಖಂಡಿಸಿದರು.

ಮುಂದುವರೆದು 21ನೇ ಸೆಪ್ಟಂಬರ್ 2012ರ ಧರಣಿ ಸತ್ಯಾಗ್ರಹದಲ್ಲಿ ರಾಜ್ಯಾದ್ಯಂತ ಆಗಮಿಸಿದ ಸಾಹಿತಿಗಳು, ರಾಜಕಾರಣಿಗಳು ಹಾಗೂ ಚಿತ್ರನಟರು ಭಾಗವಹಿಸಿ ಕಾವೇರಿ ವಿರೋಧಿ ನಿಲುವನ್ನು ಬಲವಾಗಿ ಖಂಡಿಸಿದ್ದರು. ಈ ಎಲ್ಲಾ ಸಂದರ್ಭದಲ್ಲಿಯೋ ಜಿ.ಮಾದೇಗೌಡರು ಗಾಂಧಿತತ್ವದ ಮೂಲಕವೇ ಚಳವಳಿ ಮುನ್ನಡೆಸುತ್ತಿದ್ದರು. ಈ ನಡುವೆ ಸೆಪ್ಟೆಂಬರ್ 21ರಂದು ಕಾವೇರಿ ಪ್ರಾಧಿಕಾರದ ಸಭೆಗೆ

ಕರ್ನಾಟಕ ಸರ್ಕಾರವು ಪುನರ್ ಪರಿಶೀಲನಾ ಅರ್ಜಿ ಸಲ್ಲಿಸಿತು ಹಾಗೂ ತುರ್ತು ಸಚಿವ ಸಂಪುಟ ಸಭೆಯಲ್ಲಿ ತಮಿಳುನಾಡಿಗೆ ನೀರು ಹರಿಸದಂತೆ ನಿರ್ಣಯಕೈಗೊಳ್ಳಲಾಯಿತು. ನಿರಂತರವಾಗಿ ನಡೆಯುತ್ತಿದ್ದ ಧರಣಿಯಲ್ಲಿ ಸೆಪ್ಟೆಂಬರ್ 23 ರಂದು ಆದಿಚುಂಚನಗಿರಿ ಮಠಾಧೀಶರಾದ ಬಾಲಗಂಗಾಧರನಾಥ ಸ್ವಾಮೀಜಿ ಅವರು ಭಾಗವಹಿಸಿ ಚಳವಳಿ ನಿರತ ರೈತರಿಗೆ ಹಾಗೂ ಜಿ.ಮಾದೇಗೌಡರಿಗೆ ಬೆಂಬಲ ಸೂಚಿಸಿದರು. ಜಿ.ಮಾದೇಗೌಡರ ಸೂಚನೆಯಂತೆ ಬೆಂಗಳೂರಿನಲ್ಲಿಯೂ ಕಾವೇರಿ ನದಿ ಪ್ರಾಧಿಕಾರ ತೀರ್ಪಿನ ವಿರುದ್ಧ ಚಳವಳಿ ನಡೆಯಿತು. ಚಳವಳಿಯು ರಾಜ್ಯದ ದಕ್ಷಿಣ ಭಾಗದಲ್ಲಿ ಉಗ್ರಸ್ವರೂಪ ಪಡೆದುಕೊಳ್ಳುತ್ತಿದ್ದಂತೆ ತಮಿಳುನಾಡು ಸರ್ಕಾರ ಸೆಪ್ಟೆಂಬರ್ 24 ರಂದು ಸುಪ್ರೀಂಕೋರ್ಟಿಗೆ ಅರ್ಜಿ ಸಲ್ಲಿಸಿ ನ್ಯಾಯ ದೊರಕಿಸುವಂತೆ ಕೋರಿತು. ಪ್ರತಿಯಾಗಿ ಕಾವೇರಿ ನದಿ ಪ್ರಾಧಿಕಾರ ಸಭೆ ಕೈಕೊಂಡ ತೀರ್ಪು ಕಾನೂನುಬಾಹಿರ ಎಂದು ಘೋಷಿಸಬೇಕೆಂದು ಮಂಡ್ಯದ ರೈತರು ಸೆಪ್ಟೆಂಬರ್ 25 ರಂದು ಅರ್ಜಿ ಸಲ್ಲಿಸಿದರು. ಸೆಪ್ಟೆಂಬರ್ 28 ರಂದು ಸರ್ವೋಚ್ಚ ನ್ಯಾಯಾಲಯವು ಈ 2 ಅರ್ಜಿಗಳನ್ನು ಕೈಗೆತ್ತಿಕೊಂಡು ವಿಚಾರಣೆ ನಡೆಸಿ 2 ರಾಜ್ಯಗಳ ಬಗ್ಗೆ ಅಸಮಾನಧಾನ ವ್ಯಕ್ತಪಡಿಸಿ ಅತ್ಯುನ್ನತ ಸಂಸ್ಥೆ ಆದ ಕಾವೇರಿ ನದಿ ಪ್ರಾಧಿಕಾರ ನೀಡಿರುವ ನಿದರ್ಶನದಂತೆ ತಮಿಳುನಾಡಿಗೆ ಪ್ರತಿ ನಿತ್ಯ 9000 ಕ್ಯುಸೆಕ್ ನೀರು ಬಿಡುವಂತೆ ಕರ್ನಾಟಕಕ್ಕೆ ಸೂಚಿಸಿ ಆದೇಶ ನೀಡಿತು[37]. ಈ ಆದೇಶ ಖಂಡಿಸಿ ಸೆಪ್ಟೆಂಬರ್ 29ರಂದು ಮಂಡ್ಯದಲ್ಲಿ ಸಮಿತಿ ಅಧ್ಯಕ್ಷರಾದ ಜಿ.ಮಾದೇಗೌಡರ ನೇತೃತ್ವದಲ್ಲಿ ಅಪಾರ ಸಂಖ್ಯೆಯ ಜನಸ್ತೋಮ ಜಮಾಯಿಸಿತ್ತು ಹಾಗೂ ಉಗ್ರವಾಗಿ ಖಂಡಿಸಿತ್ತು. ಅದೇ ದಿನ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯು ಗಾಂಧಿಭವನದಲ್ಲಿ ಸಭೆ ಸೇರಿ ಚಳವಳಿಯ ರೂಪುರೇಷೆಗಳ ಬಗ್ಗೆ ಚರ್ಚಿಸಿ ಪ್ರಮುಖ ನಿರ್ಣಯಗಳನ್ನು ತೆಗೆದುಕೊಂಡಿತು.

ತಮಿಳುನಾಡಿಗೆ ನೀರು ಬಿಡದಂತೆ ಕೈಗೊಂಡಿರುವ ನಿರ್ಧಾರಕ್ಕೆ ಬದ್ಧರಾಗಿರಬೇಕು ರಾಜ್ಯ ಸರ್ಕಾರ ತನ್ನ ನಿಲುವಿಗೆ ಎಂತಹ ಸಂದರ್ಭ ಬಂದರೂ ತಲೆಬಾಗಬಾರದು. ಕೃಷ್ಣರಾಜಸಾಗರ ಮತ್ತು ಕಬಿನಿ ಅಣೆಕಟ್ಟೆಯಲ್ಲಿರುವ ನೀರನ್ನು ಕಾಯ್ದುಕೊಳ್ಳಲು ರೈತರೇ ಸನ್ನದ್ದರಾಗಬೇಕು. ಪ್ರಧಾನಿಗೆ ವಸ್ತುಸ್ಥಿತಿ ವಿವರಿಸಿ ಆದೇಶವನ್ನು ಪುನರ್ ಪರಿಶೀಲನೆ ಮಾಡುವಂತೆ ಸರ್ಕಾರ ಒತ್ತಡ ತರಬೇಕು. ಮುಂದಿನ ಉಗ್ರ ರೂಪದ ಹೋರಾಟಕ್ಕೆ ಸಿದ್ಧತೆ ಮಾಡಿಕೊಳ್ಳಲು ಅನುವಾಗುವಂತೆ ಮನೆಗೆ ಒಬ್ಬರಂತೆ ಚಳವಳಿಗಾರರನ್ನು ಕಳುಹಿಸಬೇಕು. ಹೋರಾಟವು ಶಾಂತಿಯುತವಾಗಿ ನಡೆಯಬೇಕು. ಯಾವುದೇ ಕಾರಣಕ್ಕೂ ದಾರಿ ತಪ್ಪಬಾರದು, ಸಾರ್ವಜನಿಕರಿಗೆ ತೊಂದರೆಯೂ ಆಗಬಾರದು[38] ಎಂದು ನಿರ್ಣಯಗಳನ್ನು ಕೈಗೊಂಡರು. ಸರ್ವೋಚ್ಚ ನ್ಯಾಯಾಲಯದ ಆದೇಶಕ್ಕೆ ತಲೆಬಾಗಿ ಮಧ್ಯರಾತ್ರಿ ನೀರು ಬಿಡಲಾಯ್ತು. ಇದರಿಂದಾಗಿ ಕಾವೇರಿ ಚಳವಳಿ ತೀವ್ರ ಸ್ವರೂಪ ಪಡೆಯಿತು. ಜಿ.ಮಾದೇಗೌಡರ ನೇತೃತ್ವದಲ್ಲಿ ರೈಲು, ರಸ್ತೆ ತಡೆ, ಬೈಕು ರ್‍ಯಾಲಿ,

ಅಣುಕುತಿಥಿ ಮುಂತಾದವುಗಳು ನಡೆದವು. ಅಕ್ಟೋಬರ್ 1 ರಂದು ಕಾವೇರಿ ಚಳವಳಿ ತೀವ್ರ ಸ್ವರೂಪ ಪಡೆದುಕೊಂಡಿತು. ಜಿ.ಮಾದೇಗೌಡರ ಕರೆಗೆ ಓಗೊಟ್ಟು ಸಾವಿರಾರು ಜನರು, ಮಂಡ್ಯ ಹಾಗೂ ತಾಲ್ಲೂಕು ಕೇಂದ್ರದಲ್ಲಿ ಜಮಾಯಿಸಿದ್ದರು. ಅಕ್ಟೋಬರ್ 03 ರಂದು ಜಿ.ಮಾದೇಗೌಡರ ನೇತೃತ್ವದಲ್ಲಿ ಕೃಷ್ಣರಾಜ ಸಾಗರಕ್ಕೆ ಸಾವಿರಾರು ರೈತರು ಸಮಾರೋಪಾದಿಯಲ್ಲಿ ಮುತ್ತಿಗೆ ಹಾಕಿದರು. 25,000 ಸಾವಿರಕ್ಕೂ ಹೆಚ್ಚು ಮಂದಿ ರಾಜ್ಯದ ಅನೇಕ ಭಾಗದಿಂದ ಕೃಷ್ಣರಾಜಸಾಗರ ಬಳಿ ಜಮಾಯಿಸಿದರು. ಬೃಹತ್ ಸಂಖ್ಯೆಯ ಚಳವಳಿಗಾರರನ್ನು ಜಿ.ಮಾದೇಗೌಡರೇ ಸೂಕ್ತ ಮಾರ್ಗದರ್ಶನ ನೀಡುತ್ತಾ ಚಳವಳಿಯನ್ನು ಯಶಸ್ವಿಯಾಗಿ ನಿರ್ದೇಶಿಸಿದರು. ಆದರೂ ಜಿಲ್ಲೆಯ ಜನತೆಯ ರೋಷ ಮುಗಿಲು ಮುಟ್ಟಿತ್ತು. ಅನ್ನದ ಬಟ್ಟಲನ್ನು ಕಿತ್ತುಕೊಳ್ಳುವ ಆದೇಶದ ವಿರುದ್ಧ ಯಾವುದೇ ತ್ಯಾಗಕ್ಕೂ ಸಿದ್ಧರಾದ ಚಳವಳಿಗಾರರು ಆವೇಶಭರಿತವಾಗಿ ತಾಳ್ಮೆ ಕಳೆದುಕೊಂಡು ಪೊಲೀಸ್ ಬ್ಯಾರಿಕೇಡ್ ಮುಳ್ಳಿನ ತಂತಿ ಮುಂತಾದವುಗಳನ್ನು ಮುರಿದು ಪೊಲೀಸ್ ಸರ್ಪಗಾವಲನ್ನು ಭೇದಿಸಿ ಮುನ್ನುಗ್ಗಿದ್ದ ಚಳವಳಿಗಾರರೂ, ಕಾವೇರಿ ಅಣೆಕಟ್ಟೆಯನ್ನು ತಮ್ಮ ವಶಕ್ಕೆ ಪಡೆಯಲು ಪ್ರಯತ್ನಿಸಿದ್ದರು ಎಷ್ಟೇ ಉಗ್ರ ಹೋರಾಟ ನಡೆಸಿದರೂ ಕೃಷ್ಣರಾಜಸಾಗರಕ್ಕೆ ಮುತ್ತಿಗೆ ಫಲಕಾರಿ ಆಗಲಿಲ್ಲ. ಇದರಿಂದ ಬೇಸತ್ತ ಜಿ.ಮಾದೇಗೌಡರು ಅಕ್ಟೋಬರ್ 04ರಂದು ಮಂಡ್ಯದ ವಿಶ್ವೇಶ್ವರಯ್ಯ ಪ್ರತಿಮೆ ಮುಂಭಾಗ ಅಮರಣಾಂತ ಉಪವಾಸ ಸತ್ಯಾಗ್ರಹ ಕೂರುವುದಾಗಿ ಘೋಷಿಸಿದರು.

ಹೆಚ್.ಡಿ.ದೇವೇಗೌಡರ ಮನವಿ ಮೇರೆಗೆ ಆಮರಣಾಂತ ಉಪವಾಸ ಕೈಬಿಟ್ಟು ಸದರಿ ಉಪವಾಸ ಸತ್ಯಾಗ್ರಹ ನಡೆಸಲು ತೀರ್ಮಾನಿಸಿದರು. ಜಿ.ಮಾದೇಗೌಡರ ನೇತೃತ್ವದಲ್ಲಿ ಅಕ್ಟೋಬರ್ 12 ರವರೆಗೆ ಸರದಿ ಮೇರೆಗೆ ಉಪವಾಸ ಸತ್ಯಾಗ್ರಹ ನಡೆದು, ಇಡೀ ರಾಷ್ಟ್ರದ ಗಮನ ಸಳೆಯಿತು. ಕಾವೇರಿ ನದೀ ನೀರಿನ ಸಂಬಂಧಿಸಿದ ಪ್ರಕರಣ, ಸುಪ್ರೀಂಕೋರ್ಟ್‌ನಲ್ಲಿ ಅಕ್ಟೋಬರ್ 19ಕ್ಕೆ ಮುಂದೂಡಲಾಗಿ ದೀರ್ಘಕಾಲದ ಕಾವೇರಿ ಚಳವಳಿಯನ್ನು ಸ್ಥಗಿತಗೊಳಿಸಲಾಯಿತು. ಚಳವಳಿಯಲ್ಲಿ ಭಾಗವಹಿಸಿದ್ದ ರಾಜ್ಯದ ಜನತೆಗೆ ಜಿಲ್ಲಾ ರೈತರ ಹಿರಕ್ಷಣಾ ಸಮಿತಿಯ ಅಧ್ಯಕ್ಷರಾದ ಜಿ.ಮಾದೇಗೌಡರು ಕೃತಜ್ಞತೆ ಸಲ್ಲಿಸಿದ್ದರು. ಡಿಸೆಂಬರ್ 05, 2012ರಂದು ಮಧ್ಯಂತರ ತೀರ್ಪು ನೀಡಿದ ಸರ್ವೋಚ್ಛ ನ್ಯಾಯಾಲಯವು ಪ್ರತಿನಿತ್ಯ 10,000 ಕ್ಯುಸೆಕ್‌ನಂತೆ 50,000 ಕ್ಯುಸೆಕ್ ನೀರನ್ನು ತಮಿಳುನಾಡಿಗೆ ಬಿಡುವಂತೆ ಕರ್ನಾಟಕಕ್ಕೆ ಆದೇಶಿಸಿತು[39]. ಇದರಿಂದ ರೊಚ್ಚಿಗೆದ್ದ ಜಿ.ಮಾದೇಗೌಡರು ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ನೇತೃತ್ವದಲಿ ಧರಣಿ ಪ್ರಾರಂಭಿಸಿದರು. ಶಾಂತ ರೀತಿಯಲ್ಲಿಯೇ ನಡೆಯುತ್ತಿದ್ದ ಚಳವಳಿ ಜಿ.ಮಾದೇಗೌಡರ ನೇತೃತ್ವದಲ್ಲಿ ಜಿಲ್ಲಾಧಿಕಾರಿ ಕಛೇರಿ ಮುಂಭಾಗ ಧರಣಿ ನಡೆಸಿತು. ವಚನ ಭ್ರಷ್ಟ ಮುಖ್ಯಮಂತ್ರಿ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಬೇಕೆಂದು ಅಗ್ರಹಿಸಿದರು. ಜಿಲ್ಲಾಧಿಕಾರಿ ಕಛೇರಿಗೆ ಮುತ್ತಿಗೆ ಹಾಕಲು ಪ್ರಯತ್ನಿಸಿದ್ದರಿಂದಾಗಿ ಜಿ.ಮಾದೇಗೌಡರು ಸೇರಿದಂತೆ

ಸುಮಾರು 50 ಜನ ಚಳವಳಿಗಾರರನ್ನು ಡಿಸೆಂಬರ್ 7ರಂದು ಬಂಧಿಸಿ ಬಿಡುಗಡೆ ಮಾಡಿದರು. ಡಿಸೆಂಬರ್ 08ರಂದು ಜಿ.ಮಾದೇಗೌಡರ ನೇತೃತ್ವದಲ್ಲಿ ಮಂಡ್ಯ ಬಂದ್ ಸ್ವಯಂ ಪ್ರೇರಿತವಾಗಿ ನಡೆಯಿತು. ಡಿಸೆಂಬರ್ 09ರಂದು ಮತ್ತೊಂದು ಬಾರಿ ಕೃಷ್ಣರಾಜಸಾಗರಕ್ಕೆ ಮುತ್ತಿಗೆ ಹಾಕುವ ವಿಫಲ ಯತ್ನ ನಡೆಸಿ ಜಿ.ಮಾದೇಗೌಡರು ನೇತೃತ್ವದಲ್ಲಿ ಧರಣಿ ಸತ್ಯಾಗ್ರಹ ನಡೆಯಿತು. ಕೃಷ್ಣರಾಜಸಾಗರದಲ್ಲಿಯೇ ಚಳವಳಿಗಾರರನ್ನು ಕುರಿತು ಮಾತನಾಡಿದ ಜಿ.ಮಾದೇಗೌಡರು ತಮಿಳುನಾಡಿಗೆ ಹರಿಯುವ ನೀರನ್ನು ನಿಲ್ಲಿಸುವವರೆಗೆ ಉಪವಾಸ ಸತ್ಯಾಗ್ರಹ ನಡೆಸುವುದಾಗಿ ಘೋಷಣೆ ಮಾಡಿ ಸ್ಥಳದಲ್ಲೇ ಧರಣಿ ಕುಳಿತರು. ದಕ್ಷಿಣ ವಲಯ ಐಜಿಪಿ, ಜಿಲ್ಲಾಧಿಕಾರಿ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಮೊದಲಾದವರು ಸ್ಥಳಕ್ಕಾಗಮಿಸಿ ಜಿ.ಮಾದೇಗೌಡರ ಮನವೊಲಿಸಿದರು. ನ್ಯಾಯಾಲಯದ ಆದೇಶ ಪಾಲಿಸಲಾಗುತ್ತಿದೆ ಸಹಕರಿಸಬೇಕೆಂದು ವಿನಂತಿಸಿಕೊಂಡ ಕೋರಿಕೆಗೆ ಸ್ಪಂದಿಸಿದ ಜಿ.ಮಾದೇಗೌಡರು ಉಪವಾಸ ಸತ್ಯಾಗ್ರಹ ಅಂತ್ಯಗೊಳಿಸಿದರು. ಪರಿಣಾಮ 8000 ಕ್ಯುಸೆಕ್ ನೀರನ್ನು ಕಡಿತಗೊಳಿಸಿ 2000 ಕ್ಯುಸೆಕ್ ಮಾತ್ರ ಹರಿಸಲಾಯಿತು[40]. ಇದು ಜಿ.ಮಾದೇಗೌಡರ ಕಠಿಣವಾದ ಹೋರಾಟಕ್ಕೆ ಸಿಕ್ಕ ಜಯವಾಯಿತು. ಪ್ರಸ್ತುತವು ಕಾವೇರಿ ನದೀ ನೀರಿನ ವಿವಾದ ಬೂದಿ ಮುಚ್ಚಿದ ಕೆಂಡದಂತಿದ್ದು, ಇದಕ್ಕೆ ಪೂರಕವೆಂಬಂತೆ ದಿನಾಂಕ 16ನೇ ಜುಲೈ 2014ರಂದು ಜಿ.ಮಾದೇಗೌಡರು ಕೃಷ್ಣರಾಜ ಸಾಗರ ಅಣೆಕಟ್ಟೆಯಿಂದ ತಮಿಳುನಾಡಿಗೆ ನೀರು ಬಿಟ್ಟಿರುವುದನ್ನು ಖಂಡಿಸುತ್ತಾ, ಮುಖ್ಯಮಂತ್ರಿಗಳು ನಾನೂ ರೈತನ ಮಗನೇ ರೈತರ ಬಗ್ಗೆ ಅಪಾರ ಕಾಳಜಿ ಇದೆ ಎಂದು ಹೇಳುತ್ತಾರೆ. ಆದರೆ ನ್ಯಾಯಾಲಯಕ್ಕೆ ಹೆದರಿ ನೀರು ಬಿಡುತ್ತಿರುವುದು ಯಾವ ನ್ಯಾಯ ಎಂದು ಪ್ರಶ್ನಿಸುತ್ತಾ  ನೀರು ತಮಿಳುನಾಡಿಗೆ ಹರಿಯುವುದನ್ನು ತಕ್ಷಣ ನಿಲ್ಲಿಸದಿದ್ದರೆ ಸಿದ್ದರಾಮಯ್ಯ ಅವರನ್ನು ಮೈಸೂರು–ಬೆಂಗಳೂರು ಹೆದ್ದಾರಿಯಲ್ಲಿ ಸಂಚರಿಸಲು ಬಿಡುವುದಿಲ್ಲ ಎಂದು ತಮ್ಮದೇ ಪಕ್ಷದವರಾದ ಮುಖ್ಯಮಂತ್ರಿಯ ವಿರುದ್ಧವೇ ಗುಡುಗಿದರು[41]. ಜಿ.ಮಾದೇಗೌಡರು ರಾಜ್ಯದ, ಜಿಲ್ಲೆಯ ರೈತ ಹಿತರಕ್ಷಿಸಲು ತಮ್ಮ ಪಕ್ಷದ ವಿರುದ್ದವೇ ಹೋರಾಟ ನಡೆಸಲು ಹಿಂಜರಿಯುವುದಿಲ್ಲ. ಈ ಕಾರಣದಿಂದಾಗಿಯೇ ಜಿ.ಮಾದೇಗೌಡರಿಗೆ ಪಕ್ಷಾತೀತವಾಗಿ ಜಾತ್ಯಾತೀತವಾಗಿ ಇವರ ಹೋರಾಟಕ್ಕೆ ಸಹಸ್ರಾರು ಮಂದಿ ಬೆಂಬಲ ಸೂಚಿಸುವುದನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಅಂದಿನ ಕರ್ನಾಟಕದಲ್ಲಿ ಆಡಳಿತ ನಡೆಸುತ್ತಿರುವ ಮುಖ್ಯ ಮಂತ್ರಿಗಳಾದ ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ (ಐ) ಸರ್ಕಾರ ತಾಂತ್ರಿಕ ವರದಿಯ ಆಧಾರದ ಮೇರೆಗೆ ಮೇಕೆದಾಟುವಿನಲ್ಲಿ ಕಾವೇರಿ ನದಿ ಭಾಗದಲ್ಲಿ 2 ಕಡೆ ಅಣೆಕಟ್ಟು ನಿರ್ಮಿಸಿ 70 ಟಿ.ಎಂ.ಸಿ. ನೀರು ಸಂಗ್ರಹಿಸುವ ನಿರ್ಧಾರ ಕೈಗೊಂಡಿದೆ[42]. ಈ ನಿರ್ಧಾರ ಮಂಡ್ಯ ಜಿಲ್ಲಾ ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷ ಗುರುದೇವರಹಳ್ಳಿ ಮಾದೇಗೌಡರ

ದೀರ್ಘಕಾಲಿನ ಸಂಘಟಿತ ರೈತ ಹೋರಾಟಕ್ಕೆ ಸಿಕ್ಕ ಜಯವಾಗಿದೆ ಎಂಬುದನ್ನು ಸಂಶೋಧನೆಯಿಂದ ನಿರೂಪಿಸಲಾಗಿದೆ.

ಜಿ.ಮಾದೇಗೌಡರು ತಮ್ಮ ಜೀವನುದ್ದಕ್ಕೂ ರೈತರ ಅಭ್ಯುದಯವನ್ನೇ ಬಯಸಿದವರು ಹಾಗೂ ಗಾಂಧೀತತ್ವಗಳಿಂದ ಆಕರ್ಷಿತರಾಗಿ ಅಕ್ಷರಶಃ ಅಳವಡಿಸಿಕೊಂಡಿದ್ದಾರೆ. 1962 ರಿಂದ ಪ್ರಸ್ತುತದವರೆಗೂ ಕಾವೇರಿ ಕಣಿವೆಯ ರೈತರಿಗೆ ಆಗುತ್ತಿರುವ ಅನ್ಯಾಯದ ವಿರುದ್ಧ ಜಾತ್ಯಾತೀತವಾಗಿ ಪಕ್ಷಾತೀತವಾಗಿ ಹೋರಾಟ ನಡೆಸುತ್ತಿದ್ದರು. ಆದರೆ ಕಾವೇರಿ ನದಿ ನೀರಿನ ಹೋರಾಟವು ನಿರಂತರವಾಗಿ ನಡೆದುಕೊಂಡು ಬಂದಿದ್ದು, ಅಲ್ಪ ಮಟ್ಟಿಗೆ ಯಶಸ್ವಿ ಕಾಣಲಾಗಿದೆ. ಇದಕ್ಕೆ ಕೇಂದ್ರ ಸರ್ಕಾರವಾಗಲಿ, ರಾಜ್ಯ ಸರ್ಕಾರವಾಗಲಿ, ಸುಪ್ರಿಂಕೋರ್ಟ್ ಆಗಲಿ ಸಮಸ್ಯೆಗೆ ಅಂತಿಮ ಪರಿಹಾರವನ್ನು ಕಂಡು ಹಿಡಿದುಕೊಳ್ಳಲು ಸಾಧ್ಯವಾಗಿಲ್ಲ. ಪ್ರತಿಭಾರಿ ಕಾವೇರಿ ಹೋರಾಟ ನಡೆದ ಸಂದರ್ಭದಲ್ಲಿಯೂ ಜಿ.ಮಾದೇಗೌಡರು ನೇತೃತ್ವ ವಹಿಸಿಕೊಳ್ಳುವ ಮೂಲಕ ದಕ್ಷಿಣ ಕರ್ನಾಟಕ ಭಾಗದ ಜಿಲ್ಲೆಗಳಿಗೆ ಆಗುವ ಅನ್ಯಾಯದ ವಿರುದ್ಧ ಧ್ವನಿ ಎತ್ತಿದ್ದಾರೆ. 92ನೇ ಇಳಿವಯಸ್ಸಿನಲ್ಲಿಯೂ ಸಹ ಹೋರಾಟಕ್ಕೆ ಬೆಂಬಲ ಸೂಚಿಸುತ್ತಿದ್ದಾರೆ. ಹಾಗೆಯೇ ನೇತೃತ್ವವನ್ನೂ ಸಹ ವಹಿಸಿಕೊಳ್ಳುತ್ತಿದ್ದಾರೆ. ಇದು ರೈತರು, ಕಾರ್ಮಿಕರು, ವಿದ್ಯಾರ್ಥಿಗಳು, ಯುವಜನಾಂಗ, ರಾಜಕಾರಣಿಗಳು, ಪ್ರಗತಿಪರ ಚಿಂತಕರು, ಮಹಿಳೆಯರು, ಎಲ್ಲಾ ವರ್ಗದ ಜನ ನಾಯಕರಾಗಿ ಕಾವೇರಿ ನದಿ ನೀರಿನ ಹಂಚಿಕೆ ಹೋರಾಟದಲ್ಲಿ ಜಿ.ಮಾದೇಗೌಡರ ಹೋರಾಟದ ಬಗ್ಗೆ ಸಂಶೋಧನೆಯಿಂದ ತಿಳಿದುಕೊಳ್ಳಬಹುದಾಗಿದೆ. ಪ್ರಸ್ತುತ ಮಂಡ್ಯ ರೈತ ಹಿತರಕ್ಷಣಾ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸತ್ತಿದ್ದಾರೆ.

ಮಳೆಯನ್ನೇ ಆಶ್ರಯಿಸಿದ್ದ ಜಿಲ್ಲೆಯ ಬಹುಭಾಗಕ್ಕೆ ಕಾವೇರಿ ನದಿ ನೀರು ಜೀವಾಮೃತವಾಗಿತ್ತು. ಆದರೂ ಜಿಲ್ಲೆಯ ಕೊನೆಯ ಭಾಗಕ್ಕೆ ಪರಿಪೂರ್ಣವಾಗಿ ತಲುಪುತ್ತಿರಲಿಲ್ಲ. ಇವರ ಶ್ರಮದ ಫಲವಾಗಿ ನಾಲೆಗಳ ಆಧುನೀಕರಣ. ಕೆರೆ ಕಟ್ಟೆಗಳ ದುರಸ್ತಿಯಿಂದಾಗಿ ಕಾವೇರಿ ನದೀ ನೀರು ಜಿಲ್ಲೆಯ ಕೊನೆಯ ಭಾಗಕ್ಕೆ ತಲುಪಿ ಅಂತರ್ಜಲ ಹೆಚ್ಚಿಸಿ ಮಂಡ್ಯ, ಮದ್ದೂರು, ಮಳವಳ್ಳಿ ತಾಲ್ಲೂಕುಗಳು ಹಚ್ಚ ಹಸಿರಿನಿಂದ ಕಂಗೊಳಿಸುವಲ್ಲಿ ಅವಿರತ ಶ್ರಮಿಸಿರುವುದು ಅವರ ಚಿಂತನೆಯನ್ನು ಅವಲೋಕಿಸಬಹುದಾಗಿದೆ.

## 4.4 ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಕಬ್ಬಿನ ಬೆಲೆ ಪರಿಷ್ಕರಣೆಗಾಗಿ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ (1981)

ಜಿ.ಮಾದೇಗೌಡರು ಕಾಳಮುದ್ದನದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪನೆ ಮಾಡಲು ಹೊರಟಾಗ ಈ ಸಕ್ಕರೆ ಕಾರ್ಖಾನೆಯು ರೈತರು, ರೈತರಿಗಾಗಿ, ರೈತರಿಂದಲೇ' ಅದು ನಡೆಯಬೇಕು ಎಂದು ಉದ್ದೇಶವನ್ನು ಹೊಂದಿದ್ದರು. ಆದರೆ ಎರಡು ಕೋಟಿಯಷ್ಟು ಬಂಡವಾಳ ಸಂಗ್ರಹಿಸುವುದು ಸಾಧ್ಯವಾಗದೇ ತಮಿಳುನಾಡಿನ ಸಕ್ಕರೆ ಕಾರ್ಖಾನೆಯ ಉದ್ಯಮಿ ಎನ್.ಮಹಾಲಿಂಗಮ್ ಅವರಿಗೆ ಲೈಸೆನ್ಸ್‌ಅನ್ನು ಷರತ್ತುಗಳೊಂದಿಗೆ ಹಸ್ತಾಂತರಿಸಿದರು. ಈ ಷರತ್ತುಗಳಲ್ಲಿ ಒಂದಾದ ಮಂಡ್ಯದಲ್ಲಿರುವ ಮೈಸೂರು ಸಕ್ಕರೆ ಕಾರ್ಖಾನೆಯು ರೈತರಿಗೆ ನೀಡುವ ಬೆಲೆಯನ್ನು ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ರೈತರಿಗೂ ನೀಡಬೇಕೆಂದು ಷರತ್ತು ವಿಧಿಸಿದರು. ಪ್ರಾರಂಭದಲ್ಲಿ ಷರತ್ತಿನಂತೆ ನಡೆದುಕೊಂಡರು. ಕಾಲಕ್ರಮೇಣ ಪರಿಷ್ಕರಣ ಬೆಲೆ ನೀಡುವಲ್ಲಿ ವಿಳಂಬ ಮಾಡುತ್ತಿದ್ದರು. ಹಣ ಬಟಾವಣೆಯು ವಿಳಂಬವಾಗುತ್ತಿತ್ತು. ಈ ವಿಚಾರವನ್ನು ರೈತರು ಕಾರ್ಖಾನೆಯ ನಿರ್ದೇಶಕರು ಹಾಗೂ ಶಾಸಕರು ಆದ ಜಿ.ಮಾದೇಗೌಡರ ಬಳಿಗೆ ದೂರು ಕೊಟ್ಟರು. ಕಾರ್ಖಾನೆಯ ಮಾಲೀಕರು ಆಡಳಿತ ಮಂಡಳಿಯ ಸಭೆ ಕರೆದಾಗ ಗೌಡರು ರೈತರು ಅನುಭವಿಸುತ್ತಿರುವ ಸಮಸ್ಯೆಗಳನ್ನು ವಿಸ್ತೃತವಾಗಿ ವಿವರಿಸಿದರೆ. ಕಬ್ಬಿಗೆ ಪರಿಷ್ಕರಣ ಬೆಲೆ ನಿಗಧಿ ಮಾಡಬೇಕು ಎಂಬುದಾಗಿ ಹೇಳಿದ್ದಾರೆ. ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರು ನಾನು ಮದ್ರಾಸಿನಲ್ಲಿ ದರ ಪರಿಸ್ಕರಣೆ ಮಾಡುತ್ತೇನೆಂದು ತಿಳಿಸಿದ್ದಾಗಿ ಇದಕ್ಕೆ ಪ್ರತಿಕ್ರಿಯೆಯಾಗಿ ಜಿ.ಮಾದೇಗೌಡರು ತಾವೇ ನಿಮಗೆ ಇಷ್ಟಬಂದಾಗೆ ಬೆಲೆ ನಿಗದಿ ಮಾಡಿಕೊಂಡ್ರೆ ನಾವೆಲ್ಲಾ ಯಾಕೆ ಇಂತಹ ಆಡಳಿತ ಮಂಡಳಿಯಲ್ಲಿ ಇರಬೇಕೆಂದು ಹೇಳಿದರು. ತಕ್ಷಣವೇ ನಿರ್ದೇಶಕ ಸ್ಥಾನಕ್ಕೆ ರಾಜಿನಾಮೆ ಕೊಟ್ಟು ಹೊರಬಂದರು[43].

ರೈತರಿಗೆ ಅನ್ಯಾಯವಾದರೆ ಯಾವುದೇ ಹುದ್ದೆಯಲ್ಲಿದ್ದರೂ ಒಂದು ಕ್ಷಣವೂ ಇರಲಾರರು ಹಾಗೂ ಅಧಿಕಾರಕ್ಕಾಗಿ ಅಂಟಿಕೊಂಡವರಲ್ಲ. ಇವರು ರೈತರಿಗೋಸ್ಕರ ಆಡಳಿತ ಪಕ್ಷದ ವಿರುದ್ಧವೇ ಧನಿ ಎತ್ತಿದ ಇನ್ನೊಂದು ಪ್ರಕರಣವನ್ನು ಕಾಣಬಹುದಾಗಿದೆ. ಆರ್.ಗುಂಡುರಾವ್ ಅವರು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಅವರ ಮಂತ್ರಿಮಂಡಲದಲ್ಲಿ ಜಿ.ಮಾದೇಗೌಡರು ಅರಣ್ಯ ಸಚಿವರಾಗಿ ಕಾರ್ಯನಿರ್ವಹಿಸು ತ್ತಿದ್ದರು. ಈ ಸಂದರ್ಭದಲ್ಲಿ ರೈತರು ಕಾಳಮುದ್ದನ ದೊಡ್ಡಿಯ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ವ್ಯವಸ್ಥಾಪಕರ ರೈತ ವಿರೋಧಿ ಧೋರಣೆಯನ್ನು ಖಂಡಿಸಿ ಕಾರ್ಖಾನೆ ಮುಂದೆ ಪ್ರತಿಭಟಿಸಿದರು. ನಂತರ ಅಣ್ಣೂರು ಸಿದ್ದೇಗೌಡರ ನೇತೃತ್ವದಲ್ಲಿ ಇಪ್ಪತ್ತೈದು ರೈತ ನಾಯಕರ ತಂಡ ಜಿ.ಮಾದೇಗೌಡರನ್ನು ಬೆಂಗಳೂರಿನಲ್ಲಿ ಭೇಟಿ

ಮಾಡಿ ರೈತರು ಸಾಗಿಸಿದ ಒಂದು ಟನ್ ಕಬ್ಬಿಗೆ 25.00 ರೂಪಾಯಿಗಳ ಷೇರು ಮತ್ತು 250 ರೂ. ಹಣ ಪಾವತಿಸಬೇಕೆಂದು ಮನವಿ ಮಾಡಿಕೊಂಡರು. ತಕ್ಷಣ ಸ್ಪಂದಿಸಿದ ಜಿ.ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಬಳಿಗೆ ರೈತ ನಾಯಕರುಗಳನ್ನು ಕರೆದುಕಂಡು ಹೋಗಿ ರೈತರ ಬೇಡಿಕೆಗಳನ್ನು ಈಡೇರಿಸುವಂತೆ ಮನವಿ ಮಾಡಿದರು. ಇದಕ್ಕೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ನೀವೆ ಆಡಳಿತ ಪಕ್ಷದ ಶಾಸಕರಾಗಿ, ಸಚಿವರಾಗಿ ನಿಮ್ಮ ಸರ್ಕಾರದ ಧೋರಣೆಯನ್ನು ನೀವೇ ಪ್ರತಿಭಟಿಸಬಾರದು ಎಂದು ತಿಳಿಸಿದರು. ಇದಕ್ಕೆ ಸೊಪ್ಪು ಹಾಕದ ಜಿ.ಮಾದೇಗೌಡರು ರೀ ಸ್ವಾಮಿ, ಮೊದಲು ನನ್ನ ಜನ, ಆಮೇಲೆ ಎಂ.ಎಲ್.ಎ., ನನ್ನ ಜನರೇ ಬೀದಿಗಿಳಿದಿರುವಾಗ ನಂದ್ಯಾವ ಸೀಮೆ ಮಂತ್ರಿಗಿರಿ ರೀ ನಿಮ್ಮ ಮುಖ್ಯಮಂತ್ರಿ ಗುಂಡೂರಾವ್ ಅವರಿಗೆ ನನ್ನ ಮಂತ್ರಿಗಿರಿ ವಾಪಸ್ ಕೊಟ್ಟಿಡಿ ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದರು[44]. ತರುವಾಯ ಛಲ ಬಿಡದೇ ರೈತರ ಬೇಡಿಕೆಗಳನ್ನು ಮುಖ್ಯಮಂತ್ರಿಗಳ ಗಮನಕ್ಕೆ ತಂದು ನ್ಯಾಯ ಒದಗಿಸಿಕೊಟ್ಟರು. ಇವರ ಹೋರಾಟದ ಮನೋಭಾವವನ್ನು ಅರಿತಿರುವ ಎಲ್ಲಾ ರೈತರು ಇಂದೂ ಸಹ ಎಲ್ಲಾ ಸಮಸ್ಯೆಗಳನ್ನು ಗೌಡರ ಗಮನಕ್ಕೆ ತಂದು ಬಗೆಹರಿಸಿಕೊಳ್ಳುತ್ತಾರೆ. ಈ ರೀತಿ ರೈತರಿಗೆ ಅನ್ಯಾಯವಾಗಿದೆ ಎಂದು ಕಂಡುಬಂದರೆ ಬೀದಿಗಳಿದು ಹೋರಾಟ ಮಾಡುತ್ತಾರೆ. ಪ್ರಸ್ತುತ 92ರ ಇಳಿ ವಯಸ್ಸಿನಲ್ಲಿಯು ರೈತರ ಸಬಲೀಕರಣಕ್ಕಾಗಿ ಅವಿರತ ದುಡಿಯುತ್ತಿದ್ದು ತಮ್ಮ ಜೀವನವನ್ನು ಮುಡುಪಾಗಿಟ್ಟಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬರುತ್ತದೆ. ಇವರು ಸಚಿವರಾಗಿ ತಮ್ಮ ಆಡಳಿತ ಪಕ್ಷದ ರೈತ ವಿರೋಧಿ ಧೋರಣೆಯ ವಿರುದ್ಧ ನೇರವಾಗಿ ಖಂಡಿಸಲು ಇದ್ದ ಧೈರ್ಯ ಅವರ ಪ್ರಾಮಾಣಿಕತೆ ನಿಸ್ವಾರ್ಥ ಸೇವೆ ಹಾಗೂ ಭ್ರಷ್ಟಾಚಾರದಿಂದ ಅಂತರ ಕಾಯ್ದುಕೊಂಡರು ಎಂಬುದು ಪ್ರಸ್ತುತ ಸಂಶೋಧನಾ ಅಧ್ಯಯನದಿಂದ ತಿಳಿದುಬರುತ್ತದೆ. ರೈತರನ್ನು ಸಬಲೀಕರಣಗೊಳಿಸದೆ ಮಂಡ್ಯ ಜಿಲ್ಲೆಯ ಅಭಿವೃದ್ಧಿಯು ಅಸಾಧ್ಯ ಎಂದು ಮನಗಂಡು ರೈತರು ಬೆಳೆದು ಬೆಳೆಗಳಿಗೆ ಉತ್ತಮ ಬೆಲೆ ದೊರಕಿಸಿಕೊಡಲು ಅವಿರತ ಹಗಲಿರುಳು ಶ್ರಮಿಸಿದ್ದಾರೆ. ಇಂದಿಗೂ ಶ್ರಮಿಸುತ್ತಿದ್ದಾರೆ.

## 4.4 ರಸಗೊಬ್ಬರಕ್ಕಾಗಿ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

ರೈತರು ಬೇಸಾಯವನ್ನು ಮಾಡಲು ಇಂದಿನ ಆಧುನಿಕ ಕೃಷಿ ಪದ್ಧತಿಯಲ್ಲಿ ಮುಖ್ಯವಾಗಿ ಉತ್ತಮಗೊಬ್ಬರದ ಬಳಕೆ ಹೆಚ್ಚಾಗಿದೆ. ಇಂದು ಪ್ರತಿಯೊಂದು ಬೆಳೆಗೂ ಸಹ ರಸಗೊಬ್ಬರವನ್ನು ಬಳಸುತ್ತಿದ್ದಾರೆ ಕಾರಣ ಉತ್ತಮ ರಸಗೊಬ್ಬರದ ಬಳಕೆಯಿಂದ ಅಧಿಕ ಇಳುವರಿಯನ್ನು ಪಡೆಯಬಹುದು ಎಂಬುದಾಗಿದೆ. ಸರ್ಕಾರವು ಏಕಾಏಕಿ ರಸಗೊಬ್ಬರದ ಬೆಲೆಯನ್ನು ಹೆಚ್ಚು ಮಾಡಿತು. ಇದರಿಂದ ರೈತರಿಗೆ ರಸಗೊಬ್ಬರದ ಅವಶ್ಯಕತೆ ಹೆಚ್ಚು ಇರುವುದರಿಂದ ಸರ್ಕಾರವು ನಿಗಧಿ ಮಾಡಿದಷ್ಟು ಬೆಲೆಯನ್ನು ಕೊಟ್ಟು

ಕೊಂಡುಕೊಳ್ಳಬೇಕಾಗಿತ್ತು. ಆದರೆ ಇದು ಬಹುತೇಕ ರೈತರಿಗೆ ಹೆಚ್ಚು ಹಣಕೊಟ್ಟು ರಸಗೊಬ್ಬರ ಕೊಂಡುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಈ ರಸಗೊಬ್ಬರದ ಬೆಲೆಯ ಏರಿಕೆಯಿಂದಾಗಿ ರೈತರಿಗೆ ತಾವು ಬೆಳೆದ ಬೆಳೆಯಿಂದ ಆದಾಯಕ್ಕಿಂತ ಖರ್ಚೇ ಹೆಚ್ಚಾಗುತ್ತಿತ್ತು. ಇದರಿಂದ ರೈತರು ಸಂಕಷ್ಟಕ್ಕೆ ಸಿಲುಕುತ್ತಿದ್ದರು. ತಮ್ಮ ಬೆಳೆಯಲ್ಲಿ ನಷ್ಟವನ್ನು ಅನುಭವಿಸುತ್ತಿದ್ದರು. ಹಾಗಾಗಿ ರೈತರ ಸಮಸ್ಯೆಯನ್ನು ಪರಿಹರಿಸಲು ರಸಗೊಬ್ಬರದ ಬೆಲೆಯನ್ನು ಕಡಿಮೆಗೊಳಿಸಬೇಕೆಂದು ಆಗ್ರಹಿಸಿ ಸರ್ಕಾರದ ವಿರುದ್ಧವಾಗಿ ಮಂಡ್ಯ ಜಿಲ್ಲಾ ರೈತ ಮುಖಂಡರು ಜಿ.ಮಾದೇಗೌಡರ ನೇತೃತ್ವದಲ್ಲಿ ಚಳವಳಿಯನ್ನು ನಡೆಸಿದರು[45].

ರಸಗೊಬ್ಬರಗಳ ಬೆಲೆ ಏರಿಕೆಯಿಂದ ರೈತರು ರಸಗೊಬ್ಬರಗಳನ್ನು ಕೊಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಹಾಗಾಗಿ ಅವರು ಬೆಳೆಯಲ್ಲಿ ಅಧಿಕ ಇಳುವರಿ ಪಡೆಯಲು ಹಾಗೂ ಹೆಚ್ಚಿನ ಲಾಭ ಪಡೆಯಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಸರ್ಕಾರವು ರಸಗೊಬ್ಬರದ ಮೇಲಿನ ಬೆಲೆಯನ್ನು ಕಡಿಮೆ ಮಾಡಬೇಕೆಂದು ಒತ್ತಾಯಿಸಿ ಭಾರಿ ಪ್ರತಿಭಟನೆ ಮಾಡಿದರು. ಈ ಪ್ರತಿಭಟನೆಯಲ್ಲಿ ರಸಗೊಬ್ಬರದ ಬೆಲೆ ಇಳಿಸುವಲ್ಲಿ ಹಾಗೂ ಸರಿಯಾಗಿ ವಿತರಣೆ ಮಾಡುವಲ್ಲಿ ರೈತಪರ ಹೋರಾಟ ಸ್ವಲ್ಪಮಟ್ಟಿಗೆ ಯಶಸ್ವಿಯಾಗಿದೆ. ಈ ಸಂದರ್ಭದಲ್ಲಿ ಕೇಂದ್ರ ಸರ್ಕಾರದ ಕಛೇರಿಗಳಾದ ರೈಲುನಿಲ್ದಾಣ, ಪೋಸ್ಟ್ ಆಫೀಸ್‌ಗಳಿಗೆ ಮುತ್ತಿಗೆ ಹಾಕಲಾಯಿತು. ಹೀಗೆ ರಸಗೊಬ್ಬರಗಳಿಗೆ ಸರಿಯಾದ ಬೆಲೆ ನಿರ್ಧರಿಸಿ ರೈತರಿಗೆ ಅನುಕೂಲ ಕಲ್ಪಿಸುವಲ್ಲಿ ಮಂಡ್ಯ ಜಿಲ್ಲೆಯ ರೈತಪರ ಹೋರಾಟ ಪ್ರಮುಖವಾದುದು.

ರಾಜ್ಯ ರೈತಹಿತರಕ್ಷಣಾ ಸಮಿತಿಯ ನೇತೃತ್ವದಲ್ಲಿ ಜಿ.ಮಾದೇಗೌಡರು ಮಾಡಿರುವ ಪ್ರಮುಖ ಹೋರಾಟಗಳಲ್ಲಿ ಸಕಾಲಕ್ಕೆ ರಸಗೊಬ್ಬರ ವಿತರಣೆಗಾಗಿ ರಸ್ತೆ ತಡೆ ಹೋರಾಟ ಪ್ರಮುಖವಾದುದ್ದು. 12ನೇ ಆಗಸ್ಟ್ 1991 ರಂದು ರಸಗೊಬ್ಬರ ಬೆಲೆಗಳನ್ನು ಇಳಿಸುವುದು ಮಾರುಕಟ್ಟೆ ಫೆಢರೇಷನ್‌ನಲ್ಲಿ ದಾಸ್ತಾನಿರುವ ರಸಗೊಬ್ಬರವನ್ನು ಬಜೆಟ್ ಪೂರ್ವ ಬೆಲೆಗೆ ವಿತರಿಸಬೇಕೆಂದು ಒತ್ತಾಯಿಸಿ ರೈಲು-ರಸ್ತೆ ತಡೆಗೆ ಕರೆ ನೀಡಿತ್ತು. 1987ರ ನಂತರದ ಪ್ರಮುಖ ಚಳವಳಿ ಇದಾಗಿದ್ದು ಮಂಡ್ಯ ಜಿಲ್ಲೆಯಲ್ಲಿ 15 ಕಡೆ ರೈಲು ರಸ್ತೆ ತಡೆ ಚಳವಳಿಯಲ್ಲಿ ಸುಮಾರು 6,000 ರೈತರು ಭಾಗವಹಿಸಿದ್ದು, ಈ ಚಳವಳಿ ಒಂದು ದಿನ ಮಾತ್ರವೇ ನಡೆದದ್ದಾಗಿದ್ದು ಶ್ರೀರಂಗಪಟ್ಟಣ. ಇಂಡುವಾಳು, ಗೆಜ್ಜಲಗೆರೆ, ಕಮ್ಮನಹಳ್ಳಿ ತಿರುವಿನ ಬಳಿ ರೈಲು ತಡೆ ನಡೆಸಲಾಯಿತು. ರೈಲು ಪ್ರಯಾಣಿಕರಿಗೆ ಊಟದ ತೊಂದರೆಯಾಗದಿರಲಿ ಎಂಬ ಕಾರಣದಿಂದ ಹೋಟೆಲ್‌ಗಳಿರುವ ಕಡೆಗೆ ಮಾತ್ರವೇ ರೈಲನ್ನು ತಡೆಯಲಾಯಿತು. ರಸ್ತೆ ರೈಲು ತಡೆಗೆ ಪೂರ್ವಭಾವಿಯಾಗಿಯೇ ಕರಪತ್ರ ಹಂಚಿದ್ದರಿಂದ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ತನ್ನ ಸೇವೆಯನ್ನು

ಹಿಂತೆಗೆದುಕೊಂಡಿದ್ದರಿಂದ ಖಾಸಗಿ ವಾಹನಗಳು ಮಾತ್ರವೇ ಈ ಚಳವಳಿಗೆ ಸಿಕ್ಕಿ ಪರಿತಪಿಸಬೇಕಾಯಿತು. ಈ ಚಳವಳಿಯು ಬೆಳಿಗ್ಗೆ 6 ಗಂಟೆಗೆ ಆರಂಭಗೊಂಡು ಸಂಜೆ 4 ಗಂಟೆಗೆ ಅಂತ್ಯಗೊಂಡಿತು. ಈ ಹೋರಾಟಕ್ಕೆ ಜಿ.ಮಾದೇಗೌಡರನ್ನು ಒಳಗೊಂಡಂತೆ ಎಚ್.ಶ್ರೀನಿವಾಸ್, ಜಿಲ್ಲಾ ರೈತ ಸಂಘದ ಅಧ್ಯಕ್ಷ ಕೆ.ಬೋರಯ್ಯ, ಮಹಿಳಾ ಸಂಚಾಲಕಿ ಸುನಂದ ಜಯರಾಂ ಸೇರಿದಂತೆ 111 ಮಂದಿ ರೈತರನ್ನು ಬಂಧಿಸಿ ನಂತರ ಬಿಡುಗಡೆ ಮಾಡಲಾಯಿತು. ಈ ರೈತಪರ ಹೋರಾಟದಿಂದಾಗಿ ದಿನನಿತ್ಯ ಪ್ರಯಾಣಿಕರಿಗೆ ಅತ್ಯಂತ ತೊಂದರೆಯಾದರೂ ಸಹ ಹೋರಾಟ ಆರಂಭಕ್ಕೂ ಮೊದಲು ವಾರದ ಹಿಂದೆಯೇ ಪ್ರಕಟಣೆಯನ್ನು ಪ್ರಕಟಿಸಿದ್ದರಿಂದ ಸಾರ್ವಜನಿಕರ ಸಹಾನುಭೂತಿಯನ್ನು ಪಡೆದುಕೊಂಡಿತ್ತು. ಆದರೆ ರೈತರಲ್ಲಿ ಹೋರಾಟದ ಬಗ್ಗೆ ಪ್ರಾರಂಭದಲ್ಲಿದ್ದ ಉತ್ಸಾಹವಾಗಲಿ ಅಥವಾ ಭಾಗವಹಿಸುವಿಕೆಯಾಗಲೀ ಆನಂತರ ಕಂಡುಬರಲಿಲ್ಲ. ಆದಾಗ್ಯೂ ರಾಜ್ಯದ ಇತರ ಜಿಲ್ಲೆಗಳಿಗೆ ಹೋಲಿಕೆ ಮಾಡಿದಾಗ ಮಂಡ್ಯ ಜಿಲ್ಲೆಯಲ್ಲಿ ಹೆಚ್ಚು ರೈತರು, ಮುಖಂಡರು, ಭಾಗವಹಿಸುವುದು ಮತ್ತು ಹೆಚ್ಚು ಕಾರ್ಯಕರ್ತರನ್ನು ಒಳಗೊಂಡಿದ್ದುದ್ದು ಗಮನಾರ್ಹವಾದುದು. ಇದಕ್ಕೆ ರಾಜ್ಯ ರೈತ ಸಂಘದ ಧುರೀಣರ ಪಾತ್ರವಲ್ಲ. ಅದು ಜಿಲ್ಲಾ ರೈತಪರ ನಾಯಕರುಗಳ ಶ್ರದ್ದೆ ಮತ್ತು ಪರಿಶ್ರಮದ ಫಲ ಎನ್ನಬಹುದು. ಒಟ್ಟಾರೆ ಈ ಹೋರಾಟದ ಉದ್ದೇಶಗಳು ಈಡೇರಲಿಲ್ಲ.

10ನೇ ಏಪ್ರಿಲ್ 1981 ರಂದು ರಾಜ್ಯ ರೈತ ಸಂಘವು ಜಿ.ಮಾದೇಗೌಡರ ನೇತೃತ್ವದಲ್ಲಿ ರೈತರ ಬೆಳೆಗಳಿಗೆ ವೈಜ್ಞಾನಿಕ ಬೆಲೆಯನ್ನು ನಿಗಧಿಪಡಿಸುವಂತೆ ಒತ್ತಾಯಿಸಿ ರಸ್ತೆ ತಡೆ ಚಳುವಳಿಗೆ ಕರೆ ನೀಡಿತು. ಈ ಹೋರಾಟದ ಮತ್ತೊಂದು ಮುಖ್ಯವಾದ ಉದ್ದೇಶವೆಂದರೆ ರೈತರ ಸಾಲ ಮನ್ನಾ ಮಾಡುವಂತೆಯೂ ಆಗಿತ್ತು. ಈ ಹೋರಾಟಕ್ಕೆ ಶಿವಮೊಗ್ಗ, ಧಾರವಾಡ, ಹಾಸನ ಜಿಲ್ಲೆಗಳಿಂದಲೂ ರೈತರು ಸಕ್ರಿಯವಾಗಿ ಪಾಲ್ಗೊಂಡು ಸುಮಾರು 1000 ಕ್ಕೂ ಹೆಚ್ಚು ರೈತರು ಬಂಧನಕ್ಕೆ ಒಳಪಟ್ಟರು. ಈ ಜಿಲ್ಲೆಗಳಿಗೆ ಹೋಲಿಸಿದಲ್ಲಿ ಮಂಡ್ಯ ಜಿಲ್ಲೆಯ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಅದರಲ್ಲಿ ಪ್ರಮುಖವಾಗಿ ಶ್ರೀರಂಗಪಟ್ಟಣ, ಮಂಡ್ಯ ಹಾಗೂ ಮದ್ದೂರುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ರೈತರು ರಸ್ತೆ ತಡೆದು ಹೋರಾಟ ನಡೆಸಿದರು. ಪೊಲೀಸರು ರೈತರನ್ನು ಬಂಧಿಸಿರಲಿಲ್ಲ. ರಸ್ತೆ ತಡೆ ಕೇವಲ ಸಂಕೇತಿವಾಗಿ ಇತ್ತೆ ವಿನಃ ತೀವ್ರ ಸ್ವರೂಪದ್ದಾಗಿರಲಿಲ್ಲ ಹಾಗೂ ಈ ಹೋರಾಟವು ಹೆಚ್ಚಿನ ಪರಿಣಾಮವನ್ನು ಬೀರದಿದ್ದರೂ, ಜಿಲ್ಲೆಯಲ್ಲಿ ರೈತರ ಜಾಗೃತಿಯ ಸಂಕೇತವಾಗಿತ್ತು[46]. ಜಿ.ಮಾದೇಗೌಡ, ಕೆ.ಬೋರಯ್ಯ ಮತ್ತು ಮದ್ದೂರಿನಲ್ಲಿ ಹೊಸಹಳ್ಳಿ ಶಿವು ಅವರ ನಾಯಕತ್ವದಲ್ಲಿ ರೈತರು ರಸ್ತೆ ತಡೆಯ ಹೋರಾಟದಲ್ಲಿ ಭಾಗವಹಿಸಿದ್ದರು. ಪೊಲೀಸರ ಮಧ್ಯ ಪ್ರವೇಶಿಕೆಯಿಂದ ರಸ್ತೆ ತಡೆಯನ್ನು ತೆರವು ಮಾಡಲಾಯಿತು.ಈ ಹೋರಾಟವು ರಸಗೊಬ್ಬರವನ್ನು ರೈತರಿಗೆ ಸಕಾಲಕ್ಕೆ ಒದಗಿಸುವುದು ಮಾರುಕಟ್ಟೆ ದಾಸ್ತಾನಿನಲ್ಲಿರುವ ರಸ ಗೊಬ್ಬರವನ್ನು ಆಯಾವ್ಯಯ ಪಟ್ಟಿಯಂತೆ ಪೂರ್ವ

ಬೆಲೆಗೆ ಒದಗಿಸುವಲ್ಲಿ ಜಿ.ಮಾದೇಗೌಡರ ಹೋರಾಟವು ಯಶಸ್ವಿಯಾಯಿತು. ಇತರ ಜಿಲ್ಲೆಗಳಿಗೆ ಹೋಲಿಸಿದ್ದಲ್ಲಿ ಮಂಡ್ಯ ಜಿಲ್ಲೆಯ ರೈತರ ಹಿತರಕ್ಷಣಾ ಸಮಿತಿಯ ವತಿಯಿಂದ ರಸ್ತೆ ತಡೆಯುವ ಮೂಲಕ ಹೋರಾಟಕ್ಕೆ ಉತ್ತಮ ಪ್ರಕ್ರಿಯೆ ವ್ಯಕ್ತವಾದ ಹಿನ್ನೆಲೆಯಲ್ಲಿ ರಸಗೊಬ್ಬರವನ್ನು ಪಡೆದುಕೊಳ್ಳಲು ಯಶಸ್ವಿಯಾದರು.

ಈ ಹೋರಾಟದ ನಂತರ ರಸಗೊಬ್ಬರದ ಬೆಲೆಯನ್ನು ಕಡಿಮೆ ಮಾಡಬೇಕೆಂದು ಮತ್ತೇ 14ನೇ ಸೆಪ್ಟೆಂಬರ್ 1992 ರಂದು ಸರ್ಕಾರ ವಿರುದ್ಧ ಪ್ರತಿಭಟನೆ ಮಾಡಿದರು. ಹಾಗೆಯೇ 19ನೇ ಸೆಪ್ಟೆಂಬರ್ 1992, 11ನೇ ಜುಲೈ 1994, 8ನೇ ನವೆಂಬರ್ 1996ರಲ್ಲಿ ರಸಗೊಬ್ಬರದ ಬೆಲೆ ಏರಿಕೆಯನ್ನು ಖಂಡಿಸಿ ಮಂಡ್ಯ ಜಿಲ್ಲಾಧಿಕಾರಿ ಕಛೇರಿಯ ಬಳಿ ಪ್ರತಿಭಟನೆಯನ್ನು ಮಾಡಲಾಯಿತು.

## 4.5 ಕಬ್ಬಿನ ಸೂಕ್ತ ಬೆಲೆಗಾಗಿ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

ಮಂಡ್ಯ ಜಿಲ್ಲೆಯ ಮೊದಲ ಸಕ್ಕರೆ ಕಾರ್ಖಾನೆಯಾದ ಮೈಷುಗರ್ ಕಾರ್ಖಾನೆಯ ವಿರುದ್ಧ ಕಬ್ಬು ಬೆಳೆಯುವ ರೈತರು ರಾಜ್ಯ ರೈತ ಸಂಘಟನೆ ಹಾಗೂ ಸ್ಥಳೀಯ ರೈತಪರ ಮುಖಂಡ ಜಿ.ಮಾದೇಗೌಡರ ನಾಯಕತ್ವದಲ್ಲಿ ಕಬ್ಬಿಗೆ ಸೂಕ್ತ ಬೆಲೆಯನ್ನು ನೀಡಬೇಕೆಂದು ಹೋರಾಟ ನಡೆಸಿದರು. ಇದಕ್ಕಾಗಿ ರೈತರು ಕಬ್ಬು ಬೆಳೆಯುವಲ್ಲಿ ಇರುವಂತಹ ಸಮಸ್ಯೆಗಳು ಹಾಗೂ ಬೇಸಾಯ ಪದ್ಧತಿಯಲ್ಲಿ ಸುಧಾರಣೆಗಳನ್ನು ತರುವುದನ್ನು ಬಯಸಿ ಇದರ ಅಗತ್ಯ ಸೌಲಭ್ಯಗಳ ಒದಗಿಸುವುದಕ್ಕಾಗಿ ಸಭೆಯಲ್ಲಿ ತೀರ್ಮಾನಿಸಿ ಮುಷ್ಕರ ಆರಂಭಿಸಿದರು[47]. ಮಂಡ್ಯ ಪ್ರದೇಶದ ಕಬ್ಬು ಬೆಳೆಗಾರರೆಲ್ಲರೂ ಒಟ್ಟಾಗಿ ಸಂಘಟಿತರಾಗಿ ಕಾರ್ಖಾನೆಗೆ ಕಬ್ಬನ್ನು ಸರಬರಾಜು ಮಾಡುವುದನ್ನು ನಿಲ್ಲಿಸಿದರು. ಕಳೆದ ಎರಡು ವರ್ಷಗಳಿಂದ ನೀಡಬೇಕಾಗಿದ್ದ ಬೋನಸ್ ಮತ್ತು ಕಬ್ಬಿಗೆ ವೈಜ್ಞಾನಿಕ ಬೆಲೆಯನ್ನು ಈ ಕೂಡಲೇ ನೀಡಬೇಕೆಂದು ಮತ್ತು ಸಹಕಾರ ಸಂಘಗಳಲ್ಲಿ ದೊರೆಯುವಂತಹ ಬೆಲೆಯಲ್ಲಿ ಸೀಮೆಗೊಬ್ಬರವನ್ನು ಒದಗಿಸುವಂತೆಯೂ, ಕಬ್ಬಿನ ಕಟಾವಿನ ಸಮಯಕ್ಕೆ ಕಾರ್ಖಾನೆಯನ್ನು ಪ್ರಾರಂಭಿಸಬೇಕು ಹಾಗೂ ರೈತರ ಹಣವನ್ನು ಸೂಕ್ತ ರೀತಿಯಲ್ಲಿ ಶೀಘ್ರವಾಗಿ ನೀಡಬೇಕು. ಇಲ್ಲದಿದ್ದರೆ ಈ ಬೆಳೆಯನ್ನು ನಂಬಿ ತೆಗೆದುಕೊಂಡ ಸಾಲವನ್ನು ಪಾವತಿಸಲಾಗದೆ ಸಮಸ್ಯೆಗೆ ಸಿಲುಕಿ, ಕಬ್ಬು ಬೆಳೆಯನ್ನು ಬೆಳೆಯುವುದರಲ್ಲಿ ವಿಫಲರಾಗುತ್ತಾರೆ. ಇದರ ಪರಿಹಾರಕ್ಕಾಗಿ ಹೋರಾಟವನ್ನು ರೂಪಿಸಿ ಮುಷ್ಕರವನ್ನು ಆರಂಭಿಸಿದ್ದರು. ಪ್ರಥಮವಾಗಿ ಮಂಡ್ಯದ ಮೈಷುಗರ್ ಕಾರ್ಖಾನೆಗೆ 13ನೇ ಜುಲೈ 1990ರಲ್ಲಿ ಬೀಗ ಹಾಕುವ ಮೂಲಕ ರೈತರು ಹೋರಾಟವನ್ನು ಮಾಡಲಾಯಿತು. ಮಂಡ್ಯದ ಜಿಲ್ಲಾಧಿಕಾರಿ ಕಛೇರಿಗೆ ಮುತ್ತಿಗೆ ಹಾಕಿ

ಕಬ್ಬಿಗೆ ಸೂಕ್ತ ಬೆಲೆಯನ್ನು ನೀಡಬೇಕೆಂದು ಮನವಿ ಸಲ್ಲಿಸಿ ಈ ಸಂದರ್ಭದಲ್ಲಿ ರಸ್ತೆ ತಡೆ, ರೈಲು ತಡೆಯನ್ನೂ ಸಹ ನಡೆಸಲಾಯಿತು. ಅಂದಿನ ಮುಖ್ಯಮಂತ್ರಿ ಎಸ್.ಬಂಗಾರಪ್ಪ ನವರ ಜೊತೆ ಜಿ.ಮಾದೇಗೌಡರನ್ನು ಒಳಗೊಂಡಂತೆ ರೈತ ನಾಯಕಿ ಸುನಂದ ಜಯರಾಂರವರು ಕಬ್ಬಿನ ಬೆಲೆಯ ನಿಗಧಿಯ ಬಗ್ಗೆ ಮಾತುಕತೆಯನ್ನ ನಡೆಸಿ ರೈತರ ಕಷ್ಟವನ್ನು ಸೂಕ್ಷ್ಮವಾಗಿ ತಿಳಿಸುವ ಮೂಲಕ ಒಂದು ಟನ್ ಕಬ್ಬನ್ನು ಬೆಳೆದು ಕಟಾವು ಮಾಡಿ ಕಾರ್ಖಾನೆಗೆ ಸಾಗಿಸಲು ಎಷ್ಟು ಖರ್ಚಾಗುತ್ತದೆ. ಅಲ್ಲದೆ ಕಾರ್ಖಾನೆಯ ಕೆಲಸದ ವಿಳಂಬದ ನೀತಿಯಿಂದ ರೈತರಿಗೆ ಆಗುವ ನಷ್ಟದ ಬಗೆಗೆ ಚರ್ಚಿಸಿ ಕಬ್ಬಿಗೆ ಸರಿಯಾದ ವೈಜ್ಞಾನಿಕ ಬೆಲೆಯನ್ನು ನಿಗದಪಡಿಸಬೇಕೆಂದು ಹಾಗೂ ಸಮಯಕ್ಕೆ ಸರಿಯಾಗಿ ಕಾರ್ಖಾನೆಯನ್ನು ಪ್ರಾರಂಭಿಸಬೇಕೆಂದು ತಿಳಿಸಿದರು. ಈ ಹೋರಾಟ ನಿರಂತರವಾಗಿ ಎರಡು ವಾರಗಳವರೆಗೆ ಮಂಡ್ಯ ಮೈಷುಗರ್ ಕಾರ್ಖಾನೆಯ ಮುಂದೆ ಧರಣಿಯನ್ನು ಮಾಡಲಾಯಿತು. ಈ ಧರಣಿಯ ಬೇಡಿಕೆಯು ಮೇಲಿನಂತೆಯೆ ಇದ್ದವು. ಈ ಧರಣಿ ಸತ್ಯಾಗ್ರಹಗಳಿಂದ ಕೆಲವು ಸಂದರ್ಭಗಳಲ್ಲಿ ಸೂಕ್ತ ನ್ಯಾಯ ದೊರಕಿದರೂ ಅದು ಶಾಶ್ವತ ಪರಿಹಾರವಾಗಿರಲಿಲ್ಲ. 1990 ರಿಂದ ಇಂದಿನವರೆವಿಗೂ ಸಹ ಕಬ್ಬಿಗೆ ಸೂಕ್ತ ಬೆಲೆಗಾಗಿ ಹೋರಾಟಗಳು ನಡೆಯುತ್ತವೆ. ಕಬ್ಬಿನ ಬೆಲೆಗೆ ಅನ್ಯಾಯವಾದಾಗ ರೈತರು ಜಿ.ಮಾದೇಗೌಡರ ನೇತೃತ್ವದಲ್ಲಿ ಹೋರಾಟ ನಡೆಸಿ ನ್ಯಾಯ ದೊರಕಿಸಿಕೊಡಲು ಮನವಿ ಮಾಡುತ್ತಾರೆ. ಇದಕ್ಕೆ ಸಕರಾತ್ಮಕವಾಗಿ ಸ್ಪಂದಿಸುವ ಜಿ.ಮಾದೇಗೌಡರು ಹೋರಾಟಕ್ಕೆ ಸದಾ ಬೆಂಬಲವನ್ನು ಸೂಚಿಸುತ್ತರಲ್ಲದೆ ರೂಪುರೇಷೆಗಳನ್ನು ಸಿದ್ದಪಡಿಸುತ್ತಾರೆ. ಈ ರೀತಿಯಾಗಿ ಕಬ್ಬಿಗೆ ಸೂಕ್ತ ಬೆಲೆ ಕೊಡಿಸುವಲ್ಲಿ ಕಾಲ ಕಾಲಕ್ಕೆ ಹೋರಾಟ ರೂಪಿಸುವ ಮೂಲಕ ಯಶಸ್ವಿಯಾಗಿದ್ದಾರೆ ಎಂದು ಸಂಶೋಧನೆಯಿಂದ ನಿರೂಪಿಸಲಾಗಿದೆ.

## 4.6 ಬೆಳೆ ಸಾಲ ನೀಡಿಕೆ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

ಭತ್ತ ಮತ್ತು ಕಬ್ಬು ಬೆಳೆಗಳನ್ನು ಬೆಳೆಯಲು ಬಂಡವಾಳವಿಲ್ಲದೆ ರೈತರು ಲೇವಾದೇವಿಗಾರರ ಹತ್ತಿರ ಅಧಿಕ ಬಡ್ಡಿಗೆ ಸಾಲವನ್ನು ಪಡೆದು ಸಾಲಗಾರರಾಗುತ್ತಿದ್ದರು. ಬೆಳೆಯು ಉತ್ತಮ ಇಳುವರಿ ಬಂದು ಹೆಚ್ಚು ಲಾಭವಾದರೆ ಸಾಲ ಮರುಪಾವತಿಸು ತ್ತಿದ್ದರು. ಒಂದು ವೇಳೆ ಮಳೆಯಾಗದೆ, ಸಕಾಲಕ್ಕೆ ಸರಿಯಾಗಿ ಕಾಲುವೆಯ ನೀರಿಲ್ಲದೆ ಬೆಳೆ ಸರಿಯಾಗಿ ಬರದೇ ಹೋದರೆ ಸಾಲ ತೀರಿಸಲು ಸಾಧ್ಯವಾಗದೆ ಹೆದರಿಕೆಯಿಂದ ಎಷ್ಟೋ ಜನ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ರೈತರನ್ನ ಇಂತಹ ಸಮಸ್ಯೆಗಳಿಂದ ತಪ್ಪಿಸುವ ಸಲುವಾಗಿ ಭತ್ತ ಮತ್ತು ಕಬ್ಬು ಬೆಳೆಯನ್ನು ಬೆಳೆಯಲು ರೈತರಿಗೆ ಸರ್ಕಾರವು ಬ್ಯಾಂಕ್‌ಗಳ ಮೂಲಕ ಕಡಿಮೆ ಬಡ್ಡಿ ದರದಲ್ಲಿ ಕೃಷಿ ಸಾಲ ಹಾಗೂ ಬೆಳೆ ಸಾಲಗಳನ್ನು

ನೀಡುವಂತೆ ಒತ್ತಾಯಿಸಿ ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ಪ್ರತಿಭಟನೆಯನ್ನು ಮಾಡಲಾಯಿತು. ಭತ್ತ ಮತ್ತು ಕಬ್ಬು ಬೆಳೆಯನ್ನು ಬೆಳೆಯಲು ರೈತರಿಗೆ ಆರ್ಥಿಕವಾಗಿ ಸರ್ಕಾರವು ಬ್ಯಾಂಕ್‌ಗಳ ಮೂಲಕ ಕಡಿಮೆ ಬಡ್ಡಿದರದಲ್ಲಿ ಸಾಲವನ್ನು ನೀಡುವಂತೆ ಬೇಡಿಕೆಯನ್ನು ಇಟ್ಟು 19ನೇ ಜುಲೈ 1997 ರಂದು ಮಂಡ್ಯ ಜಿಲ್ಲಾಧಿಕಾರಿ ಕಛೇರಿ ಎದರು ಹೋರಾಟವನ್ನು ಮಾಡಲಾಯಿತು[48].

## 4.7 ಲೆವಿ ವಿರೋಧಿ ಹೋರಾಟದಲ್ಲಿ ಜಿ.ಮಾದೇಗೌಡರ ಪಾತ್ರ

ಆಹಾರ ಧಾನ್ಯ ಸಂಗ್ರಹಣೆಯ ಕಾರ್ಯಕ್ರಮವಾಗಿ ಪ್ರತಿ ಸುಗ್ಗಿಯಲ್ಲಿಯೂ ತಾಲ್ಲೂಕು ಹಾಗೂ ಜಿಲ್ಲೆಯಾದ್ಯಂತ ದಾರಿಗಳಲ್ಲಿ ರಾಜ್ಯ ಸರ್ಕಾರ ಲೆವಿಗೇಟುಗಳನ್ನು ನಿರ್ಮಿಸಿ ಅಂತರ್ ಜಿಲ್ಲಾ ಸಾಗಾಣಿಕಾ ನಿರ್ಬಂಧವನ್ನು ವಿಧಿಸಿತು. ಅಲ್ಲದೆ ಲೆವಿ ನೀತಿಯ ಪ್ರಕಾರ ಧಾನ್ಯಗಳನ್ನು ಬೆಳೆದ ರೈತ ತನ್ನ ಉತ್ಪಾದನೆಯಲ್ಲಿ ಹತ್ತರಲ್ಲಿ ಒಂದು ಭಾಗವನ್ನು ಮಾರುಕಟ್ಟೆ ದರಕ್ಕಿಂತ ಕಡಿಮೆ ಬೆಲೆಗೆ ಸರ್ಕಾರಕ್ಕೆ ಸಲ್ಲಿಸಬೇಕಿದ್ದ ಕ್ರಮ ಜಾರಿಯಲ್ಲಿತ್ತು. ಇವುಗಳಿಂದ ತಪ್ಪಿಸಿಕೊಳ್ಳಲು ಬಹಳಷ್ಟು ರೈತರು ಕಡಿಮೆ ಬೆಲೆಗೆ ವ್ಯಾಪಾರಿಗಳಿಗೆ ತಮ್ಮ ಹಳ್ಳಿಗಳಲ್ಲೇ ಮಾರಾಟ ಮಾಡುತ್ತಿದ್ದರು. ಆದರೆ ಈ ನೀತಿಯಿಂದ ರೈತರು ಶೋಷಣೆಗೆ ಒಳಗಾಗಿ ನಷ್ಟವನ್ನು ಅನುಭವಿಸುತ್ತಿದ್ದರು.[49] ಇದು ಲಾಭದಾಯಕ ಅನ್ನಿಸಿದ್ದು ಅಧಿಕಾರಿಗಳಿಗೆ ಮಾತ್ರ. ಆದರೆ ಈ ಹಿಂದೆಯೂ ಅಂತರ್ ಜಿಲ್ಲಾ ಸಾಗಾಣಿಕೆ ನಿರ್ಬಂಧವನ್ನು ರದ್ದು ಮಾಡುವಂತೆ ಸರ್ಕಾರದ ಮೇಲೆ ಒತ್ತಾಯ ತಂದಿದ್ದರೂ ಪ್ರಯೋಜನವಾಗಿರಲಿಲ್ಲ. ಆದುದರಿಂದ ರೈತರಿಗೆ ನ್ಯಾಯಯುತ ಬೆಲೆ ದೊರೆಯುವ ಕಡೆ ಮಾರಾಟ ಮಾಡಿಕೊಂಡು ಬರುವ ಉದ್ದೇಶದಿಂದ ರೂಪಿತವಾದದ್ದೇ ಲೆವಿ ವಿರೋಧಿ ಹೋರಾಟ. ಈ ಹೋರಾಟವನ್ನು ಮಂಡ್ಯ ಜಿಲ್ಲೆಯಲ್ಲಿ ಜಿ.ಮಾದೇಗೌಡರು ನಡೆಸಿದ್ದರು. ವಿಧಾನಸಭೆ ಮತ್ತು ಲೋಕಸಭಾ ಸದಸ್ಯರಾಗಿ ಹಾಗೂ ಸಚಿವರಾದ ಸಂದರ್ಭದಲ್ಲಿ ಲೆವಿ ವಿರೋಧಿ ಬಗ್ಗೆ ಧ್ವನಿ ಎತ್ತಿದ್ದಾರೆ ಎಂಬುದನ್ನು ತಿಳಿಯಬಹುದಾಗಿದೆ.

ಲೆವಿ ವಿರೋದಿ ಹೋರಾಟ ಹೊಸದಲ್ಲದಿದ್ದರೂ ಸಾಗಾಣಿಕೆಯ ಮೇಲಿದ್ದ ನಿರ್ಬಂಧಗಳನ್ನು ಮುರಿಯುವುದರಲ್ಲಿ ಜಿ.ಮಾದೇಗೌಡರ ಹೋರಾಟ ಮಹತ್ವದ್ದಾಗಿದೆ. ರೈತರು ತಮಗೆಬೇಕಾದ ಬೆಳೆನ್ನು ಬೆಳೆಯಲು, ಮಾರಾಟ ಮಾಡಲು ಮುಕ್ತವಾದ ಸ್ವಾತಂತ್ರ್ಯ ಹೊಂದಿದ್ದರು. ತಾವು ಬೆಳೆದ ಬೆಳೆಯನ್ನು ಜಿಲ್ಲೆಯ ಹಾಗೂ ರಾಜ್ಯದ ಒಳಗಡೆ ಎಲ್ಲಿ ಬೇಕಾದರೂ ಮಾರಾಟ ಮಾಡುವ ಹಕ್ಕನ್ನು ಪಡೆದುಕೊಳ್ಳುವಲ್ಲಿ ಸಾಧ್ಯವಾಯಿತು. ಈ ಹೋರಾಟ ಮಂಡ್ಯ ಜಿಲ್ಲೆಯ ಗಡಿ ಭಾಗದಲ್ಲಿ ಮಹತ್ವ ಪೂರ್ಣವಾಗಿ ನಡೆದು ಜಿಲ್ಲೆಯ ರೈತ ಮುಖಂಡರೊಂದಿಗೆ ಜಿ.ಮಾದೇಗೌಡರು ಈ ಹೋರಾಟದಲ್ಲಿ ಪ್ರಮುಖ ಪಾತ್ರ ನಿಭಾಯಿಸಿದರು. ಇಂತಹ ಸಂದರ್ಭದಲ್ಲಿ ಸರ್ಕಾರದ

ಈ ನೀತಿಯನ್ನು ಖಂಡಿಸಿ ಹೋರಾಟ ನಡೆಸಿದ್ದನ್ನು ಸಂಶೋಧನೆಯಿಂದ ಗುರುತಿಸಬಹುದಾಗಿದೆ.

ಮೂಲಭೂತ ಸೌಲಭ್ಯಗಳು ತಳಮಟ್ಟದ ರೈತರಿಗೆ ಸಮಾನವಾಗಿ ಸಿಗಬೇಕು. ಈ ಮೂಲಕ ಗ್ರಾಮಗಳ ಅಭಿವೃದ್ಧಿ ಹೊರತಾಗಿ ರಾಷ್ಟ್ರಾಭಿವೃದ್ಧಿ ಸಾಧ್ಯವಾಗುದು ಎಂಬುದನ್ನು ಮನಗಂಡಿರುವ ಜಿ.ಮಾದೇಗೌಡರ ಜೀವನದಿಂದ ನಿರೂಪಿಸಬಹುದು. ಇವರ ಜೀವನದಲ್ಲಿ ವರುಣಾ ನಾಲಾ ವಿರೋಧಿ ಚಳುವಳಿ, ಕಾವೇರಿ ನದಿ ನೀರಿನ ಚಳುವಳಿ, ರಸಗೊಬ್ಬರ ಹೋರಾಟ, ಕಬ್ಬಿನ ಸೂಕ್ತ ಬೆಲೆಗಾಗಿ ಹೋರಾಟ, ರೈತರಿಗೆ ಸಾಲ ಸೌಲಭ್ಯಕ್ಕಾಗಿ ಹೋರಾಟ, ಲೆವಿ ವಿರೋಧಿ ಹೋರಾಟ ರೂಪಿಸಿದ್ದಾರೆ. ಬಹುಮಟ್ಟಿಗೆ ಜಿಲ್ಲೆ ಮತ್ತು ರಾಜ್ಯದ ಜನ ಸಮಾನ್ಯರು ಹಾಗೂ ರೈತರಿಗೆ ನ್ಯಾಯ ಒದಗಿಸುವಲ್ಲಿ ಯಶಸ್ವಿಯಾಗಿದ್ದಾರೆ. ಈ ಹೋರಾಟದಲ್ಲಿ ಜಿ.ಮಾದೇಗೌಡರು ಕಾಯಾ, ವಾಚಾ, ಮನಸಾ ತೊಡಗಿಸಿಕೊಂಡಿದ್ದನ್ನು ಈ ಸಂಶೋಧನಾ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಕೊನೆಟಿಪ್ಪಣಿಗಳು**

1. ಮುದ್ದೇಗೌಡ.ಎಚ್.ಎಸ್, (1997), ಜೀವನಾಡಿ, ಪು.ಸಂ. 21.
2. ನಾಗರಾಜ್.ಎಂ.ಜಿ, (2006), ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು, ಪು.ಸಂ. 218, 220.
3. ಪ್ರಜಾವಾಣಿ ದಿನಪತ್ರಿಕೆ, ಶುಕ್ರವಾರ (03.06.1977).
4. ದೇ.ಜಗೌ, (1994), ಸುವರ್ಣ ಮಂಡ್ಯ, ಪು.ಸಂ. 245.
5. ಶ್ರೀನಿವಾಸಗೌಡ.ಬಿ.ಡಿ, (2007), ಕಾವೇರಿ ಕಣ್ಣೀರು ತಣ್ಣೀರು, (ವರುಣಾ, ಕಾವೇರಿ ಚಳವಳಿಯ ಒಂದು ಅವಲೋಕನ) ಪು. 27, 28
6. ಪ್ರಜಾವಾಣಿ ದಿನಪತ್ರಿಕೆ, (01.06.1977)
7. ಸಂಯುಕ್ತ ಕರ್ನಾಟಕ ದಿನಪತ್ರಿಕೆ, (27.10.1977), ಪೌರವಾಣಿ, ದಿನಪತ್ರಿಕೆ.
8. ದೇ.ಜಗೌ, (1977), ಪೂರ್ವೋಕ್ತ, ಪು.ಸಂ. 246.
9. ಶಿವರಾಮು.ಎಸ್, (2011), ಮಂಡ್ಯ ಜಿಲ್ಲೆಯ ಜನಪರ ಚಳುವಳಿಗಳು, ಪು.ಸಂ. 86.
10. ದೇ.ಜಗೌ, ಪೂರ್ವೋಕ್ತ, ಪು.ಸಂ. 247.
11. ಸಂದರ್ಶನ, ಜಿ.ಮಾದೇಗೌಡರೊಂದಿಗೆ (15.09.2017) ಸಂಶೋಧಕನಿಂದ
12. ನಾಗರಾಜ್.ಎಂ.ಜಿ, (2006), ಪೂರ್ವೋಕ್ತ, ಪು.ಸಂ. 227.
13. ಕೊಳಲು ವಾರಪತ್ರಿಕೆ, (19 ಜೂನ್, 1998)
14. ಮೈಸೂರು ಮಿತ್ರ ದಿನಪತ್ರಿಕೆ (27.06.1998), ಪ್ರಜಾವಾಣಿ ದಿನಪತ್ರಿಕೆ, (27.06.1998), ಆಂದೋಲನ ದಿನಪತ್ರಿಕೆ (27.06.1998).
15. ಆಂದೋಲನ ದಿನ ಪತ್ರಿಕೆ (28.06.199).
16. ಸಿದ್ದರಾಜು.ಸಿ. ಆಲಕೆರೆ, 2012, ಕಾವೇರಿ ಚಳುವಳಿ, (ಆಗಸ್ಟ್-ಡಿಸೆಂಬರ್ 2012), ಪು.ಸಂ. 02.
17. ನಾಗರಾಜ್.ಎಂ.ಜಿ, (2010), ಪೂರ್ವೋಕ್ತ, ಪು.ಸಂ. 1327.
18. ರಾಗೌ, (2012), ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಪು.ಸಂ. 378.
19. ರಾಗೌ (ಸಂ.) (2010), ಪೂರ್ವೋಕ್ತ, ಪು.ಸಂ. 522.

20. ಗೋಪಾಲ್.ಆರ್. (2008), ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.ಸಂ. 537.

21. ಸಿದ್ದರಾಜು.ಸಿ. ಆಲಕೆರೆ, (2012), ಪೂರ್ವೋಕ್ತ, ಪು.ಸಂ. 04.

22. ಶ್ರೀನಿವಾಸಗೌಡ.ಬಿ.ಟಿ. (2007), ಕಾವೇರಿ ಕಣ್ಣೀರು ತಣ್ಣೀರು, ಪು.ಸಂ. 49.

23. ಸಂದೇಶ.ಎಲ್, (2003), ಕಾವೇರಿ ಕದನ, ಪು.ಸಂ. 07.

24. ಶ್ರೀನಿವಾಸಗೌಡ.ಬಿ.ಟಿ, (2007), ಪೂರ್ವೋಕ್ತ, ಪು. 53–55.

25. ಗೋಪಾಲ್.ಆರ್., (2008), ಪೂರ್ವೋಕ್ತ, ಪು. 541.

26. ಶ್ರೀನಿವಾಸಗೌಡ.ಬಿ.ಟಿ., (2007), ಮೇಲೆ ಉದ್ಧರಿಸಿದ ಗ್ರಂಥ, ಪು.ಸಂ. 71, 114.

27. ಅದೇ, ಪು.ಸಂ. 163.

28. ಗೋಪಾಲ್.ಆರ್. ಪೂರ್ವೋಕ್ತ, ಪು.ಂ. 543.

29. ಸಂದೇಶ್.ಎಲ್, ಪೂರ್ವೋಕ್ತ, ಪು.ಸಂ. 206.

30. ಶ್ರೀನಿವಾಸಗೌಡ.ಬಿ.ಟಿ., ಪೂರ್ವೋಕ್ತ, ಪು.ಸಂ. 206.

31. ಸಂದರ್ಶನ ಎಸ್.ಬಿ.ಬೋರೇಗೌಡರವರೊಂದಿಗೆ (15.09.2017) ಸಂಶೋಧಕ ನಿಂದ

32. ಸಂದರ್ಶನ ಜಿ.ಮಾದೇಗೌಡರವರೊಂದಿಗೆ (15.09.2017) ಸಂಶೋಧಕನಿಂದ

33. ಸಿದ್ದರಾಜು.ಸಿ. ಆಲಕೆರೆ, (2012), ಪೂರ್ವೋಕ್ತ, ಪು. 11.

34. ಕನ್ನಡ ಪ್ರಭ, ದಿನಪತ್ರಿಕೆ, (13.09.2012) ಗುರುವಾರ, ಪು.ಸಂ. 03.

35. ಕನ್ನಡ ಪ್ರಭ, ದಿನಪತ್ರಿಕೆ, (17.09.2012) ಸೋಮವಾರ

36. ಸಿದ್ದರಾಜು.ಸಿ. ಆಲಕೆರೆ, 2012, ಪೂರ್ವೋಕ್ತ, ಪು.ಸಂ. 04.

37. ಕನ್ನಡ ಪ್ರಭ, ದಿನಪತ್ರಿಕೆ, (29.09.2012), ಪು.ಸಂ. 01.

38. ಕನ್ನಡ ಪ್ರಭ, ದಿನಪತ್ರಿಕೆ, (30.09.2012), ಪು.ಸಂ. 02.

39. ಸಿದ್ದರಾಜು.ಸಿ. ಆಲಕೆರೆ, (2012), ಕಾವೇರಿ ಚಳುವಳಿ, (ಆಗಸ್ಟ್–ಡಿಸೆಂಬರ್ 2012), ಪು.ಸಂ. 206.

40. ಸಿದ್ದರಾಜು.ಸಿ. (2012), ಆಲಕೆರೆ, ಅದೇ, ಪು.ಸಂ. 217.

41. ಮೈಸೂರು ಮಿತ್ರ, ದಿನಪತ್ರಿಕೆ, (17.07.2014), ಪು.ಸಂ. 2,4.

42. ವಿಜಯ ಕರ್ನಾಟಕ ದಿನಪತ್ರಿಕೆ, (12.11.2014), ಪು.ಸಂ. 01, ಮೈಸೂರು ಮಿತ್ರ, ದಿನಪತ್ರಿಕೆ, (12.11.2014), ಪು.ಸಂ. 01, ಆಂದೋಲನ ದಿನಪತ್ರಿಕೆ, (12.11.2014), ಪು.ಸಂ. 01.

43. ರಾಮಕೃಷ್ಣ.ಮ, ಪೂರ್ವೋಕ್ತ, ಪು.ಸಂ. 27.

44. ಸಂದರ್ಶನ ಜಿ.ಮಾದೇಗೌಡರೊಂದಿಗೆ (15.09.2017) ಸಂಶೋಧಕನಿಂದ

45. ರಾಗೌ (ಸಂ.), (2010), ಅಪರಂಜಿ, ಪು.ಸಂ. 84

46. ಆಂದೋಲನ (ಜೂನ್ 27, 1998)

47. ರಾಜ್ಯ ರೈತ ಸಂಘದ ಕರಪತ್ರ, ಮಂಡ್ಯದಿಂದ ಪ್ರಕಟಣೆ (ಜೂನ್ 17, 1998)

48. ಅದೇ, ಪು.ಸಂ. 92

49. ರಾಜ್ಯ ರೈತ ಸಂಘದ ಕರಪತ್ರ, ಮಂಡ್ಯದಿಂದ ಪ್ರಕಟಣೆ (ಜೂನ್ 17, 1998)

# ಅಧ್ಯಾಯ–ಐದು

# ಜಿ.ಮಾದೇಗೌಡರ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕ ಕಾರ್‍ಯಗಳು

5.1 ಜಿ.ಮಾದೇಗೌಡರ ಶೈಕ್ಷಣಿಕ ಕಾರ್ಯಗಳು

5.2 ಜಿ.ಮಾದೇಗೌಡರ ಆರ್ಥಿಕ ಹಾಗೂ ಸಾಮಾಜಿಕ ಕಾರ್ಯಗಳು.

5.2.1 ಕಾಳಮುದ್ದನದೊಡ್ಡಿಯಲ್ಲಿ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ.

5.2.2 ಭಾರತೀ ವಿವಿಧೋದ್ದೇಶ ಸಹಕಾರ ಸಂಘ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

5.2.3 ಮಹಿಳೆಯರಿಗೆ ಹಾಗೂ ಪುರುಷರಿಗೆ ಸ್ವ–ಉದ್ಯೋಗ ತರಬೇತಿ ಕೇಂದ್ರ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

5.2.4 ಗಾಂಧೀಭವನ ಮತ್ತು ಆಸ್ಪತ್ರೆ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

5.2.5 ಆತ್ಮಲಿಂಗೇಶ್ವರ ದೇವಾಲಯ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

5.2.6 ಪ್ರಕೃತಿ ಆರೋಗ್ಯಧಾಮ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

5.2.7 ಜಿ.ಮಾದೇಗೌಡ ಸಮಾಜ ಸೇವಾ ಪ್ರತಿಷ್ಠಾನದ ಮೂಲಕ ಜನಮುಖಿ ಕಾರ್ಯಗಳು

# ಅಧ್ಯಾಯ–ಐದು

# ಜಿ.ಮಾದೇಗೌಡರ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕ ಕಾರ್ಯಗಳು

ಜಿ.ಮಾದೇಗೌಡರ ವ್ಯಕ್ತಿತ್ವದಲ್ಲಿ ಕಂಡುಬರುವ ಪ್ರಮುಖವಾದ ಗುಣವೇನೆಂದರೆ, ಯಾವುದೇ ಸಾರ್ವಜನಿಕ ಕಾರ್ಯಕ್ಕೆ ತೊಡಗುವ ಸಂದರ್ಭದಲ್ಲಿ ಸದುದ್ದೇಶದ ಯೋಜನೆಯನ್ನು ರೂಪಿಸುವುದಕ್ಕೆ ಮೊದಲ ಮನ್ನಣೆಯನ್ನು ನೀಡುತ್ತಾರೆ. ಎರಡನೆಯ ಪ್ರಾಧ್ಯಾನ್ಯತೆಯನ್ನ ಹಣಕ್ಕೆ ನೀಡುತ್ತಾರೆ. ಉತ್ತಮ ಉದ್ದೇಶದಿಂದ ಕೈಗೊಳ್ಳುವ ಯಾವುದೇ ಬಗೆಯ ಜನಪರವಾದ ಕಾರ್ಯಗಳಿಗೆ ಖಂಡಿತವಾಗಿ ಹಣವು ಲಭಿಸುತ್ತದೆ ಎಂಬ ಆತ್ಮವಿಶ್ವಾಸ ಹೊಂದಿದ್ದರು. ಇದಕ್ಕೆ ಪೂರಕವಾಗಿ ಗೌಡರು ಜಿಲ್ಲೆಯಲ್ಲಿ ಶೈಕ್ಷಣಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರೂಪಿಸಿ ಯಶಸ್ವಿಯಾಗಿ ಜಾರಿಗೊಳಿಸಿದ್ದಾರೆ. ಜಿಲ್ಲೆಯ ಎಲ್ಲಾ ವರ್ಗದ ಜನರಿಗೂ ಈ ಸೌಲಭ್ಯಗಳ ಫಲದೊರಕಿಸಿಕೊಡುವಲ್ಲಿ ಗೌಡರು ಮುಂಚೂಣಿ ನಾಯಕರಾಗಿ ನಿಲ್ಲುತ್ತಾರೆ ಎಂಬುದನ್ನು ಸಂಶೋಧನಾ ಅಧ್ಯಯನದಿಂದ ಅರಿಯಲಾಗಿದೆ.

## 5.1 ಜಿ.ಮಾದೇಗೌಡರ ಶೈಕ್ಷಣಿಕ ಕಾರ್ಯಗಳು

ಶಿಕ್ಷಣವು ವ್ಯಕ್ತಿಯ ಜೀವನದುದ್ದಕ್ಕೂ ನಡೆಯುವ ಪ್ರಕ್ರಿಯೆ. ಅದು ಗರ್ಭದಿಂದ ಗೋರಿಯವರೆಗೆ ನಡೆಯುವ ಪ್ರಕ್ರಿಯೆ ಪ್ರಖ್ಯಾತ ಶಿಕ್ಷಣ ತಜ್ಞರಾದ ಪ್ರೋ. ದೋಮವಿಲೆ ಅವರ ಅಭಿಪ್ರಾಯದಲ್ಲಿ ಶಿಕ್ಷಣವು ವ್ಯಕ್ತಿಯ ತೊಟ್ಟಿಲಿನಿಂದ ಚಟ್ಟದವರೆಗೆ ನಡೆಯುವ ನಿರಂತರವಾದ ಅನುಭವಗಳ ಆಗರ. ವ್ಯಕ್ತಿಯ ತನ್ನ ಪರಿಸರದೊಂದಿಗಿನ ಸಂಬಂಧ ಮತ್ತು ಅನುಭವಗಳ ಮುಖಾಂತರ ಜ್ಞಾನವನ್ನು ವೃದ್ಧಿಸಿ ಸಮೃದ್ಧಿಗೊಳಿಸಿಕೊಳ್ಳುತ್ತಾನೆ. ಶಿಕ್ಷಣವು ಕೇವಲ ಓದುವುದು ಬರೆಯುವುದು ಮತ್ತು ಅಂಕ ಗಣಿತವಲ್ಲ ಆರೋಗ್ಯದ ವಿಕಾಸವನ್ನು ಮಾಡುವುದಾಗಿರುತ್ತದೆ. ಅಂದರೆ ಜ್ಞಾನ, ಭಾವನೆ, ಕೌಶಲ್ಯ ಮತ್ತು ಆರೋಗ್ಯದ ವಿಕಾಸವಾಗಿದೆ. ಶಿಕ್ಷಣವು ವ್ಯಕ್ತಿಯ ಜೀವನವನ್ನು ರೂಪಿಸುವ ಸಾಧನಗಳಲ್ಲಿ ಒಂದಾಗಿದೆ. ಮಾನವನ ಚಟುವಟಿಕೆಗಳಲ್ಲಿ ಶಿಕ್ಷಣಕ್ಕೆ ಪ್ರಮುಖ ಸ್ಥಾನವಿದೆ. ವಿಶ್ವದ ಪ್ರತಿಯೊಬ್ಬ ಸ್ತ್ರೀ ಮತ್ತು ಪುರುಷರ ಜೀವನದಲ್ಲಿ ಶಿಕ್ಷಣವು ಚಲನಶೀಲವಾಗಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತದೆ. ಯಾವುದೇ ಸ್ತರದ ಸಮಾಜದಲ್ಲಿ ಶಿಕ್ಷಣ ನಮ್ಮ ಜ್ಞಾನವನ್ನು ಅಳೆಯುವ ಮಾಪನವಾಗಿದೆ. ಜ್ಞಾನವು ಶಿಕ್ಷಣದಿಂದ ಮಾತ್ರ ದೊರೆಯುವ ದಿವ್ಯಶಕ್ತಿಯಾಗಿದ್ದು ಇದು ಮಾನವರನ್ನು ಸಾಮಾಜಿಕ ಜೀವನದಲ್ಲಿ ಶಕ್ತಿಬದ್ಧಗೊಳಿಸುತ್ತದೆ.

ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಗುರುದೇವರಹಳ್ಳಿ ಎಂಬ ಕುಗ್ರಾಮದ ಅನಕ್ಷರಸ್ಥ ಕುಟುಂಬದಲ್ಲಿ ಜನಿಸಿದ ಜಿ.ಮಾದೇಗೌಡರು ತಮ್ಮ ದೂರದೃಷ್ಟಿತ್ವದಿಂದಲೇ ಎಲ್ಲವನ್ನೂ ಸಾಧಿಸಿದವರು. ಇದಕ್ಕೆ ಕಾರಣ ಅವರು ಬಾಲ್ಯದಲ್ಲಿ ಅನುಭವಿಸಿದ ಕಷ್ಟ ಗುರುದೇವರಹಳ್ಳಿ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿಯೂ ಶಾಲೆಯಿಲ್ಲದೆ ದೂರದ ಊರಿಗೆ ಬಂದು ಅಕ್ಷರ ಕಲಿಯುವುದು ತುಂಬಾ ದುಸ್ತರವಾಗಿತ್ತು. ಈ ಕಾರಣದಿಂದ ಅವರ ತಾಯಿಯ ಊರದ ಮಂಡ್ಯದ ಹೊಸಹಳ್ಳಿಯಲ್ಲಿ ಶಿಕ್ಷಣವನ್ನು ಪೂರೈಸಿದರು. ನಮ್ಮ ಊರಿನಲ್ಲಿ ಶಾಲೆಯಿಲ್ಲದ ಎಷ್ಟೋ ಮಕ್ಕಳು ಅವಿದ್ಯಾವಂತರಾಗಿ ಉಳಿದರು. ಮುಂದಿನ ಪೀಳಿಗೆ ಈ ಸಮಸ್ಯೆಯನ್ನು ಎದುರಿಸಬಾರದು ಅವರಿಗೂ ಉನ್ನತ ಶಿಕ್ಷಣದವರೆಗೂ ಶಾಲಾ, ಕಾಲೇಜುಗಳಲ್ಲಿ ಓದುವ ಅವಕಾಶ ಲಭ್ಯವಾಗಲೆಂದು ಆಶಿಸಿದರು.[1] ಅದಕ್ಕೊಂದು ಐತಿಹಾಸಿಕ ನಿದರ್ಶನ ಅವರ ಶೈಕ್ಷಣಿಕ ಸಾಧನೆ. ಹಳ್ಳಿಗಾಡಿನ ಎಲ್ಲಾ ವರ್ಗದ ಜನರಿಗೆ ಶಿಕ್ಷಣವನ್ನು ಒದಗಿಸುವ ಮೂಲಕ ಜಿ.ಮಾದೇಗೌಡರು ಶೈಕ್ಷಣಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನು ಮಾಡಿರುವುದನ್ನು ಈ ಕೆಳಕಂಡ ಅಂಶಗಳು ಬೆಳಕು ಚೆಲ್ಲುತ್ತವೆ.

## ಭಾರತೀ ಎಜುಕೇಷನ್ ಟ್ರಸ್ಟ್ ಸ್ಥಾಪನೆಯ ಹಿನ್ನೆಲೆ

1962ರಲ್ಲಿ ಮದ್ದೂರು ಹಾಗೂ ಮಳವಳ್ಳಿಯ ರಸ್ತೆಯ ಮಧ್ಯಭಾಗವಾದ ಕಾಳಮುದ್ದನದೊಡ್ಡಿಯಲ್ಲಿ ಚಿಕ್ಕದೊಂದು ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿ ಭಾರತೀ ಶಿಕ್ಷಣ ಸಂಸ್ಥೆಯನ್ನು ಶೈಕ್ಷಣಿಕ ಕೇಂದ್ರವನ್ನಾಗಿ ಪರಿವರ್ತಿಸಿದ ಜಿ.ಮಾದೇಗೌಡರು ಶೈಕ್ಷಣಿಕ ಕ್ಷೇತ್ರದ ಸಾಧನೆಯ ಮಹಾನ್ ನಾಯಕರು ಎನಿಸಿಕೊಂಡಿದ್ದಾರೆ. ಜ್ಞಾನಕ್ಕೆ ಸಮಾನವಾದುದು ಯಾವುದೂ ಇಲ್ಲ ಎಂಬುವುದನ್ನು ನಹಿ ಜ್ಞಾನೇನ ಸದೃಶಂ ಎಂಬುದನ್ನು ಮೈಸೂರಿನಲ್ಲಿ ಓದುವಾಗಲೇ ಮನವರಿಕೆಯಾಗಿತ್ತು. ಕದಿಯಲಾರದ ಆಸ್ತಿ ಎಂದರೆ ವಿದ್ಯೆ. ಯಾವುದೇ ರೀತಿಯ ಸಂಪತ್ತಿನ ಆರ್ಜನೆ ಮತ್ತು ವಿನಿಯೋಗಕ್ಕೆ ಜ್ಞಾನದ ಅರಿವು ಅವಶ್ಯಕ. ಅಂಧಕಾರದ ಅಳಿವಿಗಾಗಿ ಶಾಶ್ವತ ಪರಿಹಾರ ಕಂಡುಕೊಂಡ ಮಾರ್ಗವೇ ಶಿಕ್ಷಣ. ತಕ್ಷಣಕ್ಕೆ ಕಾರ್ಯಪ್ರವೃತ್ತರಾಗಿ ಕುಗ್ರಾಮವಾದ ಕಾಳಮುದ್ದನದೊಡ್ಡಿಯಲ್ಲಿ ದಿನಾಂಕ : 21.05.1962 ರಂದು (ನೋಂದಣಿ ಸಂಖ್ಯೆ : 4/1962–63) ಮೈಸೂರು ಸಹಕಾರ ಸಂಘಗಳ ಕಾಯ್ದೆ ಆಕ್ಟ್ ನಂ. 17 ರಂತೆ ಭಾರತೀ ವಿದ್ಯಾಸಂಸ್ಥೆಯನ್ನು ನೊಂದಾಯಿಸಿದರು[12]. ಮದ್ದೂರು ಹಾಗೂ ಮಳವಳ್ಳಿ ತಾಲ್ಲೂಕಿನ ಅವಿದ್ಯಾವಂತರ ಬದುಕನ್ನು ಹತ್ತಿರದಿಂದ ಕಂಡುಕೊಂಡಿದ್ದ ಜಿ.ಮಾದೇಗೌಡರು ಸ್ವತಃ ತಾವೇ ವಿದ್ಯಾಭ್ಯಾಸ ಪಡೆಯಲು ತಮ್ಮ ತಾಯಿ ಮನೆಯನ್ನು ಆಶ್ರಯಿಸಿದ್ದುದನ್ನು ಚಿಂತಿಸಿ ಆ ಭಾಗದ ಅವಿದ್ಯಾವಂತರು ಎದುರಿಸುತ್ತಿರುವ ಶೈಕ್ಷಣಿಕ ಸಮಸ್ಯೆಯನ್ನು ಅರಿತು ಶೈಕ್ಷಣಿಕ ಸಂಸ್ಥೆಯೊಂದನ್ನು ಸ್ಥಾಪಿಲೇಬೇಕೆಂದು ತೆಗೆದುಕೊಂಡ ದಿಟ್ಟ ನಿರ್ಧಾರದಿಂದ ಸ್ಮಶಾನವಾಗಿದ್ದ, ಕುರುಚಲು ಗಿಡಗಳಿಂದ ಕೂಡಿದ್ದ, ಆಡು–ಕುರಿ ಮೇಯುತ್ತಿದ್ದ

ದುರ್ಗಮ ಪ್ರದೇಶವೊಂದನ್ನು ಆಯ್ಕೆ ಮಾಡಿ ಅಲ್ಲಿ ಭಾರತೀ ವಿದ್ಯಾಸಂಸ್ಥೆಯನ್ನು ಪ್ರಾರಂಭಿಸಿದರು[2]. ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕಲ್ಪನೆ ಆ ವೇಳೆಗಾಗಲೇ ಜಿ.ಮಾದೇಗೌಡರನ್ನು ಪ್ರಭಾವಿಸಿದವು. ಗ್ರಾಮೀಣ ಪ್ರದೇಶದ ಅನೇಕ ಸಮಸ್ಯೆಗಳಿಗೆ ಶೈಕ್ಷಣಿಕ ಸಂಸ್ಥೆಗಳ ಕೊರತೆಯೇ ಮೂಲ ಕಾರಣ ಎಂಬುವುದನ್ನು ಬಲವಾಗಿ ನಂಬಿದ್ದ ಗೌಡರು ಸ್ಥಳೀಯ ಮುಖಂಡರ ಸಹಕಾರದೊಂದಿಗೆ ಭಾರತೀ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿದರು. ಇವರ ಶೈಕ್ಷಣಿಕ ಸಾಧನೆಗೆ ಮೂಲವಾದ ಪ್ರಥಮ ಸಭೆ ಚಿಕ್ಕರಸಿನಕೆರೆ ಗ್ರಾಮದ ಶ್ರೀ ಕಾಲಭೈರವೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಅಕ್ಕಪಕ್ಕದ ಗ್ರಾಮದ ಮುಖಂಡರುಗಳನ್ನು ಸಭೆ ಸೇರಿಸಿ ಅವರೆಲ್ಲರ ವಿಶ್ವಾಸ ಪಡೆದು, ಕಾರ್ಯಕಾರಿ ಸಮಿತಿಯೊಂದನ್ನು ರಚಿಸಿದರು. ಸಮಿತಿಯ ಅಧ್ಯಕ್ಷರಾಗಿ ಜಿ.ಮಾದೇಗೌಡರು ಆಯ್ಕೆಗೊಂಡು ಉಳಿದಂತೆ ಕಾರ್ಯಕಾರಿ ಸಮಿತಿಯ ಸದಸ್ಯರುಗಳ ವಿವರ ಈ ಕೆಳಕಂಡಂತೆ ಇದೆ.

1962ರಲ್ಲಿ ಭಾರತೀ ಶಿಕ್ಷಣ ಸಂಸ್ಥೆಯು ಸ್ಥಾಪಿತವಾದ ಸಂದರ್ಭದಲ್ಲಿ ಭಾರತೀ ಶಿಕ್ಷಣ ಸಂಸ್ಥೆಗೆ ಅಧ್ಯಕ್ಷರಾಗಿ ಗುರುದೇವರಹಳ್ಳಿ ಮಾದೇಗೌಡರು, ಉಪಾಧ್ಯಕ್ಷರಾಗಿ, ಕೆ.ಸಿ.ಸಿದ್ದಯ್ಯ, ಕಾರ್ಯದರ್ಶಿಯಾಗಿ ಅಣ್ಣೂರು ಎಸ್.ಸಿದ್ದೇಗೌಡ, ಕೋಶಾಧ್ಕ್ಷರಾಗಿ ಅಂಬರಹಳ್ಳಿ ಕಾಳೇಗೌಡ, ಸದಸ್ಯರಗಳಾಗಿ, ಡಿ.ಎ.ಕೆರೆ ಡಿ.ಕೆ.ಮಾಯಿಗೌಡ, ಮುಟ್ಟನಹಳ್ಳಿ ಮಾಯಿಗೌಡ, ಗುರುದೇವರಹಳ್ಳಿ ಸಿದ್ದೇಗೌಡ, ಕ್ಯಾತಘಟ್ಟದ ದ್ಯಾವಯ್ಯ, ಕೂಳಗೆರೆ ಹೊನ್ನೇಗೌಡ, ಆರುವನಹಳ್ಳಿ ಸುಬ್ಬಣ್ಣ, ಹೊನ್ನಲಗೆರೆ ಎಸ್.ಸಿದ್ದೇಗೌಡ, ಮಡೇನಹಳ್ಳಿ ಎಂ.ಯಡೂರಪ್ಪ, ಮೆಣಸಗೆರೆ, ಪಟೇಲ್ ಪುಟ್ಟಸ್ವಾಮಿಗೌಡ, ಬಿದರಹಳ್ಳಿ ಜವರಾಯಿಗೌಡ, ಕೆ.ಶೆಟ್ಟಹಳ್ಳಿ ಎಸ್.ಪುಟ್ಟಸ್ವಾಮಿಗೌಡ, ಯಡಗನಹಳ್ಳಿ ಬಸವೇಗೌಡ, ಕೆ.ಪಿ.ದೊಡ್ಡಿ ಕೆ.ಪಿ.ಲಿಂಗಯ್ಯ, ಮಣಿಗೆರೆ ದೇವರಗುಡ್ಡ ಲಿಂಗೇಗೌಡ, ಕಾಡುಕೊತ್ತನಹಳ್ಳಿ ಕೆ.ವೀರೇಗೌಡ, ಬಿ.ಹಟ್ಟಯ್ಯ ಆಗಿದ್ದರು. ಭಾರತೀ ಶಿಕ್ಷಣ ಸಂಸ್ಥೆಯ ಪ್ರಾರಂಭವಾದ ಪ್ರಥಮ ಮುಖ್ಯೊಪಾಧ್ಯಾಯರಾಗಿ ಎಚ್.ಕೆಂಡೇಗೌಡರು ಕಾರ್ಯನಿರ್ವಹಿಸಿದ್ದು, ಇವರೆಲ್ಲರ ಸಹಕಾರದೊಂದಿಗೆ ಪ್ರಾರಂಭಗೊಂಡ ಭಾರತೀ ಶಿಕ್ಷಣ ಸಂಸ್ಥೆ ಗ್ರಾಮೀಣ ಮಕ್ಕಳಿಗೆ ಕಡಿಮೆ ಖರ್ಚಿನಲ್ಲಿ ಉನ್ನತ ಶಿಕ್ಷಣ ನೀಡುವ ಮೂಲಕ ಸಮಾಜದ ಅಗತ್ಯತೆಗಳನ್ನು ಪೂರೈಸುವ ಹಾಗೂ ಪ್ರಾದೇಶಿಕವಾಗಿ ಜಿಲ್ಲೆಯ ಜನರನ್ನು ನಾಗರಿಕರನ್ನಾಗಿ ರೂಪಿಸುವ ಮಹತ್ ಕಾರ್ಯವನ್ನೂ ಅಕ್ಷರಶಃ ಸಾಧಿಸಿದ್ದಾರೆ. 1962ರಲ್ಲಿ ಕಾಳಮುದ್ದನದೊಡ್ಡಿಯ ಮಂಡ್ಯ ಮಾರ್ಗದ ರಸ್ತೆಯಲ್ಲಿರುವ ಚಿಣಕೆಗೌಡ ಎಂಬುವವರ ಹೆಂಚಿನ ಮನೆಯನ್ನು ಬಾಡಿಗೆ ಪಡೆದು 34 ವಿದ್ಯಾರ್ಥಿಗಳ ಪ್ರವೇಶದಿಂದ ಸಂಸ್ಥೆ ಪ್ರಾರಂಭವಾಯಿತು. ಆರಂಭದ ದಿನಗಳಲ್ಲಿ ಬಿ.ಎ., ಬಿ.ಎಲ್, ಪದವೀಧರರಾದ ಜಿ.ಮಾದೇಗೌಡರೇ ಸಮಾಜ ವಿಜ್ಞಾನ ವಿಷಯವನ್ನು ಕೆಲವು ಕಾಲ ಬೋಧಿಸಿದರು.[2ಎ] ಭಾರತೀ ಶಿಕ್ಷಣ ಸಂಸ್ಥೆಗೆ ಭದ್ರ ಬುನಾದಿ ಹಾಕಿಕೊಟ್ಟವರಲ್ಲಿ ಎಚ್.ಕೆಂಡೇಗೌಡ ಅವರು ಪ್ರಮುಖರೆನಿಸಿಕೊಂಡಿದ್ದಾರೆ.

ಮಂಡ್ಯದ ಮುನ್ಸಿಪಾಲ್ ಶಾಲೆಯ ಅಧ್ಯಾಪಕರಾಗಿದ್ದ ಹೊಸಕೆರೆ ಎಚ್.ಕೆಂಡೇಗೌಡರು ಭಾರತೀ ಪ್ರೌಢಶಾಲೆಯ ಮುಖ್ಯ ಶಿಕ್ಷಕರಾಗಿ ಅಧಿಕಾರ ವಹಿಸಿಕೊಂಡು ದಿನದಿಂದ ಸುದೀರ್ಘ 16 ವರ್ಷಗಳ ಕಾಲ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿ, ಗುರುದೇವರಹಳ್ಳಿ ಮಾದೇಗೌಡರ ದೂರದರ್ಶಿತ್ವಕ್ಕೆ ಸ್ಪಂದಿಸುತ್ತಾ ಬೃಹತ್ ಶೈಕ್ಷಣಿಕ ಸಂಸ್ಥೆಗೆ ಭದ್ರ ಬುನಾದಿಯನ್ನು ಒದಗಿಸಿದ ಕೀರ್ತಿ ಎಚ್.ಕೆಂಡೇಗೌಡ ಅವರಿಗೆ ಸಲ್ಲಿಸುತ್ತದೆ.

ಭಾರತೀ ಶಿಕ್ಷಣ ಸಂಸ್ಥೆಗೆ ಸುಭದ್ರವಾದ ತಳಹದಿಯನ್ನು ಹಾಕುವ ಸಲುವಾಗಿ 17 ಎಕರೆ ಪ್ರದೇಶವನ್ನು ಸರ್ಕಾರದ ವತಿಯಿಂದ ಮಂಜೂರು ಮಾಡಿಸಿರುವುದು ಅವರ ದೂರದೃಷ್ಟಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಸಂಸ್ಥೆಗೆ ಸ್ವಂತ ಜಾಗವನ್ನು ಮಂಜೂರು ಮಾಡಿಸಲು ಜಿ.ಮಾದೇಗೌಡರು ಅಂದಿನ ಕಂದಾಯ ಸಚಿವರಾಗಿದ್ದ ಎ.ವಿ.ಕೃಷ್ಣಪ್ಪರ ಒಡನಾಡಿಯಾಗಿದ್ದುಕೊಂಡು, ಅವರನ್ನು ನಿರಂತರವಾಗಿ ಭೇಟಿಮಾಡಿ ಸರ್ಕಾರದಿಂದ ಈ ಜಾಗವನ್ನು ಮಂಜೂರು ಮಾಡಿಸಿಕೊಂಡು ಅಕ್ಕಪಕ್ಕದ ಗ್ರಾಮಸ್ಥರು, ಹಾಗೂ ಮದ್ದೂರು ತಾಲ್ಲೂಕು ಬೋರ್ಡ್‌ನಿಂದ ನೆರವು ಪಡೆದು ಸುಸಜ್ಜಿತವಾದ ನಾಲ್ಕು ಕೊಠಡಿಗಳನ್ನು ನಿರ್ಮಿಸಿದ್ದರು. ಕೆಲವೇ ವರ್ಷಗಳಲ್ಲಿ 20 ಕೊಠಡಿಗಳನ್ನು ನಿರ್ಮಿಸಿ 3ನೇ ನವೆಂಬರ್ 1969ರಂದು ವಿದ್ಯಾಮಂತ್ರಿಗಳಾದ ಕೆ.ವಿ.ಶಂಕರಗೌಡರಿಂದ ಲೋಕಾರ್ಪಣೆ ಮಾಡಿಸಿದರು[3]. ವಿಶಾಲವಾದ ಭಾರತೀ ಶಿಕ್ಷಣ ಸಂಸ್ಥೆಯ ಆವರಣದಲ್ಲಿ ಮಹಾತ್ಮ ಗಾಂಧಿಜಿಯವರ ಸರ್ವೋದಯ ಪರಿಕಲ್ಪನೆಯ ಪ್ರಮುಖ ಅಂಶಗಳಾದ ತೋಟಗಾರಿಕೆ, ಗುಡಿ ಕೈಗಾರಿಕೆ, ಸ್ವ–ಉದ್ಯೋಗ, ಕೋಳಿ ಸಾಗಾಣಿಕೆ ಕೇಂದ್ರ, ಮೀನು ಸಾಗಾಣಿಕೆ ಇವೇ ಮೊದಲಾದ ಪರಿಸರ ಹಾಗೂ ವಿದ್ಯಾರ್ಥಿ ಸ್ನೇಹಿ ಉದ್ದಿಮೆಗಳನ್ನು ಸ್ಥಾಪಿಸಿ ಉತ್ತಮವಾದ ಶೈಕ್ಷಣಿಕ ವಾತಾವರಣವನ್ನು ಸೃಷ್ಟಿಸಿಕೊಟ್ಟಿರುವುದು ಜಿಲ್ಲೆಗೆ ಮಾದರಿ ಹೆಜ್ಜೆಯನ್ನು ಹಾಕಿಕೊಟ್ಟಂತಾಗಿದೆ. ಗ್ರಾಮೀಣ ಪ್ರದೇಶದ ಬಡ ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಡಲು ಹಾಗೂ ಶಿಕ್ಷಣದತ್ತ ಅವರನ್ನು ಆಕರ್ಷಿಸಲು 1965ರಲ್ಲಿ ವಿದ್ಯಾರ್ಥಿ ನಿಲಯವನ್ನು ಭಾರತೀ ಶಿಕ್ಷಣ ಸಂಸ್ಥೆಯ ಆವರಣದಲ್ಲಿ ಪ್ರಾರಂಭಿಸಿದರು. ಈ ವಿದ್ಯಾರ್ಥಿ ನಿಲಯವು ಉಚಿತ ವಿದ್ಯಾರ್ಥಿ ನಿಲಯವೆಂಬುದೇ ವಿಶೇಷ. ಸ್ವತಃ ಜಿ.ಮಾದೇಗೌಡರೇ ಆಡಳಿತ ಮಂಡಳಿಯವರ ಜೊತೆ ಅಕ್ಕ ಪಕ್ಕದ ಗ್ರಾಮಕ್ಕೆ ತೆರಳಿ ದವಸ ಧಾನ್ಯಗಳನ್ನು ಸಂಗ್ರಹಿಸಿ ವಿದ್ಯಾರ್ಥಿ ನಿಲಯದಲ್ಲಿ ಉಚಿತ ಊಟದ ವ್ಯವಸ್ಥೆ ಕಲ್ಪಿಸಿ ಈ ಅಕ್ಷರ ದಾಸೋಹಕ್ಕೆ ಅರ್ಥ ಕಲ್ಪಿಸಿಕೊಟ್ಟವರು. ಇವರ ಈ ಪ್ರಯತ್ನಕ್ಕೆ ನಂಜಪ್ಪ ಎಂಬ ಅಡಿಗೆ ಭಟ್ಟ ನೆರವು ನೀಡಿರುವುದನ್ನು ಜಿ.ಮಾದೇಗೌಡರು ಈಗಲೂ ಸ್ಮರಿಸಿಕೊಳ್ಳುತ್ತಾರೆ.[3ಎ] 1968ರಲ್ಲಿ ಈ ವಿದ್ಯಾರ್ಥಿ ನಿಲಯಕ್ಕೆ ತನ್ನದೇ ಆದ ಸುಭದ್ರ ಕಟ್ಟಡವನ್ನು ನಿರ್ಮಿಸಲಾಗಿದೆ. ಅಲ್ಲಿಂದ ಪ್ರಸ್ತುತ ಶೈಕ್ಷಣಿಕ ವರ್ಷದವರೆಗೂ ಸಾವಿರಾರು ವಿದ್ಯಾರ್ಥಿಗಳು ಅಧ್ಯಯನ ನಡೆಸುತ್ತಿರುವ ಸಂಸ್ಥೆಯಲ್ಲಿ ವಿದ್ಯಾರ್ಥಿ ನಿಲಯಗಳ

ಸಂಖ್ಯೆಯೇ ಐದಕ್ಕೆ ತಲುಪಿದೆ. ಸರ್ಕಾರ, ಸ್ಥಳೀಯ ದಾನಿಗಳು, ಯು.ಜಿ.ಸಿ. ಇವೇ ಮೊದಲಾದ ಹಣದ ಮೂಲಗಳಿಂದ ನಿರ್ಮಾಣಗೊಂಡ ವಿದ್ಯಾರ್ಥಿ ನಿಲಯಗಳಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ಜ್ಞಾನದಾಹ ಮತ್ತು ಹಸಿವನ್ನು ತಣಿಸಲಾಗುತ್ತಿದೆ. ಪ್ರಸ್ತುತ ಐದು ಆಧುನಿಕ ವಿದ್ಯಾರ್ಥಿನಿಲಯಗಳನ್ನು ಕಾಣಬಹುದಾಗಿದೆ. ಅವುಗಳು ಬಾಲಕರ ವಿದ್ಯಾರ್ಥಿ ನಿಲಯ, ಬಾಲಕಿಯರ ವಿದ್ಯಾರ್ಥಿ ನಿಲಯ, ಉದ್ಯೋಗಸ್ಥ ಮಹಿಳೆಯರ ವಿದ್ಯಾರ್ಥಿ ನಿಲಯ, ಸರ್ಕಾರದ ಮೆಟ್ರಿಕ್‌ಪೂರ್ವ ಮತ್ತು ನಂತರದ ವಿದ್ಯಾರ್ಥಿ ನಿಲಯ, ಸರ್ಕರದ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ. ಈ ವಿದ್ಯಾರ್ಥಿ ನಿಲಯಗಳಲ್ಲಿ ಭಾರತೀ ವಿದ್ಯಾಸಂಸ್ಥೆಯ ಎಲ್ಲಾ ವಿಭಾಗದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಆಶ್ರಯಪಡೆದಿದ್ದಾರೆ[4]. ಈ ವಿದ್ಯಾರ್ಥಿ ನಿಲಯದಲ್ಲಿದ್ದ ವಿದ್ಯಾರ್ಥಿಗಳು ರಾಜ್ಯದ ವಿವಿಧ ಹುದ್ದೆಗಳು ಮತ್ತು ಸ್ಥಾನಗಳನ್ನು ಅಲಂಕರಿಸಿದ್ದಾರೆ. ಪ್ರಮುಖವಾಗಿ ಶಿಕ್ಷಣ, ಕಂದಾಯ, ಆರಕ್ಷಕ, ಕೃಷಿ ಇಲಾಖೆ, ವೈದ್ಯರು, ಇಂಜಿನಿಯರ್, ಇನ್ನೂ ಇತರೆ ಕ್ಷೇತ್ರಗಳಲ್ಲಿ ಸಾಧನೆಯನ್ನು ಮಾಡಿದ್ದಾರೆ. ಈಗಲೂ ಸಹ ಜಿ.ಮಾದೇಗೌಡರು ನೀಡಿದ ಪ್ರೋತ್ಸಾಹದಾಯಕ ಮಾತುಗಳನ್ನು, ವಸತಿ ನಿಲಯದ ಸೌಲಭ್ಯಗಳನ್ನು ಶಾಲಾ ಶಿಕ್ಷಕ ವೃಂದವನ್ನು ಮಹತ್ಕಾರ್ಯವನ್ನು ಸ್ಮರಿಸಕೊಳ್ಳುತ್ತಿದ್ದಾರೆ[4ಎ].

ಅಂದು ಕುಗ್ರಾಮವಾದ ಕಾಳಮುದ್ದನದೊಡ್ಡಿಯಲ್ಲಿ ಭಾರತೀ ಪ್ರೌಢಶಾಲೆಯು ಮೊಳಕೆಯೊಡೆದು ಇಂದು ರಾಜ್ಯ ಹಾಗೂ ರಾಷ್ಟ್ರದಾದ್ಯಂತ ಪ್ರತಿಷ್ಠಿತ ಭಾರತೀ ಎಜುಕೇಷನ್ ಟ್ರಸ್ಟ್ ಹೆಮ್ಮರವಾಗಿ ಬೆಳೆದು ಸಾವಿರಾರು ವಿದ್ಯಾರ್ಥಿಗಳಿಗೆ ನೆರಳಾಗಿದೆ. ಭಾರತೀ ಶಿಕ್ಷಣ ಸಂಸ್ಥೆಯ ಅಕ್ಷರ ಕ್ರಾಂತಿಯ ಸಾಧನೆಯನ್ನು ನಾಡಿನಾದ್ಯಂತ ಪ್ರಸರಿಸಿದ ಕೀರ್ತಿ ಭಾರತೀ ಕಾಲೇಜಿಗೆ ಸಲ್ಲುತ್ತದೆ. ಈ ಕಾಲೇಜು 1970ರಲ್ಲಿ ಪ್ರಾರಂಭವಾಗಿದ್ದು, ಮೈಸೂರು ವಿಶ್ವವಿದ್ಯಾನಿಲಯ ಸಂಯೋಜನೆಗೆ ಒಳಪಟ್ಟು ಅರ್ಥಶಾಸ್ತ್ರ, ಸಮಾಜಶಾಸ್ತ್ರ ಹಾಗೂ ರಾಜ್ಯಶಾಸ್ತ್ರ ವಿಷಯಗಳಲ್ಲಿ ಬಿ.ಎ., ಪದವಿ ಪ್ರಾರಂಭವಾಯಿತು. ಈ ಪದವಿ ಕಾಲೇಜಿಗೆ ಈಗಾಗಲೇ ಪ್ರೌಢಶಾಲೆಗೆ ಮುಖ್ಯೋಪಾಧ್ಯಾಯರಾಗಿದ್ದ ಹಾಗೂ ಇತಿಹಾಸದಲ್ಲಿ ಎಂ.ಎ. ಪದವೀಧರರಾಗಿದ್ದ ಕೆಂಡೇಗೌಡ ಅವರು ಪ್ರಥಮ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದರು. ಭಾರತೀ ಕಾಲೇಜು ಇಂದು ಗ್ರಾಮಮಟ್ಟ ದಿಂದ ಮೊದಲ್ಗೊಂಡು ವಿಶ್ವವಿದ್ಯಾನಿಲಯ ಹಾಗೂ ಅಂತರ ರಾಜ್ಯಮಟ್ಟದ ಕಲೆ, ಸಾಹಿತ್ಯ, ಪ್ರಬಂಧ, ಕ್ರೀಡೆ, ಫಲಿತಾಂಶ, ಉದ್ಯೋಗ ಇವೇ ಮೊದಲಾದ ಕ್ಷೇತ್ರಗಳಲ್ಲಿ ಆಕರ್ಷಣೀಯ ಸಾಧನೆಗೈಯುತ್ತಿದೆ. ಭಾರತೀ ಕಾಲೇಜು ಹಳ್ಳಿಗಾಡಿನ ಮಕ್ಕಳಿಗೆ ಉನ್ನತ ಶಿಕ್ಷಣವನ್ನು ನೀಡುತ್ತಾ ಸಾಮಾಜಿಕ ಕಳಕಳಿಯನ್ನು ಭಾರತೀ ಕಾಲೇಜು ಹೊಂದಿದೆ. ಐದಾರು ಜಿಲ್ಲೆಯ ವಿದ್ಯಾರ್ಥಿಗಳು ಪದವಿ ಅಧ್ಯಯನಕ್ಕಾಗಿ ಆಗಮಿಸುತ್ತಿದ್ದು ಆಯಾ ವಿಭಾಗದ ಎಲ್ಲಾ ವಿದ್ಯಾರ್ಥಿಗಳ ಶೈಕ್ಷಣಿಕ ಅವಶ್ಯಕತೆಗಳನ್ನು ಪೂರೈಸುವಲ್ಲಿ ಗೌಡರ ನೇತೃತ್ವದ ಆಡಳಿತ ಮಂಡಳಿವರ್ಗ ಪ್ರಯೋಗಾಲಯಗಳು, ಆಕರ್ಷಕ ಗ್ರಂಥಾಲಯ,

ಕ್ರೀಡಾಂಗಣ, ಆಧುನಿಕ ವಿದ್ಯಾರ್ಥಿನಿಲಯ, ಹಾಗೂ ಕಾಲೇಜಿನ ಆವರಣದಲ್ಲಿ ವಿದ್ಯಾರ್ಥಿ ಸ್ನೇಹಿ ಪರಿಸರವನ್ನು ನಿರ್ಮಿಸಿಕೊಡಲಾಗಿದೆ.

ಭಾರತೀ ಪ್ರೌಢಶಾಲೆಯ ಯಶಸ್ಸಿನ ಪರಿಣಾಮ ಭಾರತೀ ಕಾಲೇಜಿನ ಸ್ಥಾಪನೆಯ ಕನಸನ್ನು ಜಿ.ಮಾದೇಗೌಡರು ನನಸಾಗಿಸಿದ್ದಾರೆ. ಶೈಕ್ಷಣಿಕ ಸಂಸ್ಥೆಯ ಪ್ರಗತಿಗಾಗಿ ರೈತರ ಪಾಲ್ಗೊಳ್ಳುವಿಕೆಯ ಪ್ರಾಮುಖ್ಯತೆಯನ್ನು ಅರಿತ ಜಿ.ಮಾದೇಗೌಡರು ರೈತರು ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗೆ ಸರಬರಾಜು ಮಾಡಿದ ಪ್ರತಿ ಟನ್ ಕಬ್ಬಿಗೆ ಒಂದು ರೂಪಾಯಿಗಳನ್ನು ವಿದ್ಯಾರ್ಥಿನಿಧಿಗಾಗಿ ಸಂಗ್ರಹಿಸಿದ್ದರು[5]. ಗ್ರಾಮೀಣ ವಿದ್ಯಾರ್ಥಿಗಳ ಶಿಕ್ಷಣದ ಕನಸನ್ನು ರೈತರ ಸಹಯೋಗದೊಂದಿಗೆ ಸಾಕಾರಗೊಳಿಸುತ್ತಿ ದ್ದಾರೆ. ಜಿ.ಮಾದೇಗೌಡರ ಶಿಕ್ಷಣ ನೀಡಿಕೆಯ ಹಂಬಲ ಇಷ್ಟಕ್ಕೇ ನಿಲ್ಲಲಿಲ್ಲ. ಮುಂದುವರೆದು 1970–1971ರಲ್ಲಿ ಭಾರತೀ ಕಾಲೇಜಿನ ಆವರಣದಲ್ಲಿಯೇ ಎರಡು ವರ್ಷದ ಪದವಿಪೂರ್ವ ಕಾಲೇಜನ್ನು ಕಲಾ ವಿಭಾಗ ಹಾಗೂ ವಿಜ್ಞಾನ ವಿಭಾಗದಲ್ಲಿ ಕೋರ್ಸ್‌ಗಳನ್ನು ಪ್ರಾರಂಭಿಸಲಾಯಿತು. 1973ರಲ್ಲಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರಗಳನ್ನೊಳಗೊಂಡಂತೆ ಬಿ.ಎಸ್ಸಿ., ಪದವಿಯನ್ನು ಕೇವಲ ಎಂಟು ವಿದ್ಯಾರ್ಥಿಗಳ ಪ್ರವೇಶದೊಂದಿಗೆ ಪ್ರಾರಂಭಿಸಲಾಯಿತು. ಇಂದು ನೂರಾರು ವಿದ್ಯಾರ್ಥಿಗಳು ಬಿ.ಎಸ್ಸಿ., ಪದವಿಗೆ ಪ್ರವೇಶ ಪಡೆದಿದ್ದಾರೆ. 1973ರಲ್ಲಿ ಪದವಿಪೂರ್ವ ಕಾಲೇಜಿನಲ್ಲಿ ವಾಣಿಜ್ಯ ವಿಷಯವನ್ನು ಹಾಗೂ ಪದವಿ ಕಾಲೇಜಿನಲ್ಲಿ ಬಿ.ಕಾಂ., ಕೋರ್ಸ್‌ಗಳನ್ನು ಪ್ರಾರಂಭಿಸಲಾಯಿತು. 1976ರಲ್ಲಿ ಭಾರತೀ ಕಾಲೇಜು ಯುಜಿಸಿ ಅನುದಾನಕ್ಕೆ ಒಳಪಟ್ಟು ಶಿಕ್ಷಣದ ಗುಣಮಟ್ಟವನ್ನು ಉನ್ನತೀಕರಿಸಿಕೊಂಡಿತು. ಗೌಡರ ದೂರದೃಷ್ಟಿತ್ವದ ಫಲವಾಗಿ ಪ್ರಾರಂಭಗೊಂಡ ಕಾಲೇಜು ಕೇವಲ ಆರು ವರ್ಷಗಳಲ್ಲಿಯೇ ಯುಜಿಸಿ ಅನುದಾನಕ್ಕೆ ಒಳಪಟ್ಟಿತು. ಭಾರತೀ ಕಾಲೇಜನ್ನು ಯುಜಿಸಿಗೆ ಒಳಪಡಿಸುವಲ್ಲಿ ಅವರ ಪರಿಶ್ರಮ ಅಪಾರವಾದುದು. ಸಂಸ್ಥೆಯ ಆವರಣದಲ್ಲಿ ರಾಜ್ಯ ಹಾಗೂ ರಾಷ್ಟ್ರಮಟ್ಟದ ಸಮ್ಮೇಳನಗಳನ್ನು ಆಯೋಜಿಸಿ ಪರಿಣಿತ ಸಂಪನ್ಮೂಲ ವ್ಯಕ್ತಿಗಳನ್ನು ಆಹ್ವಾನಿಸಿ ವಿದ್ಯಾರ್ಥಿಗಳನ್ನು ಅಭಿವಿನ್ಯಾಸಗೊಳಿಸಲಾಗುತ್ತಿದೆ. ಕಾಲೇಜಿನ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಲು ಸ್ವತಃ ಗೌಡರು ಒಳಗೊಂಡಂತೆ ಟ್ರಸ್ಟಿಗಳು ದಾನಶೂರ ಕರ್ಣ ಎಂಬ ಪೌರಾಣಿಕ ನಾಟಕವನ್ನು ಪ್ರದರ್ಶಿಸಿ ಹಣ ಸಂಗ್ರಹಿಸಿದ್ದಾರೆ. ಅಧ್ಯಾಪಕರಿಗೂ ಮಾರ್ಗದರ್ಶನ ನೀಡಿ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಎಂಬ ಐತಿಹಾಸಿಕ ನಾಟಕವನ್ನು ಪ್ರದರ್ಶಿಸಿ ಶೈಕ್ಷಣಿಕ ಕಾಳಜಿಯನ್ನು ಮೆರೆದಿದ್ದಾರೆ. ಸ್ವತಃ ಗೌಡರೇ ಕರ್ಣನ ಪಾತ್ರ ನಿರ್ವಹಿಸಿರುವುದು ಅವರ ಮಾದರಿ ಚಿಂತನಾ ವ್ಯಕ್ತಿತ್ವವನ್ನು ಬಿಂಬಿಸುತ್ತದೆ.[5ಎ]

ಈ ಸಂಸ್ಥೆಯ ಅಧ್ಯಕ್ಷರಾಗಿದ್ದರೂ ಅಧ್ಯಾಪಕರನ್ನು ಆಯ್ಕೆ ಮಾಡುವ ಸಂದರ್ಭದ ವೇಳೆ ಸಂದರ್ಶನದಲ್ಲಿ ಭಾಗಿಯಾಗದೇ ಆಯ್ಕೆ ಸಮಿತಿಯ ತಜ್ಞರನ್ನು ಕುರಿತು ನೀವು

ಇಂದು ಆಯ್ಕೆ ಮಾಡುವ ಗುಣಮಟ್ಟದ ಅಧ್ಯಾಪಕರ ಆಧಾರದ ಮೇಲೆ ಭಾರತೀ ವಿದ್ಯಾ ಸಂಸ್ಥೆಯ ಭವಿಷ್ಯ ಅಡಗಿದೆ ಎಂದು ಕಿವಿಮಾತು ಹೇಳಿ ನೇಮಕಾತಿ ಆಯ್ಕೆ ಪ್ರಕ್ರಿಯೆಯಿಂದ ಅಂತರ ಕಾಯ್ದುಕೊಂಡಿದ್ದರು. ಈ ಅಂಶಗಳಿಂದ ಜಿ.ಮಾದೇಗೌಡರಲ್ಲಿ ಕಂಡುಬರುವ ಅಂಶವೇನೆಂದರೆ ವಿದ್ಯಾರ್ಥಿಗಳ ಬಗೆಗಿದ್ದ ಕಾಳಜಿ, ಶಿಕ್ಷಣದ ಬಗೆಗಿನ ಗೌರವ ಹಾಗೂ ಸ್ವಜನಪಕ್ಷಪಾತ, ಭ್ರಷ್ಟಚಾರ, ಸ್ವಾರ್ಥ ಎಂಬ ಭೂತಕ್ಕೆ ಬಲಿಯಾಗಲಿಲ್ಲ ಎಂಬುವುದು ಅಧ್ಯಯನದಿಂದ ಕಂಡುಬರುತ್ತದೆ. ಅವರ ದೂರದೃಷ್ಟಿತ್ವದ ಪರಿಣಾಮವಾಗಿ ಯುಜಿಸಿಯ ನ್ಯಾಕ್ ಮಂಡಳಿಯಿಂದ 2003ರಲ್ಲಿ 'ಎ' ಗ್ರೇಡ್ ಮಾನ್ಯತೆಯನ್ನು ಪಡೆದುಕೊಂಡಿದೆ ಹಾಗೂ 2003ರಲ್ಲಿ ವಿಶ್ವಬ್ಯಾಂಕಿನಿಂದ ಗ್ರಂಥಾಲಯ ಅಭಿವೃದ್ಧಿಗೆ ರೂ. 75,000/– ಗಳ ನೆರವು ಹರಿದು ಬಂದಿದೆ.

ಭಾರತೀ ಕಾಲೇಜಿನ ಯಶಸ್ಸಿಗೆ ಪೂರಕವಾಗಿ ಅನೇಕ ಸಮ್ಮೇಳನಗಳು, ಕಾರ್ಯಾಗಾರ, ವಿಚಾರ ಸಂಕಿರಣಗಳನ್ನು ಆಯೋಜಿಸಲಾಗುತ್ತದೆ. ಗ್ರಾಮೀಣ ಮಕ್ಕಳಿಗೆ ಕೈಗೆಟುಕುವ ಕಡಿಮೆ ಖರ್ಚಿನಲ್ಲಿ ಮೌಲ್ಯಾಧಾರಿತ ಉನ್ನತ ಶಿಕ್ಷಣವನ್ನು ನೀಡುವುದರ ಮೂಲಕ ಅವರು ಸಮಾಜದ ಅಗತ್ಯತೆಗಳಿಗೆ ಸ್ಪಂದಿಸುವಂತೆ ಮಾಡಿ ಗಾಂಧೀ ತತ್ವಗಳನ್ನು ಮೈಗೂಡಿಸಿಕೊಂಡು ಪ್ರಯೋಜನಕಾರಿ ನಾಗರಿಕರನ್ನಾಗಿ ರೂಪಿಸುವುದಾಗಿದೆ ಎಂಬ ಧ್ಯೇಯ ವಾಕ್ಯವನ್ನು ಭಾರತೀ ಕಾಲೇಜು ಒಳಗೊಂಡಿದ್ದು, ಧ್ಯೇಯ ವಾಕ್ಯ ಸಾಧನೆಗೆ ಹಗಲಿರುಳು ಶ್ರಮಿಸಲಾಗುತ್ತಿದೆ. ಕಾಲೇಜಿನ ಪಠ್ಯೇತರ ಚಟುವಟಿಕೆಗಳಾದ ಎನ್‌ಎಸ್‌ಎಸ್ ಹಾಗೂ ಎನ್‌ಸಿಸಿ ಕ್ರೀಡೆ, ಸಾಂಸ್ಕೃತಿಕ ಚಟುವಟಿಕೆ ಇವೇ ಮೊದಲಾದವುಗಳು ಕ್ರಿಯಾಶೀಲವಾಗಿವೆ. 1978ರಲ್ಲಿ ಕೃಷಿಗೆ ಪೂರಕವಾದ ರೇಷ್ಮೆ ಕೃಷಿಯಲ್ಲಿ ವೃತ್ತಿ ಶಿಕ್ಷಣ, 1983ರಲ್ಲಿ ಕೃಷಿ ಮತ್ತು ಫಾರಂ ಮ್ಯಾನೇಜ್‌ಮೆಂಟ್, ಹೈನುಗಾರಿಕೆ ಕೋರ್ಸ್‌ಗಳನ್ನು ಪ್ರಾರಂಭಿಸಲಾಯಿತು. 1985ರಲ್ಲಿ ತಾಂತ್ರಿಕ ಶಿಕ್ಷಣದ ಎಲೆಕ್ಟ್ರಿಕಲ್ ವೈರಿಂಗ್ ಮತ್ತು ವಿದ್ಯುತ್ ಉಪಕರಣಗಳ ಸರ್ವೀಸಿಂಗ್, ಸಿವಿಲ್ ಕನ್‌ಸ್ಟ್ರಕ್ಷನ್ ಟೆಕ್ನಾಲಜಿ, ವೈದ್ಯ ಹಾಗೂ ಅರೆ ವೈದ್ಯಕೀಯ ಶಿಕ್ಷಣದ ಲ್ಯಾಬೋರೇಟರಿ ಟೆಕ್ನಿಷಿಯನ್ ಕೋರ್ಸ್‌ಗಳನ್ನು ಪ್ರತ್ಯೇಕ ಕೊಠಡಿಯಲ್ಲಿ ಪ್ರಾರಂಭಿಸಿ ಸಾವಿರಾರು ವಿದ್ಯಾರ್ಥಿಗಳು ಸ್ವಯಂ ವೃತ್ತಿ ಕೈಗೊಳ್ಳಲು ಅವಕಾಶ ಕಲ್ಪಿಸಿಕೊಟ್ಟು ನಿರುದ್ಯೋಗದ ಸಮಸ್ಯೆಯನ್ನು ಜಿ.ಮಾದೇಗೌಡರು ನಿವಾರಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

1981ರಲ್ಲಿ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಎಲ್.ಕೆ.ಜಿ. ಹಾಗೂ ಒಂದನೇ ತರಗತಿಗೆ ಪ್ರವೇಶವನ್ನು ಆರಂಭಿಸಲಾಯಿತು. 1987ರಲ್ಲಿ ಹಿರಿಯ ಪ್ರಾಥಮಿಕ ಶಾಲೆಯನ್ನಾಗಿ ಉನ್ನತೀಕರಿಸಲಾಯಿತು. ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಸಾವಿರಾರು ಮಕ್ಕಳು ವಿದ್ಯಾಭ್ಯಾಸವನ್ನು ಪಡೆಯುತ್ತಿದ್ದಾರೆ. 1989ರಲ್ಲಿ ಈ ಶಾಲೆಯು ಸರ್ಕಾರದ ಅನುದಾನಕ್ಕೆ ಒಳಪಟ್ಟಿದೆ. ಜಿ.ಮಾದೇಗೌಡರ ಶಿಕ್ಷಣ

ನೀಡಿಕೆಯ ಹಂಬಲ ಮುಂದುವರೆದು ತಾಂತ್ರಿಕ ಕೋರ್ಸ್‌ಗಳನ್ನು ತೆರೆಯಲು ಪ್ರಯತ್ನಿಸಿ ಸಫಲರಾದರು. ಅದರಂತೆ 1986ರಲ್ಲಿ ಬಿ.ಇಟಿ ಪಾಲಿಟೆಕ್ನಿಕ್ ಕಾಲೇಜನ್ನು ಭಾರತೀ ವಿದ್ಯಾ ಸಂಸ್ಥೆಯ ಆವರಣದಲ್ಲಿಯೇ ಪ್ರಾರಂಭಿಸಿದ್ದಾರೆ. ಸಿವಿಲ್, ಟೆಲಿಕಮ್ಯೂನಿಕೇಷನ್, ಕಮರ್ಶಿಯಲ್ ಪ್ರಾಕ್ಟೀಸ್ ವಿಷಯಗಳು ಪ್ರಾರಂಭವಾದ ಈ ಪಾಲಿಟೆಕ್ನಿಕ್ ಕಾಲೇಜುಗಳಲ್ಲಿ ಉತ್ತಮ ಪ್ರಯೋಗಾಲಯ, ಗ್ರಂಥಾಲಯಗಳನ್ನು ಒಳಗೊಂಡಿದೆ.

ಗೌಡರ ಶೈಕ್ಷಣಿ ಕಾರ್ಯಕ್ಷೇತ್ರವು ಭಾರತೀನಗರದಿಂದ ಕಿರುಗಾವಲು ಕ್ಷೇತ್ರಕ್ಕೂ ವ್ಯಾಪಿಸಿತು. ಈ ಕ್ಷೇತ್ರದಿಂದ ಸತತವಾಗಿ ಆರು ಬಾರಿ ಶಾಸಕರಾಗಿ ಸೋಲರಿಯದ ಸರದಾರ ಎಂದು ಬಿರುದು ಪಡೆಯಲು ಕಾರಣವಾಗಿದ್ದ ಈ ಕ್ಷೇತ್ರದ ಜನರಿಗೂ ಅಕ್ಷರ ಜ್ಞಾನ ನೀಡುವ ಆಶಯದಿಂದ ಜೂನ್ 1988ರಲ್ಲಿ ಭಾರತೀ ಶಿಕ್ಷಣ ಸಂಸ್ಥೆಯ ಮೂಲ ಸಂಸ್ಥೆಯ ಶಾಖೆಯಾಗಿ, ಭಾರತೀ ಪದವಿಪೂರ್ವ ಕಾಲೇಜು ಎಂಬ ಅಂಕಿತದೊಡನೆ ಪ್ರಾರಂಭಿಸಿದರು. ಪ್ರಸ್ತುತ ಸಾವಿರಾರು ವಿದ್ಯಾರ್ಥಿಗಳು ಈ ಕಾಲೇಜಿನಲ್ಲಿ ಅಕ್ಷರ ಜ್ಞಾನ ಪಡೆಯುತ್ತಿದ್ದಾರೆ. ಆ ಭಾಗದ ಸಾವಿರಾರು ಜನರನ್ನು ವಿದ್ಯಾವಂತರನ್ನಾಗಿ ಮಾಡಲು ಗೌಡರು ಮೂಲ ಕಾರಣ ಪುರುಷರಾಗಿದ್ದಾರೆ ಎಂಬುದನ್ನು ಕ್ಷೇತ್ರಕಾರ್ಯ ಮೂಲಕ ಮಾಹಿತಿ ಸಂಗ್ರಹಣೆಯಿಂದ ಕಂಡುಕೊಳ್ಳಲಾಗಿದೆ. ಜಿ.ಮಾದೇಗೌಡರು ಹನುಮಂತನಗರದ ಬೊಳ್ಳುಗುಡ್ಡವನ್ನು ಸರ್ಕಾರದಿಂದ ಮಂಜೂರು ಮಾಡಿಸಿ ಗ್ರಾಮೀಣ ಮಕ್ಕಳಿಗೆ ವಸತಿಸಹಿತ ವಿದ್ಯೆ ನೀಡುವ ಭಾರತೀ ವಸತಿ ಶಾಲೆಯನ್ನು ದಿನಾಂಕ 8ನೇ ಜುಲೈ 1988ರಂದು ಮೈಸೂರಿನ ರಾಮಕೃಷ್ಣಾಶ್ರಮದ ಸ್ವಾಮಿ ಸೋಮನಾಥಾನಂದರು ಈ ವಸತಿ ಶಾಲೆಯನ್ನ ಉದ್ಘಾಟಿಸುವ ಮೂಲಕ ಪ್ರಾರಂಭಿಸಿದರು[6]. ಈ ನಿಟ್ಟಿನಲ್ಲಿ ಪ್ರಾಚೀನ ಗುರುಕುಲ ಪದ್ಧತಿಯಲ್ಲಿನ ಶಿಕ್ಷಣವನ್ನು ಕಲ್ಪಿಸಿದರು. ಇದೇ ಆವರಣದಲ್ಲಿ 1992-1993ನೇ ಸಾಲಿನಲ್ಲಿ ಭಾರತೀ ಸಂಯುಕ್ತ ಪದವಿಪೂರ್ವ ಕಾಲೇಜನ್ನು ಪ್ರಾರಂಭಿಸಿ ವಿಜ್ಞಾನದ ವಿಷಯಗಳಿಗೆ ಪ್ರವೇಶ ಕಲ್ಪಿಸಿದರು. ಪ್ರಸ್ತುತ ಕನ್ನಡ, ಇಂಗ್ಲೀಷ್, ಸಂಸ್ಕೃತ ಭಾಷಾ ವಿಷಯಗಳನ್ನು ಬೋಧಿಸಲಾಗುತ್ತಿದೆ. ಭಾರತೀ ಶಿಕ್ಷಣ ಸಂಸ್ಥೆಯಲ್ಲಿರುವಂತೆ 1990-1991ರಲ್ಲಿ ಕಿರುಗಾವಲಿನಲ್ಲಿಯೂ ವೃತ್ತಿ ಶಿಕ್ಷಣದ ಕೋರ್ಸ್‌ಗಳನ್ನು ತೆರೆದು, ಸುತ್ತಮುತ್ತಲಿನ ಯುವ ಪೀಳಿಗೆಯೂ ಅನುಭವಿಸುತ್ತಿದ್ದ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿ ಕೃಷಿ, ರೇಷ್ಮೆ, ಇತ್ಯಾದಿ ವೃತ್ತಿ ಶಿಕ್ಷಣದ ಕೋರ್ಸ್‌ಗಳನ್ನು ತೆರೆದು ಸಾವಿರಾರು ವಿದ್ಯಾರ್ಥಿಗಳು ಇಲ್ಲಿ ತರಬೇತಿ ಪಡೆದು ನಂತರ ಖಾಸಗಿ ಹಾಗೂ ಸರ್ಕಾರಿ ನೌಕರಿ ಪಡೆದು ಪ್ರಸ್ತುತ ಉತ್ತಮವಾದ ಗೌರವಯುತವಾದ ಜೀವನವನ್ನು ನಡೆಸಲು ಸಹಕಾರಿಯಾಗಿರುವುದು ಕಂಡುಬರುತ್ತದೆ. 1992ರಲ್ಲಿ ಭಾರತೀ ಪ್ರಥಮ ದರ್ಜೆ ಕಾಲೇಜನ್ನು ಕಿರುಗಾವಲಿನಲ್ಲಿ ಪ್ರಾರಂಭಿಸುವ ಮೂಲಕ ಗೌಡರು ಉನ್ನತ ಶಿಕ್ಷಣ ನೀಡುವ ಸಂಸ್ಥೆಯನ್ನು ಭಾರತೀನಗರದಿಂದ ಹೊರಗೂ ವಿಸ್ತರಿಸಿದರು. ಈ ಕಾಲೇಜಿನಲ್ಲಿ ಪ್ರಸ್ತುತ ಸಾವಿರಾರು ವಿದ್ಯಾರ್ಥಿಗಳು ತಮ್ಮ ಜ್ಞಾನವನ್ನು

ನೀಗಿಸಿಕೊಳ್ಳುತ್ತಿದ್ದಾರೆ. ಇಂದು ಈ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿದ ಸಾವಿರಾರು ವಿದ್ಯಾರ್ಥಿಗಳು ಉನ್ನತ ಶಿಕ್ಷಣವನ್ನು ಪಡೆದು ಉದ್ಯೋಗದಲ್ಲಿರುವುದನ್ನು ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

ಜಿ.ಮಾದೇಗೌಡರ ದೂರದೃಷ್ಟಿಯ ಪ್ರತಿಫಲವಾಗಿ ಪ್ರವರ್ಧಮಾನಕ್ಕೆ ಬರುತ್ತಿದ್ದೆ ಭಾರತೀ ವಿದ್ಯಾಸಂಸ್ಥೆಯಲ್ಲಿ 1992ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಸಂಯೋಜನೆಯೊಂದಿಗೆ ಭಾರತೀ ಫಾರ್ಮಸಿ ಕಾಲೇಜು ಪ್ರಾರಂಭಿಸಲಾಯಿತು. 40 ವಿದ್ಯಾರ್ಥಿಗಳ ಪ್ರವೇಶದ ಜೊತೆಗೆ ಪ್ರಾರಂಭಗೊಂಡ ಕಾಲೇಜು ಉತ್ತಮವಾದ ಕಟ್ಟಡ ಪ್ರಯೋಗಾಲಯ, ಗ್ರಂಥಾಲಯ, ತಜ್ಞ ಅಧ್ಯಾಪಕರನ್ನು ಒಳಗೊಂಡಿದ್ದು, ಸಾವಿರಾರು ಫಾರ್ಮಸಿ ವಿದ್ಯಾರ್ಥಿಗಳನ್ನು ಸಿದ್ದಪಡಿಸಿದೆ. ಕಿರುಗಾವಲಿಗೆ ತಮ್ಮ ಶೈಕ್ಷಣಿಕ ಕ್ಷೇತ್ರವನ್ನು ವಿಸ್ತರಿಸಿದಂತೆ ಹನುಮಂತನಗರದಲ್ಲಿ 1994 ರಂದು ಕನ್ನಡ ಮಾಧ್ಯಮಿಕ ಪ್ರಾಥಮಿಕ ಶಾಲೆಯನ್ನು ಆರಂಭಿಸಿ, ಎಲ್.ಕೆ.ಜಿ. ಯಿಂದ ಏಳನೇ ತರಗತಿವರೆವಿಗೆ ಪ್ರವೇಶಾವಕಾಶಗಳನ್ನು ವಿಸ್ತರಿಸಿಕೊಳ್ಳಲಾಗಿದೆ. ಈ ಶಾಲೆಗೆ ಪ್ರತ್ಯೇಕವಾದ ಮೈದಾನ ತರಗತಿಗಳ ಕೊಠಡಿಗಳನ್ನು ನಿರ್ಮಿಸಲಾಗಿದೆ. 2001ರಲ್ಲಿ ಭಾರತೀ ಶಿಕ್ಷಣ ಸಂಸ್ಥೆಯ ಆವರಣದಲ್ಲಿ ಆಂಗ್ಲ ಮಾಧ್ಯಮ ಭಾರತೀ ಪ್ರೌಢಶಿಕ್ಷಣ ಶಾಲೆಯನ್ನು ಪ್ರಾರಂಭಿಸಲಾಯಿತು. ಸೆಮಿ ರೆಡಿಸೆನ್ಸಿಯಲ್, ಆಧುನಿಕ ಮಾದರಿಯ ಈ ಶಾಲೆಯಲ್ಲಿ ಪ್ರತಿವರ್ಷ ಶೇಕಡಾ 100 ರಷ್ಟು ಫಲಿತಾಂಶ ದೊರೆಯುತ್ತಿದ್ದು ಆಂಗ್ಲ ಮಾಧ್ಯಮ ಪ್ರೌಢಶಾಲೆಗಳ ಕೊರತೆಯನ್ನು ನೀಗಿಸುವಲ್ಲಿ ಗೌಡರ ಪ್ರಯತ್ನ ಸಾಫಲ್ಯವಾದುದು. ಈ ಮೂಲಕ ಹಳ್ಳಿಗಾಡಿನ ಬಡಕುಟುಂಬದ ಮಕ್ಕಳಿಗೂ ಇಂಗ್ಲೀಷ್ ಶಿಕ್ಷಣ ಸೌಲಭ್ಯವೂ ಕೈಗೆಟುವಂತಾಗಿದೆ. 2001ರಲ್ಲಿ ಭಾರತೀ ಪದವಿಪೂರ್ವ ಕಾಲೇಜು ಸ್ವತಂತ್ರ ಅಸ್ತಿತ್ವದೊಂದಿಗೆ ಪದವಿಪೂರ್ವ ಇಲಾಖೆಯ ವ್ಯಾಪ್ತಿಗೆ ಒಳಪಟ್ಟು ಪ್ರಸ್ತುತ ಕಲಾ, ವಾಣಿಜ್ಯ, ವಿಜ್ಞಾನ ತರಗತಿಗಳಲ್ಲಿ ವಿದ್ಯಾರ್ಥಿಗಳು ಅಧ್ಯಯನ ನಡೆಸುತ್ತಿದ್ದಾರೆ. ಉತ್ತಮ ಸಮಾಜದ ನಿರ್ಮಾಣದಲ್ಲಿ ಶಿಕ್ಷಕರ ಪಾತ್ರವೇ ಪ್ರಮುಖವಾದದ್ದು ಎಂಬುದನ್ನರಿತ ಗೌಡರು 2005ರಲ್ಲಿ ರಾಷ್ಟ್ರೀಯ ಶಿಕ್ಷಕರ ತರಬೇತಿ ಪರಿಷತ್ತಿನ (ಎನ್‌ಸಿಟಿಇ) ಮಾನ್ಯತೆ ಹಾಗೂ ಕರ್ನಾಟಕ ಸರ್ಕಾರದ ಅನುಮೋದನೆಯೊಡನೆ ಡಿಇಡಿ ಕಾಲೇಜನ್ನು ಪ್ರಾರಂಭಿಸಿದ್ದಾರೆ. ಇಲ್ಲಿ 100 ವಿದ್ಯಾರ್ಥಿಗಳು ಪ್ರತಿವರ್ಷ ಶಿಕ್ಷಕರಾಗಿ ರೂಪುಗೊಳ್ಳು ತ್ತಿದ್ದಾರೆ. ಒಬ್ಬ ಶಿಕ್ಷಕನನ್ನು ರೂಪಿಸಿದರೆ ಸಾವಿರಾರು ವಿದ್ಯಾರ್ಥಿಗಳನ್ನು ರೂಪಿಸಿದಂತೆ ಅಂತಹ 100 ಶಿಕ್ಷಕರನ್ನು ಒಂದು ವರ್ಷದಲ್ಲಿ ರೂಪಿಸುವಂತೆ ಬಿ.ಇಡಿ., ಕಾಲೇಜ್ ಅನ್ನು ಸ್ಥಾಪಿಸಬೇಕೆಂಬ ಗೌಡರು ಹಾಗೂ ಆಡಳಿತ ಮಂಡಳಿಯವರ ದೂರದೃಷ್ಟಿತ್ವದ ಫಲವಾಗಿ ಭಾರತೀನಗರದಲ್ಲಿ 2007ರಲ್ಲಿ ಬಿ.ಇಡಿ., ಕಾಲೇಜನ್ನು ಭಾರತೀ ವಿದ್ಯಾಸಂಸ್ಥೆಯ ಆವರಣದಲ್ಲಿ ಸ್ಥಾಪಿಸಿದರು. ಆ ಮೂಲಕ ಉತ್ತಮ ಶಿಕ್ಷಕರನ್ನು ರೂಪಿಸುತ್ತಿದ್ದಾರೆ.

ವೃತ್ತಿ ಶಿಕ್ಷಣ ವೈದ್ಯಕೀಯ ಹಾಗೂ ಅರೆ ವೈದ್ಯಕೀಯ ಶಿಕ್ಷಣ ಕ್ರಮಗಳನ್ನು ಗ್ರಾಮೀಣ ಪ್ರದೇಶಗಳಿಗೆ ಪರಿಚಯಿಸಿದ ಕೀರ್ತಿ ಭಾರತೀ ವಿದ್ಯಾಸಂಸ್ಥೆಯದು. ಫಾರ್ಮಾಸ್ಯುಟಿಕಲ್, ಅನಾಲಿಸಿಸ್, ಫಾರ್ಮಾನ್ಯೂಟಿಕ್ಸ್, ಫಾರ್ಮಾಸ್ಯುಟಿಕಲ್ ಬಯೋಟೆಕ್ನಾಲಜಿ ಕೋರ್ಸ್‌ಗಳನ್ನು ಒಳಗೊಂಡಂತಹ ಎಂ.ಫಾರ್ಮ ಕಾಲೇಜನ್ನು ಆರಂಭಿಸುವ ಮೂಲಕ ಗ್ರಾಮೀಣ ಪ್ರದೇಶಕ್ಕೆ ಇಂತಹ ಅಪರೂಪದ ಕೋರ್ಸ್‌ಗಳಲ್ಲಿ ಸ್ನಾತಕೋತ್ತರ ಪದವಿ ನೀಡುವ ಮಹತ್ವದ ಕೈಂಕರ್ಯ ಗೌಡರಿಂದ ನಡೆಯುತ್ತಿದೆ. ಈ ಕೋರ್ಸಿಗೆ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಸಂಯೋಜನೆ ನೀಡಿದೆ. ಇದೇ ಭಾರತೀ ಫಾರ್ಮಸಿ ಕಾಲೇಜಿನ ಆವರಣದಲ್ಲಿ 5 ವರ್ಷದ ಡಿ.ಫಾರ್ಮ್ ಕೋರ್ಸ್ ಅನ್ನು 2010ರಲ್ಲಿ ಪ್ರಾರಂಭಿಸಲಾಗಿದ್ದು, ಇ–ಗ್ರಂಥಾಲಯ, ಸುಸಜ್ಜಿತ ಪ್ರಯೋಗಾಲಯ, ಆಧುನಿಕ ಉಪಕರಣಗಳು, ಔಷಧೀಯ ಸಸ್ಯಗಳ ತೋಟ, ಉತ್ತಮ ಬೋಧಕ ವರ್ಗವನ್ನು ಒಳಗೊಂಡಂತೆ ಪ್ರತ್ಯೇಕ ಕಟ್ಟಡದಲ್ಲಿ ಈ ತರಗತಿಗಳು ನಡೆಯುತ್ತಿವೆ. ಈ ಕೋರ್ಸ್‌ಗಳಿಗೆ ನವದೆಹಲಿಯಿಂದ ಎಐಸಿಟಿಇಯಿಂದ ಮಾನ್ಯತೆ ದೊರೆತಿದೆ. ಹಾಸ್ಟೆಲ್ ಸೌಲಭ್ಯ ಕಲ್ಪಿಸಿರುವುದರಿಂದ ಸೋಮಾಲಿ, ನೇಪಾಳದ ವಿದ್ಯಾರ್ಥಿಗಳನ್ನೊಳಗೊಂಡಂತೆ ಭಾರತದ ಬಹುತೇಕ ರಾಜ್ಯಗಳ ವಿದ್ಯಾರ್ಥಿಗಳು ಇಲ್ಲಿ ಅಧ್ಯಯನ ನಿರತರಾಗಿದ್ದಾರೆ[7]. ವಿದ್ಯಾರ್ಥಿಗಳಿಗೆ ಪರಿಣಿತ ಶಿಕ್ಷಣ ತಜ್ಞರಿಂದ ಅತ್ಯಾಧುನಿಕ ಉಪಕರಣಗಳನ್ನು ಬಳಸಿ ಉತ್ತಮ ಗುಣಮಟ್ಟದ ಶಿಕ್ಷಣ ನೀಡುವ ಉದ್ದೇಶದಿಂದ ಹಾಗೂ ಬುದ್ಧಿವಂತ ಮಕ್ಕಳನ್ನು ಆರಿಸಿ ಅವರ ಕಲ್ಪನೆಯನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಪ್ರಾರಂಭಗೊಂಡಿರುವುದೇ ಸೆಮಿ ರೆಸಿಡೆನ್ಸಿಯಲ್ ಪಿ.ಯು. ಕಾಲೇಜ್. ಪ್ರವೇಶ ಪರೀಕ್ಷೆ ಮೂಲಕ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಂಡು ಆಯ್ಕೆಯಾದ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಊಟದ ವ್ಯವಸ್ಥೆ, ಸಂಜೆ ಲಘು ಉಪಹಾರ ಹಾಗೂ ಪುಸ್ತಕ, ಯೂನಿಫಾರಂ ಇತ್ಯಾದಿಗಳನ್ನು ಕಾಲೇಜಿನ ವತಿಯಿಂದಲೇ ವಿತರಿಸಲಾಗುತ್ತಿದೆ. ಈ ಶಿಕ್ಷಣಕ್ರಮವನ್ನು ಪ್ರಾರಂಭಿಸುವ ಕಲ್ಪನೆಯ ಹಿಂದೆ ನಮ್ಮ ತಂದೆಯ (ಜಿ.ಮಾದೇಗೌಡರ) ಮಾರ್ಗದರ್ಶನ ಮತ್ತು ಶ್ರಮವಿದೆ ಎನ್ನುತ್ತಾರೆ. ಮಧು ಜಿ.ಮಾದೇಗೌಡರು.[7ಎ]

ಉನ್ನತ ಶಿಕ್ಷಣ ನೀಡುವುದಕ್ಕೆ ಹೆಚ್ಚಿನ ಒತ್ತು ಕೊಟ್ಟ ಗೌಡರು, ಆಡಳಿತ ಮಂಡಳಿಯವರು ಹಾಗೂ ಭಾರತೀ ಶಿಕ್ಷಣ ಸಂಸ್ಥೆಯ ಬೋಧಕ ವರ್ಗದಲ್ಲಿ ಇಮ್ಮಡಿಗೊಂಡ ಮಹಾತ್ವಾಕಾಂಕ್ಷೆಯ ಪ್ರತಿಫಲವಾಗಿ ಅಧ್ಯಯನದ ಜೊತೆಗೆ ಸಂಶೋಧನೆಯನ್ನು ಪರಿಚಯಿಸಿ ವಿದ್ಯಾರ್ಥಿಗಳು ಹಾಗೂ ಬೋಧಕರಲ್ಲಿ ಸಂಶೋಧನಾ ಮನೋಭಾವವನ್ನು ಹೆಚ್ಚಿಸುವ ಸಲುವಾಗಿ ಸ್ನಾತಕೋತ್ತರ ಮತ್ತು ಸಂಶೋಧನೆಗೆ ಬಿಇಟಿ ಅಕಾಡೆಮಿ ಆಫ್ ಹೈಯರ್ ಎಜುಕೇಷನ್ ಕೇಂದ್ರವನ್ನು 2005ರಲ್ಲಿ ಪ್ರಾರಂಭಿಸಲಾಗಿದೆ. ಪ್ರಾರಂಭದಲ್ಲಿ ಎಂ.ಸಿ.ಎ. ಮತ್ತು ಎಂ.ಎಸ್ಸಿ ಬಯೋಟೆಕ್ನಾಲಜಿ ಕೋರ್ಸ್ ಪ್ರಾರಂಭಿಸಿ ಮೈಸೂರು

ವಿಶ್ವವಿದ್ಯಾನಿಲಯದಿಂದ ಸಂಯೋಜನೆ ಪಡೆಯಲಾಯಿತು. ಮುಂದುವರೆದು 2008ರ ಸಾಲಿನಿಂದ ರಸಾಯನಶಾಸ್ತ್ರ, ಸಾವಯುವ ರಸಾಯನಶಾಸ್ತ್ರ ವಿಷಯಗಳಲ್ಲಿ ಎಂ.ಎಸ್ಸಿ., ಕೋರ್ಸ್‌ಗಳನ್ನು ಪ್ರಾರಂಭಿಸಲಾಗಿದೆ. 2010ರಲ್ಲಿ ಎಂ.ಕಾಂ., ಕೋರ್ಸ್ ಅನ್ನು, 2011ರಲ್ಲಿ ಎಂ.ಎ., ಕನ್ನಡ, ಎಂ.ಎಸ್ಸಿ., ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರ ವಿಷಯಗಳನ್ನು ಪ್ರಾರಂಭಿಸಲಾಗಿದೆ. ಸಮ್ಮೇಳನ, ಕಾರ್ಯಾಗಾರ, ಸೆಮಿನಾರ್, ವಿಶೇಷ ಉಪನ್ಯಾಸ ಕಾರ್ಯಕ್ರಮಗಳನ್ನು ಭಾರತೀ ವಿದ್ಯಾಸಂಸ್ಥೆಯ ಶೈಕ್ಷಣಿಕ ಕಾರ್ಯ ಚಟುವಟಿಕೆಗಳನ್ನು ಮತ್ತಷ್ಟು ಪ್ರಜ್ವಲಿಸುವಂತೆ ಮಾಡಿವೆ. ದಕ್ಷ ಪ್ರಾಂಶುಪಾಲರು ಹಾಗೂ ನಿರ್ದೇಶಕರ ಮಾರ್ಗದರ್ಶನದಲ್ಲಿ ಉನ್ನತ ಶಿಕ್ಷಣದ ಪ್ರಸಾರಕಾರ್ಯ ಮತ್ತು ಸಂಶೋಧನಾ ಕಾರ್ಯ ಸದ್ದಿಲ್ಲದೆ ನಡೆಯುತ್ತಿದೆ.[8] ಭಾರತೀ ಶಿಕ್ಷಣ ಸಂಸ್ಥೆಯು ಪ್ರೌಢಶಾಲೆಯಿಂದ ಪ್ರಾರಂಭಗೊಂಡು ಅತ್ಯುನ್ನತ ಶಿಕ್ಷಣವಾದ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣವನ್ನು ಹೊಂದುವವರೆಗೂ ಅವಿರತವಾಗಿ ಶಿಕ್ಷಣ ಸಂಸ್ಥೆ ಜಾಗತಿಕ ಮಟ್ಟದಲ್ಲಿ ಹೆಸರುಗಳಿಸುತ್ತಿದೆ. ಗೌಡರು ಹಾಗೂ ಟ್ರಸ್ಟಿಗಳ ಪರಿಶ್ರಮದಿಂದಾಗಿ ಗ್ರಾಮೀಣ ಭಾಗಕ್ಕೊಂದು ತಾಂತ್ರಿಕ ಮಹಾವಿದ್ಯಾಲಯ ವೊಂದು ಪಾದಾರ್ಪಣೆ ಮಾಡಿದಂತಾಗಿದೆ. ನವದೆಹಲಿಯ ಎಐಸಿಟಿಇ, ಕರ್ನಾಟಕ ಸರ್ಕಾರ ಹಾಗೂ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ಮಾನ್ಯತೆ ಮತ್ತು ಸಂಯೋಜನೆಯೊಡನೆ 2011ನೇ ಶೈಕ್ಷಣಿಕ ವರ್ಷದಿಂದ ಜಿ.ಮಾದೇಗೌಡ ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ (ಜಿಎಂಐಟಿ) ಕಾಲೇಜನ್ನು ಪ್ರಾರಂಭಿಸಿ ಸುಸಜ್ಜಿತವಾದ ಕಟ್ಟಡವನ್ನು ಒದಗಿಸಲಾಗಿದೆ. ಸಿವಿಲ್, ಮೆಕ್ಯಾನಿಕಲ್, ಎಲೆಕ್ಟ್ರೀಕಲ್, ಎಲೆಕ್ಟ್ರಾನಿಕ್ಸ್ ಅಂಡ್ ಕಮ್ಯೂನಿಕೇಷನ್ ಹಾಗೂ ಕಂಪ್ಯೂಟರ್ ಸೈನ್ಸ್ 5 ಕೋರ್ಸ್‌ಗಳನ್ನು ತೆರೆಯಲಾಗಿದೆ[9]. ಪೂರ್ವ ಪ್ರಾಥಮಿಕ ಶಿಕ್ಷಣದಿಂದ ಸ್ನಾತಕೋತ್ತರ ಹಾಗೂ ತಾಂತ್ರಿಕ ಶಿಕ್ಷಣದವರೆಗೂ ಎಲ್ಲಾ ರೀತಿಯ ಶಿಕ್ಷಣಕ್ರಮಗಳನ್ನು ಒಂದೇ ಕ್ಯಾಂಪಸ್‌ನಲ್ಲಿ ನೀಡುವುದು ಸರಳವಾದ ಕೆಲಸವೇನಲ್ಲ. ಅದನ್ನು ಸಾಧಿಸಿ ಮುಂದಿನ ಪೀಳಿಗೆಯ ನಾಯಕರಿಗೆ ಜಿ.ಮಾದೇಗೌಡರು ಮಾದರಿಯಾಗಿದ್ದಾರೆ.

ಸಮಾಜದ ಕಟ್ಟಕಡೆಯ ವ್ಯಕ್ತಿಗೂ ಸೌಲಭ್ಯಗಳನ್ನು ತಲುಪಿಸುವುದು ಮತ್ತು ಸಬಲೀಕರಣಗೊಳಿಸುವುದೇ ಜೀವನದ ಪರಮಗುರಿ ಎಂದುಕೊಂಡಿರುವ ಗೌಡರು ತಮ್ಮ ಶೈಕ್ಷಣಿಕ ಸಂಸ್ಥೆಗಳ ಮೂಲಕವೇ ಸಮಾಜವನ್ನು ಪುರೋಭಿವೃದ್ಧಿಗೊಳಿಸುವ ಸತ್ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಶಿಕ್ಷಣದಿಂದ ಸಮಾಜದ ಯಾವುದೇ ವರ್ಗ ವಂಚನೆಗಳೊಳಗಾಗಬಾರದು ಎಂಬ ದೃಷ್ಟಿಕೋನದಿಂದ ದುಡಿಯುವ ವರ್ಗ, ಕಾರ್ಮಿಕರು, ಮಹಿಳೆಯರು, ರೈತಾಪಿ ವರ್ಗಕ್ಕೆ ಅನುಕೂಲವಾಗಲೆಂದು ಸಂಜೆ ಕಾಲೇಜನ್ನು ತೆರೆಯಬೇಕೆಂಬ ಮಹತ್ವಾಕಾಂಕ್ಷೆಗೆ ಜೀವ ನೀಡಿದ್ದರ ಪ್ರತಿಫಲ ಭಾರತೀ ಪದವಿಪೂರ್ವ ಸಂಜೆ ಕಾಲೇಜು 2014ರಲ್ಲಿ ಪ್ರಾರಂಭಗೊಂಡಿತು. ದುಡಿಮೆಯನ್ನು ಜೀವನವನ್ನಾಗಿಸಿ

ಕೊಂಡಿರುವವರು. ಗೃಹಿಣಿಯರು, ವರ್ತಕರು, ಚಾಲಕರು, ಕಾರ್ಮಿಕರು, ಉದ್ಯೋಗದಲ್ಲಿರುವವರು, ಬೆಳಗಿನ ವೇಳೆಯಲ್ಲಿ ಕಾಲೇಜಿಗೆ ಹೋಗಲು ಸಾಧ್ಯವಿಲ್ಲದವರೂ, ಈ ಸಂಜೆ ಕಾಲೇಜನ್ನು ಅವಕಾಶವನ್ನು ಪಡೆದುಕೊಂಡರು. ಬೆಳಗಿನ ವೇಳೆ ಶಿಕ್ಷಣ ವಂಚಿತರಿಗೆ ಸಂಜೆ ವೇಳೆ ಶಿಕ್ಷಣ ನೀಡುವ ಯೋಜನೆ ರೂಪಿಸಿ ಭಾರತೀನಗರದಲ್ಲಿ ಸಂಜೆ ಶಿಕ್ಷಣವನ್ನು ಪ್ರಾರಂಭಿಸಿದರು. ಇಡೀ ಜಿಲ್ಲೆಯಲ್ಲಿಯೇ ಹೋಬಳಿ ಮಟ್ಟದಲ್ಲಿ ಸಂಜೆ ಕಾಲೇಜನ್ನು ಸ್ಥಾಪಿಸಿದ ಕೀರ್ತಿಗೆ ಗೌಡರು ಭಾಜನರಾಗಿದ್ದಾರೆ[10]. ಆದರೆ ಪ್ರಥಮವಾಗಿ ಹೋಬಳಿ ಮಟ್ಟದಲ್ಲಿ ಸಂಜೆ ಕಾಲೇಜು ಶಿಕ್ಷಣವನ್ನು ತಂದ ಕೀರ್ತಿ ಭಾರತೀ ವಿದ್ಯಾಸಂಸ್ಥೆಗೂ ಹಾಗೂ ಜಿ.ಮಾದೇಗೌಡರಿಗೂ ಸಲ್ಲುತ್ತದೆ. ರಾಜಕೀಯ ಗುರುಗಳಾದ ಕೆ.ವಿ.ಶಂಕರಗೌಡ ಹಾದಿಯಲ್ಲಿ ಶಿಷ್ಯ ನಡೆದಿರುವುದು ಕಂಡುಬರುತ್ತದೆ. ಸ್ಪಧಾತ್ಮಕ ಪರೀಕ್ಷೆಗಳಲ್ಲಿ ಜಿಲ್ಲೆಯ ಯುವಜನಾಂಗಕ್ಕಾಗಿ ಭಾರತೀಯ ಆಡಳಿತ ಸೇವಾ ಅಕಾಡೆಮಿಯನ್ನು ಸ್ಥಾಪಿಸಿದ್ದಾರೆ. ಈ ಸಂಸ್ಥೆಯ ಎಲ್ಲಾ ವಿದ್ಯಾರ್ಥಿಗಳನ್ನು ಸ್ಪರ್ಧಾತ್ಮಕ ಪರೀಕ್ಷೆಗೆ ಅಣಿಗೊಳಿಸುವುದೇ ಅವರ ಕನಸು. ಅಂತಹ ಅವರ ಪ್ರಯತ್ನದ ಫಲವೇ ಭಾರತೀಯ ಆಡಳಿತ ಸೇವಾ ಅಕಾಡೆಮಿಯಲ್ಲಿ ಸ್ಪರ್ಧಾತ್ಮಕ ಪರೀಕ್ಷೆಗೆ ವಿದ್ಯಾರ್ಥಿಗಳು ಸಿದ್ದರಾಗುತ್ತಿದ್ದಾರೆ. ನರ್ಸರಿ ಹಂತದಿಂದಲೇ ಮಕ್ಕಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿವೆ ಎಂಬ ಮಾಹಿತಿ ನೀಡಿ ಮಾರ್ಗದರ್ಶನ ಮಾಡುತ್ತಾ ಅವರ ವಯಸ್ಸಿಗನುಗುಣವಾಗಿ ಕ್ವಿಜ್ ಸ್ಪರ್ಧೆ, ಚರ್ಚಾ ಸ್ಪರ್ಧೆ, ಸಾಮಾನ್ಯ ಜ್ಞಾನ, ಜನರಲ್ ನಾಲ್ಜೆಡ್, ಯೋಗ, ಸ್ಪೋಕನ್ ಇಂಗ್ಲೀಷ್ ಪ್ರಚಲಿತ ವಿದ್ಯಾಮಾನಗಳ ಬಗ್ಗೆ ಮಕ್ಕಳಿಗೆ ಬೋಧನೆಯ ಜೊತೆಗೆ ಆಟಪಾಠಗಳೊಡಂತೆ ನಿರಂತರವಾಗಿ ಕಲಿಸುತ್ತಾ ಅವರು 21ನೇ ವಯಸ್ಸಿಗೆ ತಲುಪುವ ಹೊತ್ತಿಗೆ ಪೂರ್ವಭಾವಿ ಐ.ಎ.ಎಸ್. ಪರೀಕ್ಷೆಗೆ ಮಾನಸಿಕವಾಗಿ ಅವರನ್ನು ಸಿದ್ದಗೊಳಿಸಲು ಪೋಷಕರಾದ ತಾವು ನಮ್ಮ ಜೊತೆ ಕೈಜೋಡಿಸಿದರೆ ನಮ್ಮ ಶ್ರಮ ಸಾರ್ಥಕವಾದೀತು ಎಂಬ ಅಭಿಪ್ರಾಯವನ್ನು ಗೌಡರು ವ್ಯಕ್ತಪಡಿಸಿದರು[11]. 1990ರಲ್ಲಿ ವೃತ್ತಿ ಶಿಕ್ಷಣದಲ್ಲಿ ರೇಷ್ಮೆ ಕೃಷಿ ಕೋರ್ಸ್‌ನ್ನು ಪ್ರಾರಂಭಿಸಲಾಯಿತು. 1992ರಲ್ಲಿ ತೋಟಗಾರಿಕೆ ವೃತ್ತಿ ಶಿಕ್ಷಣ ಕೋರ್ಸನ್ನು 2006-07ನೇ ಸಾಲಿನಲ್ಲಿ ಕಲಾ, ವಾಣಿಜ್ಯದ ಜೊತೆಗೆ ವಿಜ್ಞಾನ ವಿಷಯಗಳನ್ನು ಪ್ರಾರಂಭಿಸಲಾಯಿತು[12].

ಬೆಳ್ಳಿಹಬ್ಬದ ನಂತರ ಸಂಸ್ಥೆಯ ಕೆಲಸ ಕಾರ್ಯಗಳು ವಿಸ್ತಾರಗೊಂಡು ಹನುಮಂತನಗರದಲ್ಲಿ 1988 ರಿಂದ ಈ ಕೆಳಕಂಡ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಭಾರತೀ ರೆಸಿಡೆನ್ಸಿಯಲ್ ಸಂಯುಕ್ತ ಪಿಯು ಕಾಲೇಜು, ಭಾರತೀ ಹಿರಿಯ ಪ್ರಾಥಮಿಕ ಶಾಲೆ, ಪ್ರಕೃತಿ ಆರೋಗ್ಯ ಧಾಮ, ಶ್ರೀ ಆತ್ಮಲಿಂಗೇಶ್ವರ ದೇವಾಲಯ, ಅಣ್ಣೂರು ಸಿದ್ದೇಗೌಡ ಸ್ಮಾರಕ ಕ್ರೀಡಾಂಗಣ, ಪಾವನಗಂಗಾ, ಪ್ರಸಾದ ನಿಲಯ, ಕಾಲೇಜುಗಳು, ಯಾತ್ರಿ ನಿವಾಸ, ಶ್ರೀ ಆತ್ಮಲಿಂಗೇಶ್ವರ ಕ್ಯಾಂಟೀನ್, ಶ್ರೀ ಆತ್ಮಲಿಂಗೇಶ್ವರ ಆಶ್ರಮ, ಎಕೊ ಟೂರಿಸಂ ಪಾರ್ಕ್[13]. ನಮ್ಮ ಪ್ರಾಚೀನ ಗುರುಕುಲ ಪದ್ದತಿಯ ರೀತಿಯಲ್ಲಿ ವಿದ್ಯಾರ್ಥಿಯ

ದೈಹಿಕ ಮಾನಸಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಯನ್ನು ಸಾಧಿಸುವುದು ಈ ಶಾಲೆಯ ಮೂಲ ಉದ್ದೇಶ. ಇಲ್ಲಿ ಸೇರುವ ವಿದ್ಯಾರ್ಥಿಗಳಿಗೆ ನಾನಾ ರೀತಿಯ ಅನುಕೂಲತೆಗಳನ್ನು ಕಲ್ಪಿಸಲಾಗಿದೆ. ಭಾರತೀಯ ಸಂಸ್ಕೃತಿಯ ಉದಾತ್ತ ಗುರಿಗಳ ಮೂಲಕ ಉನ್ನತ ಮೌಲ್ಯಗಳನ್ನು ಮೈಗೂಡಿಸಿಕೊಂಡು, ಶೈಕ್ಷಣಿಕ ಉತ್ಕೃಷ್ಟತೆ ಸಾಧಿಸಿ ಪರಿಪೂರ್ಣ ವ್ಯಕ್ತಿತ್ವದ ನಿರ್ಮಾಣವೇ ಈ ಸಂಸ್ಥೆಯ ಗುರಿಯಾಗಿದೆ. ಸಂಸ್ಥೆಯ ಎಲ್ಲ ಕೆಲಸ ಕಾರ್ಯಗಳು, ವ್ಯವಹಾರಗಳು ಸುಲಲಿತವಾಗಿ ನಡೆಯಲು ಸಮರ್ಥ ಮಾರ್ಗದರ್ಶನ, ಉಸ್ತುವಾರಿ ಅಧ್ಯಕ್ಷರಾದ ಜಿ.ಮಾದೇಗೌಡರು ನೀಡುತ್ತಿದ್ದಾರೆ. ಅವರ ಈ ಕ್ರಮ ಸಹಸ್ರಾರು ಜನರ ಬಾಳಿಗೆ ಬೆಳಕಾಗಿದೆ. ಕಾಡು ನಾಡಾಗಿದೆ, ಹಳ್ಳಿ ದಿಲ್ಲಿಯಾಗಿದೆ. ಅಜ್ಞಾನ ಅಂಧಕಾರ ತೊಲಗಿದೆ. ಕುಗ್ರಾಮ ಕಾಳಮುದ್ದನದೊಡ್ಡಿಯು ಭಾರತೀನಗರವಾಗಿ ಎಲ್ಲಾ ಆಧುನಿಕ ಸೌಲಭ್ಯಗಳಿವೆ. ಇಲ್ಲಿ ಜನರಗೆ ಜಮೀನಿಗೆ, ನಿವೇಶನಕ್ಕೆ, ಬೆಂಗಳೂರು–ಮೈಸೂರು ನಗರಗಳ ಮೌಲ್ಯ ಬಂದಿವೆ. ಮನೆ ಮನೆಗಳಲ್ಲಿ ಡಾಕ್ಟರು, ಇಂಜಿನಿಯರುಗಳು, ಕನಿಷ್ಠ ಪದವೀಧರರಿದ್ದಾರೆ. ಅದರಲ್ಲೂ ಹೆಣ್ಣು ಮಕ್ಕಳು ಪದವೀಧರರಾಗಿದ್ದಾರೆ. ಎಲ್ಲಾ ಕೋರ್ಸುಗಳಲ್ಲಿ ಶೇಕಡ 60ಕ್ಕು ಹೆಚ್ಚು ಹೆಣ್ಣುಮಕ್ಕಳಿದ್ದಾರೆ. ಸದ್ದಿಲ್ಲದ ಮೌನಕ್ರಾಂತಿ, ಅಭಿವೃದ್ಧಿ ಪ್ರತಿಹಳ್ಳಿಯಲ್ಲಾಗಿ ಗಾಂಧೀಜಿ ಕನಸು ಸ್ವಲ್ಪ ಮಟ್ಟಗಾದರು ನನಸಾಗಿದೆ.

## 5.2 ಜಿ.ಮಾದೇಗೌಡರ ಆರ್ಥಿಕ ಹಾಗೂ ಸಾಮಾಜಿಕ ಕಾರ್ಯಗಳು

ಬಹುಮುಖ ಪ್ರತಿಭೆಯುಳ್ಳ ಜಿ.ಮಾದೇಗೌಡರು ಒಂದು ಕ್ಷೇತ್ರಕ್ಕೆ ಸೀಮಿತಗೊಳ್ಳದೆ ಎಲ್ಲಾ ಕ್ಷೇತ್ರಗಳಲ್ಲೂ ಸಮಾಜವನ್ನು ಶ್ರೀಮಂತಗೊಳಿಸಿದ್ದಾರೆ. ವ್ಯಕ್ತಿಗತ ನೆಲೆಯಿಂದ ಪ್ರಾರಂಭಗೊಂಡು ಜಾಗತಿಕ ಮಟ್ಟದವರೆಗೂ ಸದೃಢತೆಯ ಅಂಶಗಳು ಆರ್ಥಿಕತೆ ಅಂಶಗಳಿಂದಲೇ ಪ್ರತಿಬಿಂಬಿತಗೊಳ್ಳುತ್ತವೆ. ಗಣ್ಯರ ವಿವೇಕವಾಣಿಯಂತೆ ಹಸಿದ ಹೊಟ್ಟೆಗೆ ಅನ್ನ ನೀಡಬೇಕೇ ಹೊರತು ಉಪದೇಶವನ್ನಲ್ಲ ಎಂಬಂತೆ ಮಂಡ್ಯ ಜಿಲ್ಲೆಯ ಜನರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸುವುದೇ ಗೌಡರ ಬಹುಮುಖ್ಯ ಉದ್ದೇಶವಾಗಿತ್ತು. ಕಾಳಮುದ್ದನ ಡೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿಸುವಲ್ಲಿ ಯಶಸ್ವಿಯಾದರು[14]. ಇದರ ಮುಖ್ಯಗುರಿ ಬಡಜನತೆಯ, ಅನಕ್ಷರಸ್ಥರ, ರೈತರ, ಕಾರ್ಮಿಕರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸುವುದೇ ಇವರ ಪರಮೋಚ್ಚಗುರಿ ಯಾಗಿತ್ತು. ಆದ್ದರಿಂದ ಇವರು ಆರ್ಥಿಕ ಸಬಲೀಕರಣಕ್ಕಾಗಿ ಹಗಲು ರಾತ್ರಿ ಎನ್ನದೇ ಶ್ರಮಿಸಿದ್ದರು. ಸಮಾಜದ ಕೆಳಸ್ತರದ ಅಭಿವೃದ್ಧಿಯಿಂದ ದೇಶದ ಅಭಿವೃದ್ಧಿ ಎಂಬುದನ್ನು ಸಾಬೀತು ಮಾಡಿದ್ದಾರೆ ಎಂಬುದನ್ನು ಅರಿಯಲಾಗಿದೆ.

### 5.2.1 ಕಾಳಮುದ್ದನದೊಡ್ಡಿಯಲ್ಲಿ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

ಮಂಡ್ಯ ಜಿಲ್ಲೆಯ ರೈತರ ಆರ್ಥಿಕ ಸಬಲೀಕರಣಕ್ಕೆ ಜಿ.ಮಾದೇಗೌಡರು ನೀಡಿರುವ ಕೊಡುಗೆಗಳ ಹೆಗ್ಗುರುತೆಂದರೆ ಭಾರತೀನಗರದಲ್ಲಿ 1974ರಲ್ಲಿ ಸ್ಥಾಪಿಸಿರುವ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ[15]. ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಗೌಡರು ವಹಿಸಿದ ಆಸಕ್ತಿ, ತೊಡಗಿಸಿದ ಪರಿಶ್ರಮ, ಸಹಕಾರಿ ತತ್ವದ ಆಧಾರದ ಮೇಲೆ ಹಣ ಸಂಗ್ರಹಣೆ, ರೈತರ ಸಂಘಟನೆ, ರಾಜ್ಯ ಮತ್ತು ಕೇಂದ್ರ ಸರ್ಕಾರದ ಜೊತೆ ಆಡಳಿತಾತ್ಮಕ ಅನುಮತಿಗಾಗಿ ನಡೆಸಿದ ನಿರಂತರ ಪತ್ರ ವ್ಯವಹಾರ ಮತ್ತು ಹೋರಾಟಗಳ ಬಗ್ಗೆ ಪ್ರಾಥಮಿಕ ಹಾಗೂ ಅನುಷಂಗಿಕ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ. 1960ರ ದಶಕದಲ್ಲಿ ಮಂಡ್ಯ ಜಿಲ್ಲೆಯ ಪ್ರಮುಖ ಬೆಳೆಯಾಗಿದ್ದ ಕಬ್ಬಿಗೆ ಸರಿಯಾದ ಬೆಲೆ ಇಲ್ಲದೇ ಇರುವುದು ಹಾಗೂ ಜಿಲ್ಲೆಯಲ್ಲಿದ್ದ ಏಕೈಕ ಮೈಸೂರು ಸಕ್ಕರೆ ಕಾರ್ಖಾನೆಗೆ ಕಬ್ಬನ್ನು ಸಾಗಿಸುವಲ್ಲಿ ನೂರಾರು ಸಮಸ್ಯೆಗಳಿದ್ದವು. ಇದರಿಂದಾಗಿ ರೈತರು ಎದುರಿಸುತ್ತಿದ್ದ ಆರ್ಥಿಕ ಸಂಕಷ್ಟಗಳಿಗೆ ಪರಿಹಾರವಾಗಿ ಭಾರತೀನಗರದಲ್ಲಿ ಸಕ್ಕರೆ ಕಾರ್ಖಾನೆಯನ್ನು ತೆರೆದು ಜಿಲ್ಲೆಯ ಬಹುಭಾಗದ ಜನರಿಗೆ ಅನುಕೂಲ ಮಾಡಿಕೊಟ್ಟಿರುವುದು ಉಲ್ಲೇಖನೀಯವಾದುದು ಮತ್ತು ಶ್ಲಾಘನೀಯವಾದುದು. ಸದಾ ನೀರಿನ ಕೊರತೆಯೊಂದಿಗೆ ಹಗಲು ರಾತ್ರಿ ಕಷ್ಟಪಟ್ಟು ಬೆಳೆದ ಕಬ್ಬನ್ನು ಕಟಾವು ಮಾಡಿ ಸಂಗ್ರಹಿಸಿ ಸಾಗಿಸಲು ದೂರದಲ್ಲಿರುವ ಮಂಡ್ಯದ ಸಕ್ಕರೆ ಕಾರ್ಖಾನೆಗೆ ಹೋಗಬೇಕಾಗಿರುವುದರಿಂದ ಮಳವಳ್ಳಿ ಹಾಗೂ ಮದ್ದೂರು ತಾಲ್ಲೂಕಿನ ರೈತರು ಕಬ್ಬು ಬೆಳೆಯನ್ನು ಬೆಳೆಯಲು ನಿರಾಕರಿಸುತ್ತಿದ್ದರು. ಧೈರ್ಯ ಮಾಡಿ ಬೆಳೆದವರು ಸಾಗಿಸುವ ವಿಳಂಬತೆಯಿಂದಾಗಿ ನಷ್ಟ ಅನುಭವಿಸುತ್ತಿದ್ದರು. ಸಾರಿಗೆ ಸೌಲಭ್ಯ ಸುಗಮವಾಗಿರಲಿಲ್ಲ. ಇವೆಲ್ಲಕ್ಕೂ ಪರಿಹಾರ ಎಂಬಂತೆಯೆ ದೂರದೃಷ್ಟಿತ್ವದ ಫಲವಾಗಿ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಗೊಂಡು ರೈತರ ಆಶಾಕಿರಣವಾಗಿ ಇಂದು ಕಾರ್ಯನಿರ್ವಹಿಸುತ್ತಿದೆ. ಇದರ ಹಿಂದೆ ಇವರ ಅಚಲ ಪರಿಶ್ರಮ ಇರುವುದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದಿದೆ. ಸಕ್ಕರೆ ಕಾರ್ಖಾನೆ ಸ್ಥಾಪನೆಯಿಂದಾಗಿ ಕಾರ್ಖಾನೆ ಸಂಪರ್ಕಿಸುವ ರಸ್ತೆಗಳು, ತಂಗುದಾಣಗಳು, ಅಂಗಡಿ ಮುಂಗಟ್ಟುಗಳು, ಮಾರುಕಟ್ಟೆ, ಸಂತೆ ವಹಿವಾಟು ವೃದ್ಧಿಸಿವೆ. ಆರಂಭದ ವರ್ಷಗಳಲ್ಲಿ ಪ್ರತಿ ಟನ್ ಕಬ್ಬಿಗೆ ಒಂದು ರೂಪಾಯಿನಂತೆ ಭಾರತೀ ವಿದ್ಯಾಸಂಸ್ಥೆಗೆ ಸಂದಾಯ ವಾಗುತ್ತಿತ್ತು. ಇದನ್ನು ರೈತರು ಮತ್ತು ಕೃಷಿ ಕಾರ್ಮಿಕರ ಮಕ್ಕಳಿಗೆ ಶಿಕ್ಷಣ ನೀಡಲು ಸದ್ವಿನಿಯೋಗಗೊಳಿಸಲಾಗುತ್ತಿತ್ತು. ಕಾರ್ಖಾನೆ ಸ್ಥಾಪನೆ ಯಿಂದಾಗಿ ಕಾಳಮುದ್ದನದೊಡ್ಡಿ ಎಂಬ ಕುಗ್ರಾಮ ಇಂದು ಆರ್ಥಿಕ ಕೇಂದ್ರವಾಗಿ ಜಿಲ್ಲೆಯ ಜನಮನವನ್ನು ಆಕರ್ಷಿಸುತ್ತಾ ತಾಲ್ಲೂಕು ಕೇಂದ್ರವಾಗುವ ಅರ್ಹತೆಯನ್ನು ಹೊಂದಿದೆ.

**ಕಾರ್ಖಾನೆ ಸ್ಥಾಪನೆ ಮಾಡಲು ಜಿ.ಮಾದೇಗೌಡರ ಹೋರಾಟ ಮತ್ತು ಆಡಳಿತಾತ್ಮಕ ಅಂಶಗಳು.**

ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಬೆಂಬಲವೆಂಬಂತೆ 1959-60ರಲ್ಲಿಯೇ ಮೈಸೂರು ಸರ್ಕಾರ ನೇಮಿಸಿದ್ದ ಕಬ್ಬು ಬೆಳೆಯ ಅಭಿವೃದ್ಧಿ ಮತ್ತು ಸಕ್ಕರೆ ಉತ್ಪಾದನಾ ಯೋಜನೆಯ ತಜ್ಞರ ಸಮಿತಿಯು ಮಂಡ್ಯ ಜಿಲ್ಲೆಯಲ್ಲಿ ಕಬ್ಬು ಬೆಳೆಯುವ ಪ್ರದೇಶಗಳನ್ನು ಸಮೀಕ್ಷೆ ಮಾಡಿ. ಈ ಪ್ರದೇಶದಲ್ಲಿ ಹೆಚ್ಚು ಕಬ್ಬು ಬೆಳೆ ಬೆಳೆಯುತ್ತಿರುವುದರಿಂದ, ಮೈಸೂರು ಸಕ್ಕರೆ ಕಾರ್ಖಾನೆ ಮಂಡ್ಯ ಇದರ ಜೊತೆಗೆ ಜಿಲ್ಲೆಯಲ್ಲಿ ಮತ್ತೊಂದು ಸಕ್ಕರೆ ಕಾರ್ಖಾನೆಯನ್ನು ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಪ್ರಾರಂಭಿಸಬಹುದೆಂಬ ವರದಿಯನ್ನು ರಾಜ್ಯ ಸರ್ಕಾರಕ್ಕೆ ನೀಡಿತ್ತು. ಈ ವರದಿಯನ್ನು ಗ್ರಹಿಸಿದ ಜಿ.ಮಾದೇಗೌಡರು ಮದ್ದೂರು ತಾಲ್ಲೂಕಿನ ಕಾಳಮುದ್ದನ ದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿಸಬೇಕೆಂಬ ಆಸೆಯನ್ನು ಬಲವಾಗಿಸಿಕೊಂಡರು. ಅದೇ ಸಮಯಕ್ಕೆ 1962ರಲ್ಲಿ ಶಾಸಕರಾಗಿ ಆಯ್ಕೆಗೊಂಡ ನಂತರ ಅವರ ರಾಜಕೀಯ ನಾಯಕತ್ವ ರೈತ ವರ್ಗದ ಹಿತಕ್ಕಾಗಿ ದುಡಿಯಲು ಸಾಧನವಾಯಿತು. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದ ಜೊತೆ ಸಂಪರ್ಕ ಬೆಳೆಸಿ ಕಾರ್ಖಾನೆ ಪ್ರಾರಂಭಿಸಲು ರಾಜ್ಯ ಸರ್ಕಾರದಿಂದ ಅನುಮೋದನೆ ಹಾಗೂ ಕೇಂದ್ರ ಸರ್ಕಾರದಿಂದ ಲೈಸೆನ್ಸ್ ಪಡೆಯಲು ಆಡಳಿತಾತ್ಮಕ ಹೋರಾಟಗಳನ್ನು ರೂಪಸಿದರು. ಸಕ್ಕರೆ ಕಾರ್ಖಾನೆಯ ಸ್ಥಾಪನೆಯ ಹಾದಿ ಮುಳ್ಳಿನ ಹಾದಿಯಾಗಿತ್ತು ಎಂಬುವುದನ್ನು ಸ್ವತಃ ಗುರುದೇವರಹಳ್ಳಿ ಮಾದೇಗೌಡರೆ ಸ್ಮರಿಸುತ್ತಾರೆ.[15ಎ] 16.07.2017 ಎಲ್ಲಾ ರೀತಿಯ ಅಡೆತಡೆಗಳನ್ನು ನಿವಾರಿಸಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ನಿರ್ಮಾಣಕ್ಕೆ ಪೂರಕವಾದ ಯೋಜನಾ ವರದಿಯನ್ನು ಸಿದ್ಧಪಡಿಸಿ, ಡಿ. ಮತ್ತು ಆರ್ 1951 ಕೈಗಾರಿಕಾ ಲೈಸೆನ್ಸ್ ಕಾಯಿದೆಗೆ ಅನುಗುಣವಾಗಿ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಲೈಸೆನ್ಸ್ ಕೋರಿ ದಿನಾಂಕ : 1ನೇ ಮೇ 1964ರಂದು ಮೈಸೂರು ರಾಜ್ಯ ಸರ್ಕಾರದ ಮೂಲಕ ಭಾರತ ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸಿದರು[16]. ಈ ಅರ್ಜಿಯಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಬೇಕಾದಷ್ಟು ಭೂಮಿ, ನೀರಿನ ವ್ಯವಸ್ಥೆ, ವಾರ್ಷಿಕವಾಗಿ ಕಬ್ಬು ಬೆಳೆಯ ಒಟ್ಟು ಅಂದಾಜು, ಇವೇ ಮೊದಲಾದ ಕಾರ್ಖಾನೆಯ ಸ್ಥಾಪನೆಗೆ ಇಲ್ಲಿ ದೊರೆಯುವ ಪೂರಕ ಸಂಪನ್ಮೂಲಗಳ ವಿವರಗಳನ್ನು ಅಂಕಿ ಅಂಶಗಳ ಸಮೇತ ವಿಸ್ತೃತವಾಗಿ ವಿವರಿಸಿದ್ದರು. ಜರೂರಾಗಿ ಕಾರ್ಖಾನೆ ಸ್ಥಾಪಿಸಲು ಲೈಸೆನ್ಸ್ ನೀಡುವಂತೆ ರೈತ ವರ್ಗದ ಪರವಾಗಿ ಕೋರಿಕೊಂಡರು. ಭಾರತೀ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸಂಬಂಧಿಸಿದಂತೆ ಅಗತ್ಯವಾದ ಹಣ ಮತ್ತು ರೈತ ವರ್ಗದ ಬೆಂಬಲ ಪಡೆದರು. ಮಂಡ್ಯ ಜಿಲ್ಲೆಯ ಜನರ ಸಬಲೀಕರಣಕ್ಕೆ ಅವಿರತವಾಗಿ ದುಡಿಯುತ್ತಿರುವ ರೈತ ನಾಯಕರನ್ನು ಒಳಗೊಂಡಂತೆ ದಿನಾಂಕ : 17ನೇ ಸೆಪ್ಟಂಬರ್ 1964 ರಂದು ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಎಂಬ ಹೆಸರಿನಲ್ಲಿ ಸಹಕಾರ

ಸಂಘವನ್ನು ಸ್ಥಾಪಿಸಿದರು. ಈ ಕೆಳಕಂಡ ಪ್ರಮುಖರನ್ನು ಸಹಕಾರ ಸಂಸ್ಥೆಯ ಪ್ರವರ್ತಕರುಗಳಾಗಿ ಸಹಕಾರ ಸಂಘಗಳ ನಿಬಂಧಕರಲ್ಲಿ ನೊಂದಾಯಿಸಿಕೊಂಡರು[17].

ಕಾಳಮುದ್ದನದೊಡ್ಡಿಯ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ (ನಿ.) ಮುಖ್ಯಪ್ರವರ್ತಕರು ಮತ್ತು ಸದಸ್ಯರುಗಳಾದ ಜಿ.ಮಾದೇಗೌಡ, ಕೆ.ವಿ.ಶಂಕರಗೌಡ, ಕೆ.ಶಿವನಂಜಪ್ಪ, ಎಸ್.ಎಂ.ಕೃಷ್ಣ, ಮಂಚೇಗೌಡ, ಅಣ್ಣೂರು ಸಿದ್ದೇಗೌಡ, ರಾಜು, ಹೆಚ್.ಕೆ.ವೀರೇಗೌಡ, ಮಲ್ಲಿಕಾರ್ಜುನಸ್ವಾಮಿ, ಸಿ.ಪಿ.ಸುಬ್ಬೇಗೌಡ, ಎಂ.ಎಸ್.ಮರಿಯಪ್ಪ, ಬಿ.ಜೆ.ಲಿಂಗೇಗೌಡ, ಕೆ.ಎಲ್.ಶಿವಲಿಂಗೇಗೌಡ, ಹನುಮೇಗೌಡ ಮೇಲಿನ ಪ್ರವರ್ತಕರೆಲ್ಲರೂ ಕಾಳಮುದ್ದನದೊಡ್ಡಿಯಲ್ಲಿ ಸಭೆ ಸೇರಿ ಈ ಯೋಜನೆಯ ಮುಖ್ಯ ರೂವಾರಿಯಾದ ಜಿ.ಮಾದೇಗೌಡರನ್ನು ಮುಖ್ಯ ಪ್ರವರ್ತಕರನ್ನಾಗಿ ಆಯ್ಕೆ ಮಾಡಿ, ಮುಂದಿನ ಎಲ್ಲಾ ಕಾರ್ಯಗಳನ್ನ ಇವರ ನಾಯಕತ್ವದಲ್ಲೇ ನಡೆಯುವಂತೆ ತೀರ್ಮಾನ ತೆಗೆದುಕೊಂಡು  ಬೆಂಬಲ ಸೂಚಿಸಿದರು. ಮುಖ್ಯ ಪ್ರವರ್ತಕರಾಗಿ ನೇಮಕಗೊಂಡ ಗೌಡರು ದಿನಾಂಕ 01ನೇ ಮೇ 1964ರಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಲೈಸೆನ್ಸ್‌ಗಾಗಿ ಸಲ್ಲಿಸಿದ್ದ ಅರ್ಜಿಯ ಬಗೆಗೆ ಗಮನಹರಿಸಿ, ರಾಜ್ಯ ಸರ್ಕಾರಕ್ಕೆ ಕಾಳಮುದ್ದನದೊಡ್ಡಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯ ಅಗತ್ಯತೆಯನ್ನು ಸಮರ್ಥವಾಗಿ ಮನವರಿಕೆ ಮಾಡಿಕೊಟ್ಟರು. ಆದ್ದರಿಂದಲೇ ಈ ಅರ್ಜಿಯ ಬಗ್ಗೆ ರಾಜ್ಯ ಸರ್ಕಾರದ ಅಭಿಪ್ರಾಯ ಮತ್ತು ಅನುಮೋದನೆಯನ್ನು ಕೇಳಿ ವಿಚಾರಣಾ ಪತ್ರವನ್ನು ಬರೆದಿದ್ದ ಕೇಂದ್ರ ಸರ್ಕಾರಕ್ಕೆ ದಿನಾಂಕ : 25ನೇ ಸೆಪ್ಟಂಬರ್ 1964ರಂದು ಮೈಸೂರು ರಾಜ್ಯ ಸರ್ಕಾರದ ವತಿಯಿಂದ ಅಂದಿನ ಮುಖ್ಯಮಂತ್ರಿಗಳಾದ ಎಸ್.ನಿಜಲಿಂಗಪ್ಪನವರು ಉತ್ತರ ಬರೆದು, ಕಾಳಮುದ್ದನದೊಡ್ಡಿಯ ಭಾರತೀ ಸಹಕಾರ ಸ್ಥಾಪನೆಗೆ ಅಗತ್ಯವಾದ ಕೈಗಾರಿಕಾ ಲೈಸೆನ್ಸ್ ಅನ್ನು ಶೀಘ್ರವಾಗಿ ನೀಡಬೇಕೆಂದು ಕೋರಿಕೊಂಡರು. ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಜೊತೆಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಅಗತ್ಯವಾದ ಲೈಸೆನ್ಸ್ ಪಡೆಯಲು ಪತ್ರ ವ್ಯವಹಾರವನ್ನು ನಡೆಸುತ್ತಿದ್ದಂತೆಯೇ, ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಬಂಡವಾಳವನ್ನು ರೈತರಿಂದಲೇ ಸಂಗ್ರಹಿಸುವ ಸಲುವಾಗಿ ಕಾಳಮುದ್ದನದೊಡ್ಡಿಯ ಸುತ್ತಮುತ್ತಲಿನ ನೂರಾರು ಗ್ರಾಮಗಳ ರೈತಾಪಿ ಜನಗಳಿಂದ ಷೇರು ಸಂಗ್ರಹಣೆ ಮಾಡಿದರು. ಇದಕ್ಕಾಗಿ ಸ್ವತಃ ಗೌಡರು ಇನ್ನಿತರ ಪ್ರವರ್ತಕರೊಂದಿಗೆ ಸಂಚರಿಸಿ, ರೈತ ಸಮುದಾಯವನ್ನು ಸಂಪರ್ಕಿಸಿದರು ಮತ್ತು ಅರಿವು ಮೂಡಿಸಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯಿಂದ ರೈತರಿಗೆ ಉಂಟಾಗುವ ಹಲವು ಪ್ರಯೋಜನಗಳನ್ನು ಮನಮುಟ್ಟುವಂತೆ ವಿವರಿಸಿ ಹಣ ಸಂಗ್ರಹಿಸಲು ಮುಂದಾದರು. ಉದ್ದೇಶಿತ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾಗಿದ್ದ ಬಂಡವಾಳ ಎರಡು ಕೋಟಿ ರೂಪಾಯಿಗಳು. ಆದರೆ ಈಗ ರೈತರಿಂದ ಸಂಗ್ರಹಿತವಾದ ಷೇರು ಹಣ ಕೇವಲ ಒಂದೂವರೆ ಲಕ್ಷ ರೂಪಾಯಿಗಳು. ಇದರಿಂದ ಜಿ.ಮಾದೇಗೌಡರು

ಹತಾಶರಾಗಲಿಲ್ಲ. ಸಂಗ್ರಹಿತವಾಗಿದ್ದ ಈ ಹಣವನ್ನು ಮಂಡ್ಯ ನಗರದ ಮಂಡ್ಯ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಹೆಸರಿನಲ್ಲಿ ಫಿಕ್ಸೆಡ್ ಡಿಪಾಸಿಟ್‌ನಲ್ಲಿ ಇಟ್ಟರು. ಅಗತ್ಯವಾದ ಬೃಹತ್ ಬಂಡವಾಳ ಸಂಗ್ರಹಣೆಗೆ ಈ ಕೆಳಕಡಂತೆ ಯೋಜನೆಯನ್ನು ರೂಪಿಸಿದರು.

ಮೈಸೂರು ರಾಜ್ಯದ ಅಪೆಕ್ಸ್ ಬ್ಯಾಂಕ್, ಮಂಡ್ಯ ಜಿಲ್ಲೆಯ ಡಿ.ಸಿ.ಸಿ ಬ್ಯಾಂಕ್, ಮಂಡ್ಯ ಜಿಲ್ಲೆಯಲ್ಲಿ ನೆಲೆಗೊಂಡಿದ್ದ ಎರಡು ಸಕ್ಕರೆ ಕಾರ್ಖಾನೆಗಳಾದ ಮಂಡ್ಯ ನಗರದಲ್ಲಿದ್ದ ಮೈಷುಗರ್ ಕಂಪನಿ ಮತ್ತು ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಗಳ ವತಿಯಿಂದ ಸಾಲಸೌಲಭ್ಯದ ರೂಪದಲ್ಲಿ ಒಟ್ಟು ಐವತ್ತು ಲಕ್ಷ ರೂ.ಗಳ ಆರ್ಥಿಕ ನೆರವನ್ನು ಪಡೆಯುವುದು. ಮೈಸೂರು ರಾಜ್ಯ ಸರ್ಕಾರದ ವತಿಯಿಂದ ಗ್ರಾಮಾಂತರ ಪ್ರದೇಶವಾದ ಕಾಳಮುದ್ದನದೊಡ್ಡಿಯಲ್ಲಿ ಸ್ಥಾಪನೆಯಾಗಲಿರುವ ಸಹಕಾರ ಸಕ್ಕರೆ ಕಾರ್ಖಾನೆಗೆ ಐವತ್ತು ಲಕ್ಷ ರೂ.ಗಳ ಸಹಾಯಧನವನ್ನು ಪಡೆಯುವುದು. ಕೇಂದ್ರ ಸರ್ಕಾರದ ಅಧೀನದಲ್ಲಿರುವ ಹಣಕಾಸು ನಿಗಮಗಳಾದ ಭಾರತೀಯ ಜೀವವಿಮಾ ನಿಗಮ. ಭಾರತೀಯ ಕೈಗಾರಿಕಾ ಹಣಕಾಸು ನಿಗಮ. ಭಾರತ ಸರ್ಕಾರದ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್[18]. ಈ ಹಣಕಾಸು ಸಂಸ್ಥೆಗಳಿಂದ ಭಾರತೀ ಸಹಕಾರ ಕಾರ್ಖಾನೆಯ ಸ್ಥಾಪನೆಗೆ ಒಂದು ಕೋಟಿ ರೂ.ಗಳ ಸಾಲಸೌಲಭ್ಯವನ್ನು ಪಡೆಯುವುದು ಎಂದು ನಿರ್ಧರಿಸಿ ಕಾರ್ಯ ಪ್ರವೃತ್ತರಾದರು. 1965ರ ಸೆಪ್ಟಂಬರ್‌ನಲ್ಲಿ ಕೇಂದ್ರ ಸರ್ಕಾರದಲ್ಲಿ ಹಣಕಾಸು ಸಚಿವರಾಗಿದ್ದ ಅಂದಿನ ಟಿ.ಟಿ.ಕೃಷ್ಣಮಾಚಾರಿ ಮತ್ತು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಅಶೋಕ ಮೆಹ್ತಾ ಅವರು ಮತ್ತು ಕೃಷಿ ಸಂಬಂಧಿತ ಆರ್ಥಿಕ ಚಟುವಟಿಕೆಗಳನ್ನು ಬಗ್ಗೆ ಮನದಟ್ಟು ಮಾಡಿಕೊಡಲಾಯಿತು. ಇಲ್ಲಿನ ಆಧುನಿಕ ವ್ಯವಸಾಯ ಪದ್ದತಿ, ಸಹಕಾರ ಸಂಘಗಳ ವ್ಯವಸ್ಥಿತವಾದ ಕ್ರಿಯಾಶೀಲತೆ ಮತ್ತು ಕೈಗಾರಿಕಾ ಅಭಿವೃದ್ಧಿಯನ್ನು ಕಂಡು ಅವರು ಬಹಳವಾಗಿ ಮೆಚ್ಚಿಕೊಂಡರು. ಮುಂದಿನ ಸಂಸತ್ ಅಧಿವೇಶನದಲ್ಲಿ ಹಣಕಾಸು ಸಚಿವ ಟಿ.ಟಿ.ಕೃಷ್ಣಮಾಚಾರಿ ಅವರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು[19]. ಕೇಂದ್ರ ಸರ್ಕಾರದ ಪ್ರಭಾವಿ ವರಿಷ್ಠರು ನೀಡಿದ ಈ ಹೇಳಿಕೆಯನ್ನು ಗೌಡರು ಪ್ರಮುಖವಾಗಿ ಪ್ರತಿಪಾದಿಸುತ್ತಾ, ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕಾಳಮುದ್ದನದೊಡ್ಡಿಯಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಯ ಅಗತ್ಯದ ಬಗ್ಗೆ ಕೇಂದ್ರ ಸರ್ಕಾರದ ಮೇಲೆ ಮತ್ತಷ್ಟು ಒತ್ತಡ ತಂದು, ಆದಷ್ಟು ಬೇಗ ಕೈಗಾರಿಕಾ ಲೈಸೆನ್ಸ್ ಪಡೆಯಲು ಪ್ರಯತ್ನಿಸಿದರು. ಇವರ ನಿರಂತರ ಪ್ರಯತ್ನಕ್ಕೆ ಮೊದಲ ಉತ್ತರಕ್ಕಾಗಿ ಕೇಂದ್ರ ಸರ್ಕಾರದಲ್ಲಿ ಅಂದಿನ ಆಹಾರ ಕೃಷಿ ಸಚಿವರಾಗಿದ್ದ ಸಿ.ಸುಬ್ರಹ್ಮಣ್ಯಂ ಅವರಿಂದ ದಿನಾಂಕ 08ನೇ ನವೆಂಬರ್ 1965ರಂದು ಜಿ.ಮಾದೇಗೌಡರಿಗೆ ಮೊದಲ ಪತ್ರ ತಲುಪುತ್ತದೆ. ಅನಂತರ ಸಕ್ಕರೆ ಕಾರ್ಖಾನೆಗೆ ಸಂಬಂಧಿಸಿದಂತೆ ಇನ್ನೂ ಹಲವು

ಪತ್ರ ವ್ಯವಹಾರಗಳನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರದ ಜೊತೆ ನಡೆಸಲಾಗಿದ್ದು, ಆ ಎಲ್ಲಾ ಪ್ರಮುಖ ಪತ್ರಗಳನ್ನು ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

**ಪತ್ರ ಸಂಖ್ಯೆ 1**



No F. 25(450)/64 ST/MFA/...

MINISTER FOR FOOD & AGRICULTURE.
GOVERNMENT OF INDIA.

New Delhi,
8th November '65
10

Dear Shri Made Gowda,

Please refer to your letter dated October 29, 1965 regarding the establishment of a co-operative sugar factory at K.M. Doddi, Maddur taluk in district Mandya of Mysore State. I am getting the application processed through the Screening Committee appointed to scrutinise applications for the establishment of new sugar factories in the light of the data received from the State Government. The case of Doddi will be considered along with other pending cases.

Yours sincerely,
C Subramaniam
(C.Subramaniam)

Shri G. Made Gowda,
Chief Promoter,
Bharathi Sahakara Sakkare Karkhane Ltd.,
K.M. Doddi, Maddur Taluk,
Mysore State.

ಮೂಲ : ದಿನಾಂಕ 13.09.2016 ರಂದು ಭಾರತೀ ಪದವಿ ಕಾಲೇಜಿನ ಕಛೇರಿಯಿಂದ ಪಡೆದ ಮಾಹಿತಿ.

ಪತ್ರ ಸಂಖ್ಯೆ 1ರ ಕೇಂದ್ರ ಸರ್ಕಾರದ ಪತ್ರದಲ್ಲಿ ತಮ್ಮ ಅರ್ಜಿಯನ್ನು ಪರಿಶೀಲಿಸಲಾಗುತ್ತದೆ ಎಂಬ ಸೂಚನೆಯನ್ನು ಕೇಂದ್ರದಿಂದ ಪಡೆದ ಕ್ಷಣದಿಂದ ಜಿ.ಮಾದೇಗೌಡರು ತಮ್ಮ ಪ್ರಯತ್ನವನ್ನು ಮತ್ತಷ್ಟು ತೀವ್ರಗೊಳಿಸಿದರು. ತಮ್ಮ ಉದ್ದೇಶ ಸಾಧನೆಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಚಿವರ ಜೊತೆ ಸಂಪರ್ಕವನ್ನು

ಬೆಳೆಸಿಕೊಂಡು ಕಾರ್ಖಾನೆಯ ಸ್ಥಾಪನೆಯ ಬಗ್ಗೆ ಅಂಕಿ ಅಂಶಗಳ ಮೂಲಕ ವಿಸ್ತೃತವಾಗಿ ಮನದಟ್ಟು ಮಾಡಿದರು. ಅಂದು ಮಂಡ್ಯ ಜಿಲ್ಲೆಯ ಲೋಕಸಭಾ ಸದಸ್ಯರಾಗಿದ್ದ ಹಾಗೂ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಪ್ರವರ್ತಕರಲ್ಲಿ ಒಬ್ಬರಾಗಿದ್ದ ಎಂ.ಕೆ.ಶಿವನಂಜಪ್ಪ ಅವರಿಂದ ಕೇಂದ್ರದಲ್ಲಿ ಆಹಾರ ಮತ್ತು ಕೃಷಿ ಸಚಿವರಾಗಿದ್ದ ಶ್ರೀ ಸಿ.ಸುಬ್ರಮಣ್ಯಂ ಅವರಿಗೆ ಸುದೀರ್ಘವಾದ ಒಂದು ಪತ್ರವನ್ನು ಬರೆಯಿಸಿದರು. ಈ ಗ್ರಾಮಾಂತರ ಪ್ರದೇಶದ ರೈತ ಸಮುದಾಯದ ಸರ್ವಾಂಗೀಣ ಪ್ರಗತಿಗೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಯು ತೀರಾ ಅನಿವಾರ್ಯವಾಗಿದೆ ಎಂದು ಮನದಟ್ಟು ಮಾಡಿದರು[20]. ಮೈಸೂರು ಸಂಸ್ಥಾನದ ರಾಜಕೀಯ ರಂಗದಲ್ಲಿ ಅತ್ಯುತ್ತಮವಾದ ಹೆಸರನ್ನು ಪಡೆದು, ಅಂದಿನ ಲೋಕಸಭಾ ಸದಸ್ಯರಾಗಿ, ರಾಷ್ಟ್ರೀಯ ನಾಯಕರಲ್ಲಿ ಒಬ್ಬರಾಗಿದ್ದ ಮಾಜಿ ಮುಖ್ಯಮಂತ್ರಿಗಳಾದ ಕೆಂಗಲ್ ಹನುಮಂತಯ್ಯನವರೊಡನೆ ಗುರುದೇವರಹಳ್ಳಿ ಮಾದೇಗೌಡರು ಸಂಪರ್ಕ ಸಾಧಿಸಿ, ಕೇಂದ್ರ ಸರ್ಕಾರದಿಂದ ಕೈಗಾರಿಕಾ ಲೈಸೆನ್ಸ್ ಪಡೆಯುವಲ್ಲಿ ನೆರವಾಗಬೇಕೆಂದು ವಿನಂತಿಸಿಕೊಂಡರು. ಶ್ರೀ ಕೆಂಗಲ್ ಹನುಮಂತಯ್ಯ ನವರು ಮಾದೇಗೌಡರ ಪ್ರಯತ್ನಕ್ಕೆ ಶುಭಕೋರಿ ಬರೆದಿರುವ ಪತ್ರದ ಸಾರಾಂಶ ಪತ್ರ ಸಂಖ್ಯೆ 02 ರಂತಿದೆ.

**ಪತ್ರ ಸಂಖ್ಯೆ –2**

K.Hanumanthaiya,M.P.

New Delhi.
15th March, 1966.

My dear Sri Made Gowda,

I have your letter dated 8th March, 1966. I have today written a letter to Sri C.Subramaniam. Let us wait for his reply. I wish you all the good luck.

Yours sincerely,
K. Hanumanthaiya

ಮೂಲ : ದಿನಾಂಕ 13.09.2016 ರಂದು ಭಾರತೀ ಪದವಿ ಕಾಲೇಜಿನ ಕಛೇರಿಯಿಂದ ಪಡೆದ ಮಾಹಿತಿ.

ಜಿ.ಮಾದೇಗೌಡರು ಲೈಸೆನ್ಸ್ ಪಡೆಯಲು ಅಹೋರಾತ್ರಿ ಪ್ರಯತ್ನಿಸುತ್ತಿದ್ದರು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳೊಡನೆ ಮತ್ತು ರಾಜಕೀಯ ಧುರೀಣರೊಡನೆ ನಿರಂತರವಾದ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಇದಕ್ಕಾಗಿ ಕೈಗಾರಿಕಾ ಲೈಸೆನ್ಸ್ ಅನ್ನು ಪಡೆಯಲು ಅಗತ್ಯವಾದ ಪ್ರಯತ್ನಗಳನ್ನು ಗೌಡರು ಮುಂದುವರಿಸಿದರು. ಇಂತಹ

ಸಂದರ್ಭದಲ್ಲಿ ಹೊಸ ಕೈಗಾರಿಕೆಗಳ ಸ್ಥಾಪನೆಗೆ ಅಗತ್ಯವಾದ ಬಂಡವಾಳದ ಕೊರತೆಯು ಇಡೀ ದೇಶವನ್ನೇ ಕಾಡುತ್ತಿತ್ತು. ಇದೇ ಸಮಯಕ್ಕೆ ಭಾರತದ ಪ್ರಧಾನಮಂತ್ರಿ ಲಾಲ್‌ಬಹುದ್ದೂರ್‌ಶಾಸ್ತ್ರಿ ಅವರ ಅಕಾಲ ಮರಣದ ನಂತರ, ಶ್ರೀಮತಿ ಇಂದಿರಾ ಗಾಂಧಿ ಅವರು ಪ್ರಧಾನಿಯಾಗಿ ಅಧಿಕಾರವನ್ನು ವಹಿಸಿಕೊಂಡರು. ಇವರ ಸಚಿವ ಸಂಪುಟದಲ್ಲಿ ಜಗಜೀವನರಾಮ್ ಅವರು ಆಹಾರ ಮತ್ತು ಕೃಷಿ ಸಚಿವರಾಗಿ ನೇಮಕಗೊಂಡರು[21].

ಜಿ.ಮಾದೇಗೌಡರು ಜಗಜೀವನರಾಮ್ ಅವರಿಗೆ ಪತ್ರದ ಮೂಲಕ. ಕೈಗಾರಿಕಾ ಲೈಸೆನ್ಸ್‌ಗಾಗಿ ಇದುವರೆಗೂ ತಾವು ನಡೆಸಿರುವ ಪ್ರಯತ್ನಗಳನ್ನು ವಿವರಿಸಿದರು. ಗ್ರಾಮಾಂತರ ಪ್ರದೇಶದ ರೈತ ಸಮುದಾಯದ ಆರ್ಥಿಕ ಪ್ರಗತಿಗೆ ನೆರವಾಗುವ ಈ ಯೋಜನೆಗೆ ಅನುಮತಿಯನ್ನು ನೀಡಬೇಕೆಂದು ಕೋರಿಕೊಂಡರು. ಇವರ ಕೋರಿಕೆಯನ್ನು ಪರಿಗಣಿಸಿದ ಕೇಂದ್ರ ಸಚಿವರಾದ ಜಗಜೀವನರಾಮ್ ಅವರು, ಕಾರ್ಖಾನೆ ಸ್ಥಾಪನೆಗೆ ಇರುವ ಪ್ರತಿಕೂಲ ಸ್ಥಿತಿಯನ್ನು ಜಿ.ಮಾದೇಗೌಡರಿಗೆ ಪತ್ರದ ಮೂಲಕ ತಿಳಿಸಿದ್ದರು. ಆ ಪತ್ರದ ಸಾರಾಂಶವನ್ನು ಮುಂದಿನ ಪತ್ರಸಂಖ್ಯೆ 03 ರಂತೆ ಕಾಣಬಹುದಾಗಿದೆ.

**ಪತ್ರ ಸಂಖ್ಯೆ –3**



D.O.No.F.25(450)/67-ST.
MINISTER FOR
FOOD & AGRICULTURE.
GOVT. OF INDIA.
New Delhi, the 24th April, 1967.

Dear Shri Gowda

Please refer to your letter dated the 27th March, 1967, regarding the establishment of a cooperative sugar factory at K.M. Doddi, Maddur Taluk, Distt. Mandya.

Cooperative sugar factories depend for a major part of finances required for their establishment on financial institutions such as the Industrial Finance Corporation. Due to limited resources of these institutions and demand from other priority industries also, there is difficulty in arranging finances even for the factories which have already been licensed. Therefore, the question of licensing more new sugar factories is still under consideration and as soon as it is decided to license more factories, your application will receive due consideration.

Yours sincerely,

(Jagjivan Ram)

Shri G. Made Gowda,
Chief Promoter,
Bharathi S.S.K.Ltd.,
K.M. Doddi, Maddur Taluk,
Mandya District,
(Mysore State)

ಮೂಲ : ದಿನಾಂಕ 13.09.2016 ರಂದು ಭಾರತೀ ಪದವಿ ಕಾಲೇಜಿನ ಕಛೇರಿಯಿಂದ ಪಡೆದ ಮಾಹಿತಿ.

ಕೇಂದ್ರ ಸಚಿವರಾದ ಜಗಜೀವನರಾಮ್ ಅವರಿಂದ ಬಂದ ಈ ಪತ್ರವು ಜಿ.ಮಾದೇಗೌಡರಿಗೆ ಆತಂಕವನ್ನುಂಟು ಮಾಡಿತು. ಭಾರತೀ ಸಹಕಾರ ಸಕ್ಕರೆ

ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾಗಿದ್ದ ಎರಡು ಕೋಟಿ ರೂ.ಗಳ ಬಂಡವಾಳದ ಮೊತ್ತದಲ್ಲಿ ಶೇ. 50 ರಷ್ಟನ್ನು ಕೇಂದ್ರ ಸರ್ಕಾರದ ಅಧೀನದಲ್ಲಿರುವ ಕೈಗಾರಿಕಾ ಹಣಕಾಸು ನಿಗಮಗಳಿಂದ ಪಡೆಯಬೇಕೆಂಬ ಉದ್ದೇಶವನ್ನು ಗೌಡರು ಹೊಂದಿದ್ದರು. ಆದರೆ 1962 ಚೀನಾಯುದ್ಧ ಮತ್ತು ಪಾಕಿಸ್ತಾನದೊಡನೆ ನಡೆದ ಯುದ್ಧಗಳ ಪರಿಣಾಮದಿಂದ ರಾಷ್ಟ್ರವು ಆರ್ಥಿಕ ಅಸ್ಥಿರತೆಯಲ್ಲಿತ್ತು. ಈ ಹಿನ್ನೆಲೆಯಲ್ಲಿ ಕೇಂದ್ರ ಸಚಿವರಾದ ಜಗಜೀವನರಾಮ್ ಅವರು ಬರೆದಿದ್ದ ಮೇಲ್ಕಂಡ ಪತ್ರದಲ್ಲಿ ಆರ್ಥಿಕ ಮುಗ್ಗಟ್ಟನ್ನು ಪ್ರಮುಖವಾಗಿ ನಮೂದಿಸಿ ಹೊಸ ಕೈಗಾರಿಕಾ ಲೈಸೆನ್ಸ್‌ಗಳ ಬಗ್ಗೆ ನಿರಾಸಕ್ತಿ ತಳೆದಿದ್ದರು. ಇದು ಗೌಡರ ಪ್ರಯತ್ನಕ್ಕೆ ಹಿನ್ನಡೆಯಾಗುವ ಸನ್ನಿವೇಶವಾಗಿತ್ತು. ಕೇಂದ್ರ ಸರ್ಕಾರದ ದೃಷ್ಟಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಲೈಸೆನ್ಸ್ ಪಡೆಯುವ ಮೊದಲು, ಸಂಬಂಧಪಟ್ಟ ಸಂಸ್ಥೆಯಲ್ಲಿ ಬಂಡವಾಳ ಸಂಗ್ರಹವಾಗಿರಬೇಕು ಎಂಬುದಾಗಿ ತಿಳಿಸಲಾಗಿತ್ತು.

ಕಾಳಮುದ್ದನದೊಡ್ಡಿಯಂತಹ ಗ್ರಾಮೀಣ ಪ್ರದೇಶದಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಫನೆಯು ರೈತ ಸಮುದಾಯ, ಕೃಷಿ ಕಾರ್ಮಿಕರು, ಹಿಂದುಳಿದ ವರ್ಗದವರಿಗೆ ಉದ್ಯೋಗದ ಅವಕಾಶಗಳನ್ನು ಕಲ್ಪಿಸಿ, ಲಕ್ಷಾಂತರ ಮಂದಿಯ ಬದುಕಿನಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ತರುತ್ತದೆ. ಸಾಮಾಜಿಕ ಸುಧಾರಣೆಯ ಧ್ಯೇಯಗಳೂ ಕಾರ್ಯರೂಪಕ್ಕೆ ಬರುತ್ತವೆ ಎಂಬುದನ್ನು ವಿವರವಾಗಿ ತಿಳಿಸಿದರು. ಕೈಗಾರಿಕಾ ಲೈಸೆನ್ಸ್ ಅನ್ನು ಅತಿ ಶೀಘ್ರವಾಗಿ ನೀಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತಾರೆ. ಕೇಂದ್ರ ಸರ್ಕಾರದ ವತಿಯಿಂದ ಕೈಗಾರಿಕಾ ಲೈಸೆನ್ಸ್ ದೊರೆತ ಕೂಡಲೇ, ಕಾರ್ಖಾನೆಯ ಸ್ಥಾಫನೆಗೆ ಅಗತ್ಯವಾದ ಬಂಡವಾಳವನ್ನು ಸಂಗ್ರಹಿಸಿ, ಅತ್ಯಲ್ಪ ಅವಧಿಯಲ್ಲೇ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಭರವಸೆಯನ್ನು ನೀಡುತ್ತಾರೆ. ಈ ಪತ್ರಕ್ಕೆ ಕೇಂದ್ರ ಸರ್ಕಾರದ ಸಚಿವರಾದ ಜಗಜೀವನರಾಮ್ ಅವರಿಂದ ಯಾವುದೇ ಉತ್ತರ ಬರುವುದಿಲ್ಲ. ಈ ಸಂಬಂಧ ಲೈಸೆನ್ಸ್ ನೀಡಿಕೆಯಲ್ಲಿ ಆಗುತ್ತಿರುವ ವಿಳಂಬದಿಂದ ನಿರಾಶೆಗೊಳ್ಳದೆ ತಮ್ಮ ಪ್ರಯತ್ನವನ್ನು ಮತ್ತೆ ಮತ್ತೆ ಮುಂದುವರಿಸಿದರು. ಮೈಸೂರು ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಈ ಬಗ್ಗೆ ಜ್ಞಾಪನ ಪತ್ರಗಳನ್ನು ಬರೆಸಿ, ಆದಷ್ಟು ಬೇಗ ಲೈಸೆನ್ಸ್ ಪಡೆಯುವುದಕ್ಕಾಗಿ ರಾಜ್ಯ ಸರ್ಕಾರದ ವತಿಯಿಂದಲೂ ಒತ್ತಡವನ್ನು ತರುತ್ತಾರೆ.

ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಲೈಸೆನ್ಸ್ ಪಡೆಯಲು ಕೇಂದ್ರ ಸರ್ಕಾರದ ಮೇಲೆ ಯಾವ ಯಾವ ಕಡೆಗಳಿಂದ ಒತ್ತಡತರಬಹುದೋ ಆ ಎಲ್ಲಾ ಮಾರ್ಗಗಳಲ್ಲೂ ತಮ್ಮ ಪ್ರಯತವವನ್ನು ಮುಂದುವರಿಸಿದರು. ಭಾರತ ಸರ್ಕಾರದ ಯೋಜನಾ ಆಯೋಗದ ಉಪಾಧ್ಯಕ್ಷರಿಗೆ ಪತ್ರವನ್ನ ಬರೆದು ಕಾರ್ಖಾನೆಯ ಸ್ಥಾಪನೆಗೆ ಯೋಜನಾ ಆಯೋಗದ ಬೆಂಬಲವನ್ನು ಕೋರಿದರು. ಅಂದು ಯೋಜನಾ ಆಯೋಗದ

ಉಪಾಧ್ಯಕ್ಷರಾಗಿದ್ದ ಗಾಡ್ಗಿಲ್ ಅವರು ಜಿ.ಮಾದೇಗೌಡರ ಪತ್ರಕ್ಕೆ ಪ್ರತಿಕ್ರಿಯಿಸಿ. ಇವರ ಪ್ರಯತ್ನಕ್ಕೆ ಯಶಸ್ಸು ಲಭಿಸಲೆಂದು ಪತ್ರಸಂಖ್ಯೆ 4 ರಲ್ಲಿ ಹಾರೈಸುತ್ತಾರೆ.

**ಪತ್ರ ಸಂಖ್ಯೆ –4**



D.R. Gadgil,
Dy. Chairman,

योजना प्रायोग
नई दिल्ली
PLANNING COMMISSION
NEW DELHI

November 25, 1967.

Dear Sir,

I have to thank you for your letter of the 18th November. I was glad to hear of your efforts at establishing a cooperative sugar factory in Mandya District. The question of issuing further licences for sugar factories is under the consideration of the Ministry of Food and Agriculture. I hope that with the active sponsorship of the authorities of Mysore State your effort in the direction of getting a licence will succeed.

Yours truly,

(D.R. Gadgil )

Shri G. Made Gowda,
Chief Promoter,
Bharathi Sahakara Sakkare Karkhane Ltd.,
K.M. Doddi, Maddur Taluk,
(Mysore State).

ಮೂಲ : ದಿನಾಂಕ 13.09.2016 ರಂದು ಭಾರತೀ ಪದವಿ ಕಾಲೇಜಿನ ಕಛೇರಿಯಿಂದ ಪಡೆದ ಮಾಹಿತಿ.

ಕೇಂದ್ರ ಸಚಿವರಾದ ಜಗಜೀವನರಾಮ್ ಅವರು ಕೆಂಗಲ್ ಹನುಮಂತಯ್ಯನವರಿಗೆ ಬರೆದಿದ್ದ ಪತ್ರದಲ್ಲಿ ಉದ್ದೇಶಿತ ಸಹಕಾರ ಸಂಸ್ಥೆಯು ಐ.ಎಫ್.ಸಿ/ಐ.ಡಿ.ಬಿ.ಐ. ಹಣಕಾಸಿನ ನಿಮಗಳನ್ನು ಹೊರತುಪಡಿಸಿ, ಸೂಕ್ತ ಬಂಡವಾಳವನ್ನು ವ್ಯವಸ್ಥೆ ಮಾಡಿಕೊಳ್ಳುವುದಾದಲ್ಲಿ, ಲೈಸೆನ್ಸ್ ನೀಡುವ ಬಗ್ಗೆ ಯಾವುದೇ ತಕರಾರು ಇರುವುದಿಲ್ಲ ಎಂಬ ಆಶ್ವಾಸನೆಯನ್ನು ನೀಡಿದ್ದು, ಗೌಡರ ಪಾಲಿಗೆ ಬಹುದೊಡ್ಡ ಆಶಾಕಿರಣವಾಗಿ ಕಂಡಿತು. ದಿನಾಂಕ : 1ನೇ ಮೇ 1964ರಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲೆಂದು ಕೇಂದ್ರ ಸರ್ಕಾರಕ್ಕೆ ತಾವು ನೀಡಿದ್ದ ಅರ್ಜಿಗೆ ದೊರೆತ

ಮೊದಲ ಹಸಿರು ನಿಶಾನೆ ಇದಾಗಿತ್ತು[22]. ನಿರಂತರವಾದ ಪ್ರಯತ್ನಗಳಿಂದ ಹೋರಾಡುತ್ತಿದ್ದ ಕೇಂದ್ರ ಸಚಿವರ ಈ ಭರವಸೆಯು ಮತ್ತಷ್ಟು ಶಕ್ತಿಯನ್ನು ನೀಡಿತು. ಭಾರತದ ಕೂಲಿಕಾರ ಬಡಜನತೆಯ ಮತ್ತು ರೈತ ಸಮುದಾಯದ ಶ್ರಮಪೂರ್ಣವಾದ ನೋವಿನ ಬದುಕನ್ನು ಚೆನ್ನಾಗಿ ಅರಿತಿದ್ದ ಜಗಜೀವನರಾಮ್ ಅವರ ಮುಂದೆ ಜಿ.ಮಾದೇಗೌಡರು ತಮ್ಮ ಅಹವಾಲನ್ನು ಮತ್ತೆ ಮತ್ತೆ ಮಂಡಿಸುತ್ತಾ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಗೆ ಲೈಸೆನ್ಸ್ ಪಡೆಯಲು ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ಈ ದಿಶೆಯಲ್ಲಿ ಮತ್ತೆ ಪತ್ರ ವ್ಯವಹಾರವನ್ನು ಮುಂದುವರಿಸಿ, ಕೇಂದ್ರ ಸರ್ಕಾರದ ವತಿಯಿಂದ ಕೈಗಾರಿಕಾ ಲೈಸೆನ್ಸ್ ವಿತರಿಸುವುದಕ್ಕಿಂತ ಮುಂಚೆ ನೀಡುವ ಲೆಟರ್ ಆಫ್ ಇಟೆಂಟ್ ಅನ್ನು ಭಾರತೀ ಸಹಕಾರಿ ಸಕ್ಕರೆ ಕಾರ್ಖಾನೆಯ ಹೆಸರಿನಲ್ಲಿ ನೀಡಬೇಕೆಂದು ಕೋರಿಕೊಂಡರು[23]. ಕೇಂದ್ರ ಸರ್ಕಾರದಿಂದ ಲೆಟರ್ ಆಫ್ ಇಟೆಂಟ್ ಅನ್ನು ಪಡೆದುಕೊಂಡರು. ಅದನ್ನು ಕರ್ನಾಟಕ ರಾಜ್ಯದಲ್ಲಿರುವ ಪ್ರಮುಖ ಬ್ಯಾಂಕ್‌ಗಳಿಗೆ ಮತ್ತು ದೊಡ್ಡ ದೊಡ್ಡ ಬಂಡವಾಳವನ್ನು ಕ್ರೋಢಿಕರಿಸಬೇಕೆಂಬ ಉದ್ದೇಶ ಹೊಂದಿದ್ದರು. 1968ರಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ ಸರ್ಕಾರ ಅಸ್ತಿತ್ವಕ್ಕೆ ಬಂದು ಮುಖ್ಯಮಂತ್ರಿಯಾಗಿ ವೀರೇಂದ್ರ ಪಾಟೀಲರು ನೇಮಕಗೊಂಡ ನಂತರ ಕರ್ನಾಟಕದ ಅಭಿವೃದ್ಧಿಗೆ ಕೈಗಾರಿಕರಣವೇ ಸೂಕ್ತ ಎಂದು ತಿಳಿದಿದ್ದ ಇವರು ಕೈಗಾರಿಕಾಭಿವೃದ್ಧಿಗೆ ಒತ್ತುಕೊಟ್ಟು ಕರ್ನಾಟಕದಲ್ಲಿ ಬಂಡವಾಳ ಹೂಡುವ ಕೈಗಾರಿಕೋದ್ಯಮಿಗಳಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವುದಾಗಿ ಸರ್ಕಾರದ ಪರವಾಗಿ ಘೋಷಿಸಿದರು. ಈ ರೀತಿಯ ಸರ್ಕಾರದ ಘೋಷಣೆಯಿಂದ ಪ್ರಭಾವಿತರಾದ ತಮಿಳುನಾಡು ರಾಜ್ಯದ ಖ್ಯಾತ ಕೈಗಾರಿಕೋದ್ಯಮಿ ಎನ್.ಮಹಾಲಿಂಗಮ್ ಅವರು ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ವಿರೇಂದ್ರ ಪಾಟೀಲರ ಮೂಲಕ ಜಿ.ಮಾದೇಗೌಡರನ್ನು ಭೇಟಿ ಮಾಡಿ ಅಗತ್ಯ ಮಾಹಿತಿಗಳನ್ನು ಪಡೆದರು[24]. ನಂತರ ಎನ್.ಮಹಾಲಿಂಗಮ್ ಅವರು ತಮ್ಮ ಪ್ರತಿನಿಧಿಯಾಗಿ ಎನ್.ಚಂದ್ರಪ್ಪನವರ ಮೂಲಕ ಉದ್ದೇಶಿತ ಸಕ್ಕರೆ ಕಾರ್ಖಾನೆಯ ಯೋಜನಾ ವರದಿಯ ವಿವರಗಳನ್ನು ಹಾಗೂ ಸ್ಥಳೀಯವಾಗಿ ಸಿಗುವ ಸಂಪನ್ಮೂಲಗಳ ಬಗ್ಗೆ ಮಾಹಿತಿ ಕಲೆಹಾಕಿದರು. ಮಾಹಿತಿ ತೃಪ್ತಿಕರವಾಗಿದ್ದುದರಿಂದ ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಎರಡನೆಯ ಘಟಕವಾಗಿ ಕೆ.ಎಂ.ದೊಡ್ಡಿಯಲ್ಲಿ (ಇಂದಿನ ಭಾರತೀನಗರ) ಸಕ್ಕರೆ ಕಾರ್ಖಾನೆ ಪ್ರಾರಂಭಿಸಲು ನಿರ್ಧರಿಸಿದರು[25]. ನಂತರ ಎನ್.ಮಹಾಲಿಂಗಮ್ ಅವರು ಕರ್ನಾಟಕ ಸರ್ಕಾರದ ಮೂಲಕ ಗೌಡರು ಮತ್ತು ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಪ್ರವರ್ತಕರುಗಳನ್ನು ಸಂಪರ್ಕಿಸಿ ಉದ್ದೇಶಿತ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಕೇಂದ್ರ ಸರ್ಕಾರದಿಂದ ಲೈಸೆನ್ಸ್ ಪಡೆಯಲು ನಡೆದಿರುವ ಎಲ್ಲಾ ಆಡಳಿತಾತ್ಮಕ ದಾಖಲೆಗಳನ್ನು ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಹೆಸರಿಗೆ ವರ್ಗಾಯಿಸುವಂತೆ ಕೋರಿದರು. ಇವರ ಕೋರಿಕೆಯ ಬಗ್ಗೆ ಗೌಡರು

ಮತ್ತು ಪ್ರವರ್ತಕರು ಸಭೆ ಸೇರಿ ವಿಸ್ತೃತವಾಗಿ ಚರ್ಚಿಸಿ ಈಗ ಬಂದಿರುವ ಅವಕಾಶವನ್ನು ಬಿಡಬಾರದು ಮತ್ತು ನಮ್ಮ ಗುರಿ ರೈತರ ಆರ್ಥಿಕ ಸಬಲೀಕರಣವೇ ಆಗಿರುವುದರಿಂದ ಲೈಸೆನ್ಸ್ ಅನ್ನು ವರ್ಗಾವಣೆ ಮಾಡುವುದು ಸೂಕ್ತವೆಂದು ನಿರ್ಣಯಿಸಿದರು. ಈ ಕೆಳಕಂಡ ಕರಾರುಗಳನ್ನು ವಿಧಿಸಿದ್ದರು. ಸಕ್ಕರೆ ಕಾರ್ಖಾನೆಯಲ್ಲಿ ಸ್ಥಳೀಯರಿಗೆ ಮತ್ತು ಕನ್ನಡಿಗರಿಗೆ ಹೆಚ್ಚಿನ ಸಂಖ್ಯೆಯಲ್ಲಿ ಉದ್ಯೋಗಗಳನ್ನು ನೀಡಬೇಕು. ಕಬ್ಬು ಬೆಳೆಗಾರರಿಗೆ ಆಯಾಯ ವರ್ಷಗಳಲ್ಲಿ ಪರಿಷ್ಕರಿಸಿದ ಉತ್ತಮ ಬೆಲೆಯನ್ನು ನೀಡಬೇಕು. ಕಾಳಮುದ್ದನದೊಡ್ಡಿಯ ಅಕ್ಕಪಕ್ಕದ ಗ್ರಾಮಗಳ ರೈತರು, ಸಮುದಾಯಗಳ ಕಾರ್ಮಿಕರು, ಸಾಮಾನ್ಯ ಜನರು ಹಾಗೂ ವಿದ್ಯಾರ್ಥಿಗಳ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಅಭಿವೃದ್ಧಿಯ ಜವಾಬ್ದಾರಿಯನ್ನು ಕಾರ್ಖಾನೆಯ ಆಡಳಿತ ಮಂಡಳಿ ನಿರ್ವಹಿಸಬೇಕು ಎಂಬ ಈ ಷರತ್ತುಗಳನ್ನು ವಿಧಿಸಿದರು. ಈ ಎಲ್ಲಾ ಕರಾರುಗಳಿಗೂ ಎನ್.ಮಹಾಲಿಂಗಮ್ ಮತ್ತು ಎನ್.ಚಂದಪ್ಪ ಅವರು ಒಪ್ಪಿಗೆ ಸೂಚಿಸಿ ನೆರವೇರಿಸುವುದಾಗಿ ಆಶ್ವಾಸನೆ ನೀಡಿದರು. ಅನಂತರ ಜಿ.ಮಾದೇಗೌಡರು ಮತ್ತು ಪ್ರವರ್ತಕರುಗಳು ಸರ್ವಾನುಮತದಿಂದ ಒಪ್ಪಿಗೆ ಸೂಚಿಸಿದರು. ಈ ಎಲ್ಲಾ ಬೆಳವಣಿಗೆಯ ನಂತರ ಎನ್.ಮಹಾಲಿಂಗಮ್ ಅವರು ಕರ್ನಾಟಕ ಸರ್ಕಾರಕ್ಕೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಹೆಸರಿನಲ್ಲಿ ನೀಡಬೇಕಾಗಿದ್ದ ಕೈಗಾರಿಕಾ ಲೈಸೆನ್ಸ್‌ಅನ್ನು ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ 'ಬಿ' ಘಟಕವಾಗಿ ಸಕ್ಕರೆ ಕಾರ್ಖಾನೆಯನ್ನು ಕಾಳಮುದ್ದನದೊಡ್ಡಿಯಲ್ಲಿ ಸ್ಥಾಪಿಸಲು ಅನುಕೂಲವಾಗುವಂತೆ ಕೈಗಾರಿಕಾ ಲೈಸೆನ್ಸ್ ಅನ್ನು ನೀಡುವಂತೆ ಮನವಿ ಮಾಡಿಕೊಂಡರು. ಈ ಮನವಿಯನ್ನು ಪರಿಗಣಿಸಿದ ಕೇಂದ್ರ ಸರ್ಕಾರ ನವೆಂಬರ್ 1969ರಲ್ಲಿ ಕೈಗಾರಿಕಾ ಲೈಸೆನ್ಸ್‌ಅನ್ನು ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಹೆಸರಿನಲ್ಲಿ ವಿತರಿಸಿತು[26].

ಕಾಳಮುದ್ದನದೊಡ್ಡಿಯಲ್ಲಿ ಸ್ಥಾಪನೆಯಾಗುವ ಸಕ್ಕರೆ ಕಾರ್ಖಾನೆ ಹೆಸರನ್ನು ಮಂಡ್ಯ ಜಿಲ್ಲೆಯ ಸ್ಥಳೀಯ ಕಬ್ಬು ಬೆಳೆಗಾರರ ಹಿತದೃಷ್ಟಿಯಿಂದ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಸ ಎಂಬ ಹೆಸರಿನಲ್ಲಿ ಒಂದು ಸ್ವತಂತ್ರ ಕಂಪನಿಯಾಗಿ 1956ರ ಕಂಪನಿಗಳ ನಿಯಮಾನುಸಾರ ನೋಂದಾಯಿಸಲಾಯಿತು. 1969ನೇ ನವೆಂಬರ್ ತಿಂಗಳಲ್ಲಿ ಕಾರ್ಖಾನೆ ನಿರ್ಮಾಣದ ಕಾಮಗಾರಿಯ ಪ್ರಾರಂಭಗೊಂಡು 1974ರಲ್ಲಿ ಪೂರ್ಣಗೊಂಡು ಕಾರ್ಯಾರಂಭ ಮಾಡಿತು. ಪ್ರಸ್ತುತ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯು ಲಾಭದಲ್ಲಿ ನಡೆಯುತ್ತಿದ್ದು ಮಂಡ್ಯ ಜಿಲ್ಲೆಯ ರೈತ ಸಮುದಾಯದ, ಮಹಿಳೆಯರ, ಕೃಷಿಕಾರ್ಮಿಕರ, ವಿದ್ಯಾರ್ಥಿಗಳ, ಸಾಮಾಜಿಕ, ಆರ್ಥಿಕ ಅಭಿವೃದ್ಧಿಯಲ್ಲಿ ಕರಾರು ಒಪ್ಪಂದದಂತೆ ಮಹತ್ತರ ಪಾತ್ರವನ್ನು ನಿರ್ವಹಿಸುತ್ತ ಬಂದಿದೆ. ಕಾರ್ಖಾನೆಯ ಆಡಳಿತ ಮಂಡಳಿಯ ಕಾರ್ಯನಿರ್ವಹಣೆಯಲ್ಲಿ ಸಣ್ಣ-ಪುಟ್ಟ ಸಮಸ್ಯೆಗಳಿದ್ದರೂ ಸಹ ಜಿ.ಮಾದೇಗೌಡರು ಕಾರ್ಖಾನೆ ಆಡಳಿತ ಮಂಡಳಿಯ ಆಡಳಿತ ನಿರ್ವಹಣೆಯ ಬಗ್ಗೆ

ಮೆಚ್ಚುಗೆ ವ್ಯಕ್ತಪಡಿಸುತ್ತಾರೆ.[26ಎ] ಗೌಡರ ದೂರದೃಷ್ಟಿತ್ವದ ಫಲವಾಗಿ ಸಾಕಾರಗೊಂಡ ಸಕ್ಕರೆ ಕಾರ್ಖಾನೆಯು ಸಹಸ್ರಾರು ಎಕರೆ ಬರಡು ಭೂಮಿಯನ್ನು ಹಸಿರಾಗಿಸಿದೆ. ಬಹುಸಂಖ್ಯಾತ ದುಡಿಯುವ ಕೈಗಳಿಗೆ ಉದ್ಯೋಗವನ್ನು ಉಪಕಸುಬುಗಳನ್ನು ನೀಡಿದೆ. ಕೃಷಿಯೇ ಪ್ರಧಾನವಾಗಿ ರೂಪುಗೊಂಡಿರುವು ದರಿಂದಾಗಿ ಪಶು ಸಂಗೋಪನೆ ಮತ್ತು ಹೈನುಗಾರಿಕೆಗೆ ಉತ್ತೇಜನ ಪಡೆದು ಗಳಿಕೆಯ ಪ್ರಮಾಣವನ್ನು ದ್ವಿಗುಣಗೊಳಿಸಿವೆ. ರೈತರಲ್ಲಿದ್ದ ನಿರುದ್ಯೋಗ, ಅರೆ ನಿರುದ್ಯೋಗ ಕಡಿಮೆಯಾಗಿ ದಿನದ 24 ಗಂಟೆಗಳು ದುಡಿಯಲು ಅವಕಾಶ ದೊರೆಯಿತು. ಭೂ ರಹಿತ ಕೃಷಿ ಕಾರ್ಮಿಕರು ತಮ್ಮ ಅಸ್ತಿತ್ವವನ್ನು ವ್ಯವಸಾಯ ಮತ್ತು ಕಬ್ಬು ಸಾಗಿಸುವ ಕಾಯಕದ ಮೂಲಕ ಕಂಡುಕೊಂಡಿದ್ದಾರೆ. ಅಲ್ಪ ಸ್ವಲ್ಪ ಉಳಿತಾಯ ಮಾಡಿದ ಹಣವನ್ನು ತೊಡಗಿಸಲು ಭಾರತಿ ವಿವಿಧೋದ್ದೇಶಗಳ ಸಹಕಾರ ಬ್ಯಾಂಕ್ ಅನ್ನು ಸ್ವತಃ ಜಿ.ಮಾದೇಗೌಡರ ಆಶಯದಂತೆ ಸ್ಥಾಪಿಸಿದ್ದು ಉಳಿತಾಯದ ಮನೋಭಾವನೆಯನ್ನು ಹೆಚ್ಚಿಸಿದೆ. ಕ್ಷೇತ್ರ ಕಾರ್ಯದಲ್ಲಿ ಕಂಡುಕೊಂಡ ಮತ್ತೊಂದು ಅಂಶವೆಂದರೆ ಕಬ್ಬು ಬೆಳೆಗಾರರಿಗೆ ಆರ್ಥಿಕವಾಗಿ ಅನುಕೂಲವಾಗಲೆಂದು ಬಿತ್ತನೆ ಬೀಜ, ಕಟಾವು ಮುಂಗಡವನ್ನು ನೀಡುತ್ತಿರುವುದು ಗಮನಾರ್ಹ ಸಂಗತಿಯಾಗಿದ್ದು ಆರ್ಥಿಕ ಸಬಲೀಕರಣಕ್ಕೆ ಪೂರಕವಾಗಿದೆ.

ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಯಿಂದ ಮಳವಳ್ಳಿ ಮತ್ತು ಮದ್ದೂರು ತಾಲ್ಲೂಕಿನ ರೈತರಿಗೆ ಕಬ್ಬಿನ ವ್ಯವಸಾಯಕ್ಕೆ ಆರ್ಥಿಕ ಪ್ರೋತ್ಸಾಹ ನೀಡುವುದು ಮತ್ತು ಕಾರ್ಖಾನೆ ಸ್ಥಾಪನೆಯಿಂದ ಕ್ಷೇತ್ರದ ಮತ್ತು ಜಿಲ್ಲೆಯ ನೂರಾರು ವಿದ್ಯಾವಂತ ನಿರುದ್ಯೋಗಗಳಿಗೆ ಉದ್ಯೋಗ ಕಲ್ಪಿಸುವಲ್ಲಿ ಹಾಗೂ ಸಕ್ಕರೆ ಕಾರ್ಖಾನೆಯ ಆದಾಯದಲ್ಲಿ ಶಿಕ್ಷಣ, ಆರೋಗ್ಯ, ಸಾರಿಗೆ, ಗುಡಿ ಕೈಗಾರಿಕೆಗಳ ಸ್ಥಾಪನೆಗಳಿಗೆ ನೆರವು ನೀಡುವುದು ಗೌಡರ ಆಶಯ. ಈ ಯೋಜನೆಯನ್ನು ಸಾಕಾರಗೊಳಿಸಲು ಆಯ್ಕೆ ಮಾಡಿಕೊಂಡ ಸ್ಥಳ ಕಾಳಮುದ್ದನದೊಡ್ಡಿ. ಮಳೆಯನ್ನೇ ನಂಬಿ ಬದುಕುತ್ತಿದ್ದ ಜನರು ಮಳೆ ಆದಾಗ, ಹುರುಳಿ, ಅರಕ, ಸಾಮೆ, ರಾಗಿ, ಜೋಳ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು ದಿನಬಳಕೆಗೆ ಸಾಕಾಗುವಷ್ಟು ಬೆಳೆ ತೆಗೆಯುತ್ತಿದ್ದರೇ ಹೊರತು ಹಣವನ್ನು ಸಂಪಾದಿಸಲು ಸಾಧ್ಯವಾಗುತ್ತಿರಲಿಲ್ಲ. ಮದ್ದೂರು ಹಾಗೂ ಮಳವಳ್ಳಿ ಭಾಗದಲ್ಲಿ ಬಹುತೇಕ ಇಂತಹ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ಇತ್ತೆಂಬುದನ್ನು ಸಂದರ್ಶನದಿಂದ ಕಂಡುಕೊಳ್ಳಲಾಗಿದೆ. ಇಂತಹ ಪ್ರದೇಶದಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಪ್ರಾರಂಭಿಸುವ ಮೂಲಕ ಜನರು ಸ್ವಾವಲಂಬಿಗಳಾಗುವಂತೆ ಮಾಡಿದರು. ಕಾರ್ಖಾನೆಯ ಸ್ಥಾಪನೆಯಿಂದಾಗಿ ಕಾರ್ಖಾನೆಯಲ್ಲಿ ಸ್ಥಳೀಯರಿಗೆ ಹೆಚ್ಚಿನ ಉದ್ಯೋಗಾವಕಾಶಗಳು ದೊರೆತಿವೆ. ಆರ್ಥಿಕ ಕೇಂದ್ರವಾದ ಭಾರತೀನಗರದಲ್ಲಿ ಅನೇಕ ಸ್ಥಳೀಯರು ಹಾಗೂ ಹೊರ ರಾಜ್ಯದವರು ಸ್ವಂತ ಉದ್ದಿಮೆಗಳು, ಹೋಟೆಲ್‌ಗಳು, ಶಿಕ್ಷಣ ಸಂಸ್ಥೆಗಳು, ವಾಣಿಜ್ಯ ವಹಿವಾಟುಗಳು, ಚಲನಚಿತ್ರಮಂದಿರ, ಸಣ್ಣ ಕಾರ್ಖಾನೆಗಳು, ರೈಸ್ ಮಿಲ್, ಸಾಮಿಲ್

ಇದೇ ಮೊದಲಾದ ಸ್ವಯಂ ಉದ್ಯೋಗಗಗಳನ್ನು ಕೈಗೊಂಡು ಆರ್ಥಿಕವಾಗಿ ಸದೃಢರಾಗಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಆರ್ಥಿಕ ಕೊಡುಗೆಗಳು ಆ ಭಾಗದ ರೈತರು, ಜನಸಾಮಾನ್ಯರ ಮಂದಹಾಸ ನಗು ಸಂತೃಪ್ತಿ ಜೀವನ, ಸುಸಂಸ್ಕೃತ ಉಡುಗೆ ತೊಡುಗೆಗಳು, ಆಧುನಿಕ ಸುಸಜ್ಜಿತ ಮನೆಗಳ ನಿರ್ಮಾಣ ಎದ್ದು ಕಾಣುತ್ತಿತ್ತು. ಸದಾ ಕ್ರಿಯಾಶೀಲರಾಗಿರುವ ರೈತರು, ಮಹಿಳೆಯರು, ಕಾರ್ಮಿಕರು ಹಾಗೂ ಇವರೇ ಸ್ಥಾಪಿಸಿಕೊಂಡಿರುವ ಸಹಕಾರ ಸಂಘಗಳು, ಸ್ತ್ರೀ ಸಂಘಗಳು, ಯುವಕ ಸಂಘಗಳು, ಜಿ.ಮಾದೇಗೌಡರ ಆರ್ಥಿಕ ಸಾಧನೆಯ ಪ್ರತೀಕವಾಗಿ ಕಂಗೋಳಿಸುತ್ತಿರುವುದನ್ನು ಸಂಶೋಧನೆಯಿಂದ ಅವಲೋಕಿಸಲಾಗಿದೆ.

### 5.2.2 ಭಾರತೀ ವಿವಿಧೋದ್ದೇಶ ಸಹಕಾರ ಸಂಘ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

ಮಂಡ್ಯ ಜಿಲ್ಲೆಯ ಜನ ಜೀವನದ ಮೇಲೆ ಜಿ.ಮಾದೇಗೌಡರ ಕಾರ್ಯಕ್ಷೇತ್ರ ವ್ಯಾಪ್ತಿಯ ಪ್ರಭಾವವನ್ನು ಗುರುತಿಸಬಹುದು. ಪ್ರಮುಖವಾಗಿ ಜನತೆಯ ಮೂಲಭೂತ ಅವಶ್ಯಕತೆಗಳನ್ನು ಒಳಗೊಂಡಂತೆ ಆರ್ಥಿಕ ಹಾಗೂ ಉನ್ನತ ಶಿಕ್ಷಣ, ಉತ್ತಮ ವಸತಿ, ಆರೋಗ್ಯ, ಉದ್ಯೋಗ, ಸಂಘಟನೆ ಮುಂತಾದವುಗಳಲ್ಲಿ ಅಭಿವೃದ್ಧಿ ಸ್ಥಾಪಿಸಲು ಸಾಧ್ಯವಾಗಿದೆ. ಇಷ್ಟೆಲ್ಲಾ ಸಾಧನೆಗಳನ್ನು ಸಾಕಾರಗೊಳಿಸಿದ್ದರು. ಎಲ್ಲಿಯೂ ತಮ್ಮ ಹೆಸರನ್ನಾಗಲೀ, ತಮ್ಮಿಂದ ಎಂಬ ಅಹಂನಾಗಲೀ ಸಾಧನೆಗಾಗಿ ಸನ್ಮಾನಗಳನ್ನಾಗಲೀ ಹೊಂದಿದವರಲ್ಲ, ನಿರೀಕ್ಷಿಸಿದವರೂ ಅಲ್ಲ. ಮಂಡ್ಯ ಜಿಲ್ಲೆಯ ಆರ್ಥಿಕ ಸಬಲೀಕರಣದಲ್ಲಿ ತಮ್ಮದೇ ಆದ ಕೊಡುಗೆ ನೀಡಿರುವ ಸ್ವಾತಂತ್ರ್ಯ ನಂತರದಲ್ಲಿ ಎಚ್.ಕೆ.ವೀರಣ್ಣಗೌಡ, ಕೆ.ವಿ.ಶಂಕರಗೌಡರವರ ಸಾಲಿನಲ್ಲಿ ಗುರುದೇವರಹಳ್ಳಿ ಮಾದೇಗೌಡರೂ ಸಹ ಪ್ರಮುಖರು. ಆರ್ಥಿಕ ಸಬಲೀಕರಣದ ಹೊರತಾಗಿ ಸಮಾಜದ ಸ್ಥಿತಿ ಸುಧಾರಣೆಯಾಗುವುದಿಲ್ಲ ಎಂಬುವುದನ್ನರಿತ ಗೌಡರು ಸಹಕಾರ ಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸಿದ್ದರು. ಇದರ ಪ್ರತಿಫಲವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ಗಮನಾರ್ಹ ಅಭಿವೃದ್ಧಿಯಾಗಿರುವುದು ಅವರ ದೂರದೃಷ್ಟಿ ಮತ್ತು ಚಿಂತನಾತ್ಮಕ ಹೋರಾಟದ ಫಲವಾಗಿದೆ ಎಂಬುದನ್ನು ಸಂಶೋಧನೆಯಿಂದ ಅರಿಯಲಾಗಿದೆ.

1965ರಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಅವರಿಂದ 11 ರೂ.ಗಳ ಷೇರು ಸಂಗ್ರಹಿಸಿ ಭಾರತೀ ಪ್ರೌಢಶಾಲಾ ವಿದ್ಯಾರ್ಥಿ ಗ್ರಾಹಕರ ಸಹಕಾರ ಸಂಘ ನಿಗಮವನ್ನು ಕಾಳಮುದ್ದನದೊಡ್ಡಿಯಲ್ಲಿ ಪ್ರಾರಂಭಿಸಲಾಯಿತು. ಆರಂಭದಲ್ಲಿ ವಿದ್ಯಾರ್ಥಿಗಳು ಹಾಗೂ ಅಧ್ಯಾಪಕರಿಗೆ ಬೇಕಾದ ಲೇಖನ ಸಾಮಗ್ರಿಗಳು, ಪಠ್ಯ ಪುಸ್ತಕಗಳು, ಸ್ಟೇಷನರಿ ಸಾಮಾನು,

ಸೋಪು, ಪೌಡರ್, ರಿಬ್ಬನ್ ಮುಂತಾದ ದಿನಬಳಕೆ ವಸ್ತುಗಳನ್ನು ಸುಲಭ ಬೆಲೆಗೆ ಮಾರಾಟ ಮಾಡಲಾಗುತ್ತಿತ್ತು. ಕ್ರಮೇಣ ಇಲ್ಲಿನ ಹೆಸರುವಾಸಿಯಾದ ಕಾಫಿಪುಡಿ ದಶಕಗಳ ಕಾಲ ಪ್ರಸಿದ್ಧವಾಗಿತ್ತು. ಕಾಲಕ್ರಮೇಣ ಇದು ವಿಸ್ತಾರಗೊಂಡು ಅಧಿಕೃತ ಸಹಕಾರ ಸಂಘವಾಗಿ ಸಕ್ಕರೆ, ಅಕ್ಕಿ, ಗೋಧಿ, ಸೀಮೆಎಣ್ಣೆ ಮುಂತಾದ ಆಹಾರ ಸಾಮಗ್ರಿಗಳನ್ನೂ ಆಹಾರ–ನಾಗರಿಕ ಸರಬರಾಜು ಇಲಾಖೆಯಿಂದ ಪಡೆದು ರೇಷನ್‌ಕಾರ್ಡ್ ಮೂಲಕ ಸದಸ್ಯರಿಗೆ ವಿತರಿಸುವ ನ್ಯಾಯಬೆಲೆ ಅಂಗಡಿ ಸಹಕಾರ ಸಂಘವಾಯಿತು. ನಂತರ ಬಿಇಟಿ ಕಾಂಪ್ಲೆಕ್ಸ್‌ನಲ್ಲಿ ಸಹ ಒಂದು ಕೌಂಟರ್ ಪ್ರಾರಂಭಿಸಿ ಜೆರಾಕ್ಸ್ ಮಾಡುವ ಕೆಲಸವನ್ನು ಪ್ರಾರಂಭಿಸಿತು[27]. ಈಗ ಇದರ ವ್ಯವಹಾರ ವಿಸ್ತಾರಗೊಂಡಿದ್ದು ಭಾರತೀ ವಿವಿದೋದ್ದೇಶ ಸಹಕಾರ ಸಂಘವೆಂದು ಪುನರ್ ಸಂಘಟಿಸಿ ಸಿಮೆಂಟ್, ಕಬ್ಬಿಣ ಮುಂತಾದ ಗ್ರಾಹಕ ವಸ್ತುಗಳನ್ನು ಸಹ ಸರಬರಾಜು ಮಾಡಲಾಗುತ್ತಿದೆ. ಅಕ್ಟೋಬರ್ 2010ರಲ್ಲಿ ಈ ಸಹಕಾರ ಬ್ಯಾಂಕು ಸ್ಥಾಪನೆಗೊಂಡಿದ್ದು ಬಿಇಟಿ ಸಂಸ್ಥೆಯ ಸಂಬಳ, ವಿದ್ಯಾರ್ಥಿಗಳ ಶುಲ್ಕ ಸಂದಾಯ ಹಾಗೂ ಸಂಸ್ಥೆಯ ಹಣಕಾಸಿನ ವ್ಯವಹಾರಗಳನ್ನು ಇಲ್ಲಿ ಮಾಡಲಾಗುತ್ತಿದೆ. ಬಿಇಟಿ ಶಾಪಿಂಗ್ ಕಾಂಪ್ಲೆಕ್ಸ್‌ನಲ್ಲಿ ಬ್ಯಾಂಕು ಇದ್ದು ಮೂಲ ಬಂಡವಾಳವಾಗಿ ನೌಕರರಿಂದ 11 ಲಕ್ಷ ರೂ. ಷೇರು ಪಡೆಯಲಾಗಿದೆ. ಕಾರ್ಯನಿರ್ವಾಹಕ ಟ್ರಸ್ಟಿ ಮಧು ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ನಿರ್ದೇಶಕರ ಮಂಡಳಿಯನ್ನು ರಚಿಸಲಾಗಿದ್ದು, ಇವರ ನೇತೃತ್ವದಲ್ಲಿ ಬ್ಯಾಂಕು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ[27ಎ].

### 5.2.3 ಮಹಿಳೆಯರಿಗೆ ಹಾಗೂ ಪುರುಷರಿಗೆ ಸ್ವ–ಉದ್ಯೋಗ ತರಬೇತಿ ಕೇಂದ್ರ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

ಉದ್ಯೋಗಂ ಪುರುಷ ಲಕ್ಷಣಂ ಎಂಬ ಕಾಲವಿತ್ತು. ಆದರೆ ಇಂದು ಉದ್ಯೋಗಂ ಸ್ತ್ರೀ ಪುರುಷ ಲಕ್ಷಣಂ ಎಂಬುವಂತಾಗಿದೆ. ಇದಕ್ಕೆ ಪೂರಕವಾಗಿ ಜಿ.ಮಾದೇಗೌಡರ ಜೀವನವನ್ನು ಅವಲೋಕಿಸಿದರೆ ಮಂಡ್ಯ ಜಿಲ್ಲೆ ಸ್ವತಂತ್ರದ ನಂತರ ಕೃಷಿ ಚಟುವಟಿಕೆಯನ್ನೇ ಪ್ರಮುಖವಾಗಿ ಆಶ್ರಯಿಸಿತ್ತು. ಆದರೆ ಗೌಡರು ಮಹಿಳೆಯರು ಮತ್ತು ಪುರುಷರಿಗೆ ಕೃಷಿಯೊಂದಿಗೆ ಉಪಕಸುಬುಗಳನ್ನು ಆಶ್ರಯಿಸುವಲ್ಲಿ ಅವರ ಕೈಗೊಂಡ ಕಾರ್ಯಕ್ರಮಗಳು ಪ್ರಮುಖವಾಗಿವೆ. 1965ನೇ ಸಾಲಿನಿಂದ ಇಲ್ಲಿನ ವಿದ್ಯಾರ್ಥಿನಿಯರಿಗೆ ಹಾಗೂ ಗ್ರಾಮೀಣ ಮಹಿಳೆಯರಿಗೆ ಸ್ವಂತ ಉದ್ಯೋಗ ಮಾಡಲು ಅನುಕೂಲವಾಗುವಂತೆ ಹೊಲಿಗೆ ತರಬೇತಿಯನ್ನು ಪ್ರಾರಂಭಿಸಲಾಯಿತು. ಇದಕ್ಕೆ ಹೊಲಿಗೆ ತರಬೇತಿ ಪಡೆದ ಶಿಕ್ಷಕಿಯೋರ್ವರನ್ನು ನೇಮಿಸಿಕೊಂಡು ಅವರು ಇಲ್ಲಿಯೇ ಉಳಿದುಕೊಂಡು ಗ್ರಾಮೀಣ ಮಹಿಳೆಯರಿಗೆ ಬಿಡುವಿನ ವೇಳೆ ತರಬೇತಿ ನೀಡಲು ಅನುಕೂಲವಾಗುವಂತೆ ಕೃಷಿ

ಕಾಲೋನಿಯಲ್ಲಿ ಜಾಗ ಪಡೆದು ವಸತಿ ನಿಲಯ ಮಾಡಿಕೊಡಲಾಗಿತ್ತು. ಮದ್ದೂರು ತಾಲ್ಲೂಕು ಬೋರ್ಡ್ ನೆರವಿನಿಂದ ಸುಮಾರು 50 ಹೊಲಿಗೆ ಯಂತ್ರಗಳನ್ನು ರಿಯಾಯಿತಿ ದರದಲ್ಲಿ ನೀಡಿ ಉಳಿದ ಸುಮಾರು 20 ಯಂತ್ರಗಳನ್ನು ಶಾಲೆಯಲ್ಲಿ ತರಬೇತಿಗಾಗಿ ಇಡಲಾಗಿತ್ತು. ಇದಕ್ಕೆ ತಗಲುವ ವೆಚ್ಚವನ್ನು ತಾಲ್ಲೂಕು ಬೋರ್ಡ್ ವತಿಯಿಂದ ಭರಿಸಲಾಗುತ್ತಿತ್ತು. ಮುಂದೆ ಕಾಲೇಜು ಪ್ರಾರಂಭಗೊಂಡ ನಂತರ 1973ರ ಸುಮಾರಿನಲ್ಲಿ ಎನ್.ಎಸ್.ಎಸ್. ವತಿಯಿಂದ ಮಂಡ್ಯದ ಯುವಜನ ಕೇಂದ್ರದ ನೆರವಿನೊಡನೆ ಕಾಲೇಜು ವಿದ್ಯಾರ್ಥಿನಿಯರಿಗಾಗಿ ನುರಿತ ಶಿಕ್ಷಕಿಯ ಮಾರ್ಗದರ್ಶನದಲ್ಲಿ ಹೊಲಿಗೆ, ಎಂಬ್ರಾಯಿಡರಿ, ರಂಗೋಲಿ, ಕ್ಯಾಂಡಲ್, ಮೇಣದ ಬತ್ತಿ ತಯಾರಿಕೆ ಮುಂತಾದ ಗೃಹ ಕೈಗಾರಿಕಾ ತರಬೇತಿ ನೀಡಲಾಗುತ್ತದೆ[28]. ಸ್ಥಳೀಯ ರೋಟರಿ ಸಂಸ್ಥೆಯ ನೆರವಿನೊಡನೆ, ರಾಜ್ಯ ಮತ್ತು ಜಿಲ್ಲಾ ತರಬೇತಿ ಕೇಂದ್ರದ ಸಹಕಾರದೊಡನೆ ಗುಡಿ ಕೈಗಾರಿಕೆ ತರಬೇತಿ ನೀಡಿ ಸ್ವಯಂ ಉದ್ಯೋಗ ಪ್ರಾರಂಭಿಸಲು ಅನುವಾಗುವಂತೆ ಸರ್ಕಾರದ ಇಲಾಖೆಯ ಸರ್ಟಿಫಿಕೇಟ್ ನೀಡಲಾಗುತ್ತಿತ್ತು. ಇಲ್ಲಿ ತರಬೇತಿ ಪಡೆದ ಕೆಲವರು ಸ್ಕ್ರೀನ್ ಪ್ರಿಂಟಿಂಗ್, ಬ್ಯುಟಿಷಿಯನ್, ಸೀಮೆಸುಣ್ಣ, ಕ್ಯಾಂಡಲ್ ತಯಾರಿಕೆ ಮುಂತಾದ ಸ್ವ ಉದ್ಯೋಗ ಕೈಗೊಂಡಿದ್ದಾರೆ. ಆರ್ಥಿಕವಾಗಿ ಸದೃಢರಾಗಲು ಗುರುದೇವರಹಳ್ಳಿ ಮಾದೇಗೌಡರು ಅನುಕೂಲಮಾಡಿ ಕೊಟ್ಟಿದ್ದಾರೆ.

ಕೃಷಿ ತರಬೇತಿ ನೀಡಲು ಶಾಲೆಯ ವಿಶಾಲ ಆವರಣವನ್ನು ಸದುಪಯೋಗ ಪಡಿಸಿಕೊಳ್ಳಲು ತೋಟಗಾರಿಕೆ ವಿಭಾಗವನ್ನು ಪ್ರಾರಂಭಿಸಲಾಯಿತು. ಇದಕ್ಕೆ ತೋಟಗಾರಿಕೆ ತರಬೇತಾದ ಶಿಕ್ಷಕರನ್ನು ನೇಮಿಸಿಕೊಳ್ಳಲಾಯಿತು. ತೋಟಗಾರಿಕೆಗೆ ನೀರಾವರಿ ಸೌಕರ್ಯಕ್ಕಾಗಿ ಒಂದು ಬಾವಿ ತೋಡಿಸಿ, ನೀರಾವರಿಗಾಗಿ ಪಂಪ್‌ಸೆಟ್ ಹಾಕಿಸಿ ತೋಟಗಾರಿಕೆಯ ಮೂಲಕ ಆವರಣದಲ್ಲಿ ತೆಂಗು, ಸೀಬೆ, ಸಪೋಟ, ಗಿಡಗಳನ್ನು ನೆಡಲಾಯಿತು. ಇದರಿಂದ ವಿದ್ಯಾರ್ಥಿಗಳಿಗೆ ಕೃಷಿ ತರಬೇತಿ ನೀಡಿದ್ದಲ್ಲದೆ ಅವುಗಳಿಂದ ಬಂದ ಫಸಲನ್ನು ಮಾರಾಟ ಮಾಡುವ ಮೂಲಕ ಸಂಸ್ಥೆಗೆ ಆದಾಯ ಕೂಡ ಬಂದಿತು. ಅಲ್ಲದೆ ರೈತರಿಗೆ ನೆರವಾಗುವಂತೆ ನರ್ಸರಿ ಪ್ರಾರಂಭಿಸಿ ಟೊಮ್ಯಾಟೊ, ಬದನೆ, ಮೆಣಸಿನಕಾಯಿ ಮುಂತಾದ ತರಕಾರಿ ಸಸಿಗಳನ್ನು ಬೆಳೆಯುವುದು, ಈರುಳ್ಳಿ, ಹೆಬ್ಬಾಳು, ಅವರೆ, ಟೊಮ್ಯಾಟೊ ಮುಂತಾದ ತರಕಾರಿ ಬೆಳೆದು ವಸತಿ ನಿಲಯಕ್ಕೆ ಬಳಸುವುದಲ್ಲದೆ ಮಾರಾಟ ಸಹ ಮಾಡಲಾಗುತ್ತಿತ್ತು. ಮುಂದೆ ಇದೇ 'ರೈತರ ಸಂಘ'ವೆಂದು ರೂಪಗೊಂಡಿತು. ಕೃಷಿ, ರೇಷ್ಮೆ ಕೃಷಿ, ತೋಟಗಾರಿಕೆ, ಅರಣ್ಯ ಇಲಾಖೆ ಮುಂತಾದ ಇಲಾಖೆಗಳೊಡನೆ ಸಂಪರ್ಕ ಸಾಧಿಸಿ ಮಂಡ್ಯದ ವಿಸಿ ಫಾರಂನೊಡನೆ ಒಡಂಬಡಿಕೆ ಮಾಡಿಕೊಂಡು ಕೃಷಿ ವಿಜ್ಞಾನಿಗಳನ್ನು ಇಲ್ಲಿಗೆ ಕರೆಸಿ ರೈತರಿಗೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ಮತ್ತು ವಿವಿಧ ರೀತಿಯ ಸರಕುಗಳನ್ನು ವಿತರಿಸುವ ವ್ಯವಸ್ಥೆ ಮಾಡಲಾಯಿತು. ಆಧುನಿಕ ಮತ್ತು ನೈಸರ್ಗಿಕ ಕೃಷಿ ಪದ್ಧತಿಗೆ ಪರಿಣಿತರಿಂದ

ಮಾರ್ಗದರ್ಶನ ನೀಡಲಾಗುತ್ತಿತ್ತು. ಮುಂದೆ ಕಾಲೇಜಿನಲ್ಲಿ ಆರಂಭಗೊಂಡ ಕೃಷಿ, ರೇಷ್ಮೆ, ಹೈನುಗಾರಿಕೆ, ತೋಟಗಾರಿಕೆ, ಪರಿಸರ ಅಧ್ಯಯನ ಮುಂತಾದ ಕೋರ್ಸುಗಳನ್ನು ಆರಂಭಿಸಿ ರೈತರಿಗೆ ಅನೇಕ ಅನುಕೂಲಗಳನ್ನು ಮಾಡಿಕೊಡಲಾಗಿದೆ.

ಶಾಲೆಯ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಪೌಷ್ಠಿಕ ಆಹಾರ ನೀಡಲು ಕಾಲೇಜು ಆವರಣದಲ್ಲಿ ಒಂದು ಕೋಳಿ ಸಾಕಾಣಿಕೆ ಕೇಂದ್ರ ಪ್ರಾರಂಭಿಸಲಾಯಿತು. ಇದಕ್ಕೆ ತರಬೇತುದಾರ ಮೇಲ್ವಿಚಾರಕರೊಬ್ಬರನ್ನು ನೇಮಿಸಿ ಕೋಳಿ ಸಾಕಾಣಿಕೆ ಮನೆ ನಿರ್ಮಿಸಿ 120 ಫಾರಂ ಕೋಳಿಗಳನ್ನು ಸಾಕಲಾಗುತ್ತಿತ್ತು. ಪ್ರತಿನಿತ್ಯ ಸುಮಾರು 100 ಮೊಟ್ಟೆಗಳು ಸಂಗ್ರವಾಗುತ್ತಿದ್ದವು. ಇದರಿಂದ ವಿದ್ಯಾರ್ಥಿಗಳ, ನೌಕರರ ಹಾಗೂ ಸಾರ್ವಜನಿಕರ ಆರೋಗ್ಯ ಹಾಗೂ ದೇಹ ಪುಷ್ಟಿದಾಯಕವಾಗಲು ಅನುಕೂಲವಾಯಿತು. ಇಲ್ಲಿ ಹಸು ಎಮ್ಮೆ, ಎತ್ತು, ಹೋರಿ ಹಾಗೂ ದನಕರುಗಳನ್ನು ಸಾಕಿ ಅವುಗಳನ್ನು ಕೃಷಿ ಕೆಲಸಕ್ಕೂ ಬಳಸಲಾಗುತ್ತಿತ್ತು. ಅಲ್ಲದೆ ಇವುಗಳಿಂದ ಬಂದ ಹಾಲು ಮತ್ತು ಬೆಣ್ಣೆ, ತುಪ್ಪ ಮಜ್ಜಿಗೆ ಮುಂತಾದವುಗಳನ್ನು ಹಾಸ್ಟೆಲ್‌ನ ವಿದ್ಯಾರ್ಥಿಗಳಿಗೆ ಹಾಗೂ ಅಧ್ಯಾಪಕರಿಗೆ ಬಳಸಲಾಗುತ್ತಿತ್ತು. ಹೋರಿ ಒಂದನ್ನು ಸಾಕುವ ಮೂಲಕ ಹಸುಗಳ ಫಲವತ್ತತೆಗೆ ಬಳಸಲಾಗುತ್ತಿತ್ತು. ಮುಂದೆ ಹೈನುಗಾರಿಕೆ ತರಗತಿಗೆ ಇದು ನಾಂದಿಯಾಯಿತು. ಇದೇ ರೀತಿ ತೋಟದ ಮಧ್ಯೆ ಮೀನು ಹೊಂಡ ತೆಗೆದು ಕೆಲವು ಜಾತಿಯ ಮೀನು ಮರಿಗಳ ಉತ್ಪಾದನೆಯನ್ನು ಮಾಡಲಾಗಿತ್ತು. ಅಲ್ಲದೆ ವಸತಿ ಶಾಲೆಗಳ ಬಳಿ ಪ್ರತ್ಯೇಕ ಕಟ್ಟಡದಲ್ಲಿ ದನಕರುಗಳಿಗೆ, ಆಳುಗಳಿಗೆ, ಭೋಜನ ಶಾಲೆ ಸಹ ವ್ಯವಸ್ಥೇ ಮಾಡಲಾಗಿದೆ. ಅಲ್ಲದೆ ಭತ್ತ, ಕಬ್ಬು, ಹಿಪ್ಪುನೇರಳೆ ಮುಂತಾದ ಬೆಳೆ ಬೆಳೆಯುವುದರ ಜೊತೆಗೆ ಸರ್ವೆ, ಬಿದಿರು, ಮತ್ತಿತರ ಪಾಕೆಟ್ ಸಸಿ ಬೆಳೆಸಲಾಗುತ್ತಿದೆ. ಶಾಲೆಯ ಅವರಣದಲ್ಲಿಯೇ ಹಿಪ್ಪು ನೇರಳೆ ತೋಟ, ರೇಷ್ಮೆ ಹುಳು ಸಾಕಾಣೆ ಕೇಂದ್ರ, ವ್ಯವಸ್ಥೆ ಮಾಡಲಾಗಿದೆ. ಕಬ್ಬನ್ನು ಸಕ್ಕರೆ ಕಾರ್ಖಾನೆಗೂ, ರೇಷ್ಮೆ ಗೂಡನ್ನು ಕೊಳ್ಳೇಗಾಲ, ರಾಮನಗರ ರೇಷ್ಮೆ ಗೂಡಿನ ಮಾರುಕಟ್ಟೆಗೂ ಸರಬರಾಜು ಮಾಡುವ ಮೂಲಕ ಆದಾಯ ಸಂಗ್ರಹಿಸಿ ಸಂಸ್ಥೆಯ ಬೆಳವಣಿಗೆಗೆ ಶ್ರಮಿಸಲಾಗಿದೆ[29]. ಈ ಮೂಲಕ ಜಿ.ಮಾದೇಗೌಡರು ಸುತ್ತ-ಮುತ್ತಲಿನ ನೂರಾರು ಹಳ್ಳಿಯ ಜನಗಳಿಗೆ ಸ್ವ-ಉದ್ಯೋಗವನ್ನು ಪಡೆದುಕೊಳ್ಳುವಲ್ಲೂ ಕಾರಣೀಭೂತರಾಗಿದ್ದಾರೆ. ಪ್ರಮುಖವಾಗಿ ಅವರಿಗೆ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಇದರಿಂದ ಮಹಿಳೆಯರು, ಪುರುಷರು ಸ್ವ-ಉದ್ಯೋಗದ ಮೂಲಕ ಸ್ವಾವಲಂಬಿ ಜೀವನವನ್ನು ನಡೆಸುತ್ತಿದ್ದಾರೆ. ಅಲ್ಲದೆ ಆರ್ಥಿಕವಾಗಿಯೂ ಸದೃಢವಾಗಿದ್ದು, ಉತ್ತಮ ಕೌಟುಂಬಿಕ ಜೀವನವನ್ನು ನಿರ್ವಹಿಸುತ್ತಿದ್ದಾರೆ. ಪಟ್ಟಣ ಪ್ರದೇಶಗಳಿಗೆ ವಲಸೆ ಹೋಗುವುದನ್ನು ಈ ಕಾರ್ಯಕ್ರಮಗಳು ತಪ್ಪಿಸುವಲ್ಲಿ ಯಶಸ್ವಿಯಾಗಿವೆ.

### 5.2.4 ಗಾಂಧೀಭವನ ಮತ್ತು ಆಸ್ಪತ್ರೆ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

ಹಳ್ಳಿಯನ್ನು ನಗರ ಸೌಲಭ್ಯಗಳುಳ್ಳ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಬದಲಾವಣೆಯ ಕೇಂದ್ರವಾಗಿ ಪರಿವರ್ತಿಸಬಹುದೆಂಬ ಗಾಂಧೀ ಕಲ್ಪನೆಯ ಕನಸನ್ನು ನನಸಾಗಿ ಸಾಕಾರಗೊಳಿಸಿದ್ದಾರೆ. ಗಾಂಧಿ ಆದರ್ಶಗಳನ್ನು ಜನ ಮೈಗೂಡಿಸಿಕೊಳ್ಳಬೇಕು ಎನ್ನುವುದು ಗೌಡರ ಹಂಬಲ. ಅದಕ್ಕಾಗಿ ಗಾಂಧೀಭವನ ಒಂದನ್ನು ನಿರ್ಮಿಸಿ ಅಲ್ಲಿ ಗಾಂಧೀಜಿಯವರ ಹೋರಾಟದ ಮುಖ್ಯ ಭಾವಚಿತ್ರಗಳನ್ನು ಇರಿಸಿ, ಜನರಿಗೆ ಗಾಂಧಿ ಬಗೆಗೆ ಅರಿವು ಮೂಡಿಸಬೇಕೆಂದು ಹೆಬ್ಬಯಕ್ಕೆ ಹೊಂದಿದ್ದರು. ಸಂಸತ್ ಸದಸ್ಯರಾದ ಮೇಲೆ ಕನಸನ್ನು ಸಾಕಾರಗೊಳಿಸಲು ಯೋಚಿಸತೊಡಗಿದ್ದರು. ಇದಕ್ಕಾಗಿ ಸಂಸದರ ನಿಧಿಯಿಂದ ಐವತ್ತು ಲಕ್ಷ ರೂ.ಗಳನ್ನು ಮೀಸಲಿರಿಸಿದ್ದರು. ಮಂಡ್ಯ ನಗರದಲ್ಲಿ ಗಾಂಧಿಭವನ ನಿರ್ಮಾಣ ಮಾಡಲು ಉದ್ದೇಶಿಸಿ ಸ್ಥಳಕ್ಕಾಗಿ ಜಿಲ್ಲಾಧಿಕಾರಿಗಳನ್ನು ಕೇಳಿಕೊಂಡರು. ಅವರು ನಗರ ಮಧ್ಯದಲ್ಲಿ ಯಾವ ಸ್ಥಳವೂ ಉಳಿದಿಲ್ಲ, ನಗರದ ಹೊರಭಾಗದಲ್ಲಿ ನೀಡುವುದಾಗಿ ಹೇಳಿದರು. ಆದರೆ ಅವರು ನಗರದ ಮಧ್ಯದಲ್ಲಿ ಸ್ಥಳ ನೀಡಿದರೆ ಉಪಕಾರವಾಗುತ್ತದೆಂದು ಅವರಿಗೆ ಮನವರಿಗೆ ಮಾಡಿಕೊಟ್ಟರು. ನಗರದ ವಿ.ವಿ.ರಸ್ತೆಗೆ ಹೊಂದಿಕೊಂಡಂತೆ ಒಂದು ಸ್ಥಳವನ್ನು ಜನತಾ ಬಜಾರ್‌ನ ವಿಸ್ತರಣೆಗಾಗಿ ನೀಡಿದ್ದರು. ಮಂಜೂರಾದ ಮೂರು ವರ್ಷಗಳಲ್ಲಿ ಕಟ್ಟಡ ನಿರ್ಮಾಣ ಮಾಡಬೇಕೆಂಬುದು ಒಪ್ಪಂದವಾಗಿತ್ತು. ಅವರು ಆ ಅವಧಿಯಲ್ಲಿ ಬಳಸಿಕೊಳ್ಳದ ಕಾರಣ ನಿಯಮದಂತೆ ಆ ಸ್ಥಳದ ಮಂಜೂರಾತಿ ರದ್ದಾಗಿದೆಯೆಂದು ಅರಿತ ಜಿಲ್ಲಾಧಿಕಾರಿಗಳು ಗೌಡರನ್ನು ಕರೆದು ಆ ಸ್ಥಳವನ್ನು ಗಾಂಧಿಭವನ ನಿರ್ಮಾಣಕ್ಕೆ ನೀಡಿದರು. ಆದರೆ ಜನತಾ ಬಜಾರಿನವರು ಹೈಕೋರ್ಟಿನ ಮೆಟ್ಟಿಲೇರಿದರು. ಕೊನೆಗೆ ಒಂದು ತೀರ್ಮಾನವಾಗಿ ಆ ಸ್ಥಳವನ್ನು ಇಬ್ಬರಿಗೂ ಅರ್ಧರ್ಧ ಹಂಚಿಕೊಟ್ಟರು.

ಈ ವೇಳೆಗೆ ಸಾಕಷ್ಟು ವಿಳಂಬವಾಗಿದ್ದರಿಂದ ಇವರು ಮೀಸಲಿರಿಸಿದ್ದ ಹಣ ಸಕಾಲದಲ್ಲಿ ಉದ್ದೇಶಿತ ಕಾರ್ಯಕ್ಕೆ ಬಳಕೆಯಾಗದಿದ್ದರೆ ಸರ್ಕಾರಕ್ಕೆ ವಾಪಸ್ಸಾಗುತ್ತದೆಂಬ ಕಾರಣದಿಂದ, ಸಂಸದರ ನಿಧಿಯಿಂದ ಭಾರತೀನಗರದ ಭಾರತೀಕಾಲೇಜಿನ ಆವರಣದಲ್ಲಿ ಒಂದು ಗಾಂಧಿ ಭವನವನ್ನು ನಿರ್ಮಿಸಿದ್ದರು. ಇದಾದ ಮೇಲೆ ಮಂಡ್ಯದಲ್ಲಿ ಈಗಿರುವ ಸ್ಥಳ ಜಿಲ್ಲಾಧಿಕಾರಿಗಳಿಂದ ದೊರೆತ ಮೇಲೆ ಸಾರ್ವಜನಿಕರಿಂದ ಹಣ ಸಂಗ್ರಹಿಸಿ ಉದ್ದೇಶಿತ ಗಾಂಧಿ ಭವನವನ್ನು ನಿರ್ಮಿಸಿದ್ದಾರೆ. ಇಲ್ಲಿ ಪೂರ್ಣವಾದ ಸ್ಥಳ ದೊರೆತಿದ್ದರೆ ಇನ್ನೂ ಉತ್ತಮವಾಗಿ ಗಾಂಧಿಭವನ ನಿರ್ಮಿಸಲು ಸಾಧ್ಯವಾಗುತ್ತಿತ್ತು ಎಂಬುದು ಗೌಡರ ಅಭಿಪ್ರಾಯ.[29ಎ] ಎರಡೂ ಕಡೆ ಇರುವ ಗಾಂಧಿಭವನಗಳಲ್ಲಿ ಗಾಂಧೀಜಿಯವರ ಹೋರಾಟದ ಸಮಗ್ರ ದರ್ಶನವಾಗುವಂತೆ ಭಾವಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಸಂಸ್ಥೆಯ ಅಧ್ಯಕ್ಷರಾದ ಜಿ.ಮಾದೇಗೌಡರ ಮೇಲೆ ಮಹಾತ್ಮ ಗಾಂಧೀಜಿಯವರ ಪ್ರಭಾವ

ಗಾಢವಾದುದು. ವಿದ್ಯಾರ್ಥಿಗಳಿಗೆ ಗಾಂಧೀಜಿಯವರ ಬದುಕು, ಸಂದೇಶಗಳ ಪರಿಚಯವಾಗಬೇಕೆಂಬ ಸದುದ್ದೇಶದಿಂದ ಕಾಲೇಜಿನ ಹೃದಯ ಭಾಗದಲ್ಲಿ ಗಾಂಧೀ ಭವನ ನಿರ್ಮಿಸಿದ್ದಾರೆ. ಇದೊಂದು ಅಪರೂಪದ ಭವನ ಗಾಂಧೀಜಿಯವರ ನಾನಾ ಚಿತ್ರಗಳಿಂದ ಅವರ ಜೀವನದ ವಿವಿಧ ಕ್ಷೇತ್ರದ ಕಾರ್ಯಗಳು ವ್ಯಕ್ತವಾಗುತ್ತವೆ. ದಿವ್ಯ ಮೌನಕ್ಕೂ ಪ್ರೇರಣೆ ನೀಡುತ್ತಾರೆ. ಜಡಚೇತನಕ್ಕೆ ಅಮೃತ ಸಿಂಚನ ನೀಡುವ ಚಿತ್ರಸಂಚಯ ಗಾಂಧಿಭವನದಲ್ಲಿದೆ. ಚಿತ್ರರೂಪಿಯಾಗಿರುವ ಗಾಂಧೀ ಎಂಥವರನ್ನು ಸೂಕ್ಷ್ಮವಾಗಿ ಕಲಕಿ ಬಿಡುತ್ತಾರೆ. ಸಮ್ಮೋಹನಗೊಳಿಸುತ್ತಾರೆ. ಗಾಂಧಿ ಎಲ್ಲರ ಮನಹೃದಯಗಳಲ್ಲಿ ನೆಲಸಬೇಕು ಎಂಬ ಹಂಬಲದಿಂದ ಈ ಭವನ ಮೂಡಿ ನಿಂತಿದೆ. 2ನೇ ಅಕ್ಟೋಬರ್ 1997ರಂದು ಮಹಾದೇವಿ ತಾಯಿ ಅವರು ಹಿರಿಯ ಗಾಂಧೀವಾದಿಗಳಾದ ನಿಟ್ಟೂರು ಶ್ರೀನಿವಾಸರಾವ್‌ರವರ ಅಧ್ಯಕ್ಷತೆಯಲ್ಲಿ ಎಂ.ಎನ್. ಜೋಯಿಸ್, ಜಿ.ನಾರಾಯಣ, ಪ್ರಭುಶಂಕರ ಮುಂತಾದ ಗಾಂಧಿವಾದಿಗಳ ಸಮ್ಮುಖದಲ್ಲಿ ಈ ಭವನವನ್ನು ಉದ್ಘಾಟಿಸಿದರು[30]. ಅಲ್ಲದೆ ಮಧ್ಯಾಹ್ನದ ಊಟದ ವಿರಾಮದ ವೇಳೆ ಗಾಂಧಿ ಭವನದಲ್ಲಿ ಭಕ್ತಿಗೀತೆ, ಭಗವದ್ಗೀತೆ, ರಾಮಾಯಣ, ಮಹಾಭಾರತ ಮುಂತಾದ ಕ್ಯಾಸೆಟ್‌ಗಳನ್ನು ಹಾಕಲಾಗು ವುದು. ವಿದ್ಯಾರ್ಥಿಗಳಿಗೆ ಪ್ರೇರಣೆ ನೀಡುವ ಸೂಕ್ತಿಗಳನ್ನು ಅಲ್ಲಲ್ಲಿ ಬರೆಸಲಾಗಿದೆ. ವಿದ್ಯಾರ್ಥಿಗಳ ನೈತಿಕ ನೆಲೆಗಟ್ಟನ್ನು, ಸುಭದ್ರಗೊಳಿಸುವ ಹಾಗೂ ಅವರ ಜೀವನಕ್ರಮ ಯಶಸ್ವಿಯಾಗಿ ಸಾಗಲು ತಕ್ಕ ಮಾರ್ಗದರ್ಶನ, ಸನ್ನಿವೇಶ ದೊರಕುವ ಎಲ್ಲಾ ರೀತಿಯ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಗಾಂಧಿಗ್ರಾಮ ಒಂದನ್ನು ನಿರ್ಮಿಸಬೇಕೆಂಬ ಕನಸು ಗೌಡರಲ್ಲಿ ಇನ್ನೂ ಹಾಗೇ ಉಳಿದುಕೊಂಡಿದೆ[30ಎ]. ಅವರು ಗಾಂಧೀಜಿಯವರ ಕಲ್ಪನೆಯಂತೆ ಗ್ರಾಮಸ್ವರಾಜ್ಯವನ್ನು ರೂಪಿಸಬೇಕೆಂದು ಕೊಂಡಿದ್ದಾರೆ. ಅದಕ್ಕಾಗಿ ಒಂದು ಗ್ರಾಮವನ್ನು ದತ್ತು ತೆಗೆದುಕೊಂಡು ಅಲ್ಲಿ ಸ್ವ-ಉದ್ಯೋಗ ಕಾರ್ಯಕ್ರಮಗಳನ್ನು ಸೃಷ್ಟಿಸುವುದು. ಯುವಕರು ನಗರ ಪ್ರದೇಶಗಳಿಗೆ ವಲಸೆ ಹೋಗದಂತೆ ಎಲ್ಲಾ ಸೌಲಭ್ಯಗಳು ಆ ಗ್ರಾಮದಲ್ಲೆ ದೊರೆಯಬೇಕೆಂಬುದು ಗೌಡರ ಬಹುದೊಡ್ಡ ಕನಸಾಗಿದೆ.

1969ನೇ ಇಸವಿಯಲ್ಲಿ ಮಂಡ್ಯ ಸಕ್ಕರೆ ಕಾರ್ಖಾನೆ ನಷ್ಟದಲ್ಲಿದ್ದು, ನೌಕರರಿಗೆ ಸಂಬಳ ನೀಡಲು ದುಡ್ಡಿಲ್ಲದಂಥ ದುಸ್ಥಿತಿ ತಲುಪಿತ್ತು. ಇಂತಹ ಸಂದರ್ಭದಲ್ಲಿ ಜಿ.ಮಾದೇಗೌಡರು ಇದರ ಅಧ್ಯಕ್ಷದರಾದರು. ಮಂಡ್ಯ ಸಕ್ಕರೆ ಕಾರ್ಖಾನೆಯ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಮೊದಲ ದಿನ ನಡೆದ ಘಟನೆ ಸಕ್ಕರೆ ಕಂಪನಿಗೆ ಸೇರಿದ್ದ ಬಿ.ಹೊಸೂರಿನಲ್ಲಿದ್ದ 65 ಎಕರೆ ತೋಟ ಮತ್ತು 70ಕ್ಕಿಂತ ಹೆಚ್ಚು ಮನೆಗಳಿದ್ದ ಜಾಗ ಅಂದು ಹರಾಜಿಗಿತ್ತು. ಆಗ ಕಂಪನಿಯ ಕಾರ್ಯದರ್ಶಿಗಳ ಜೊತೆ ಗೌಡರು ಹರಾಜಿನ ಜಾಗಕ್ಕೆ ಹೋದರು[31]. ನೂರಾರು ಮಂದಿ ಬಿಡ್‌ದಾರರು ಅಲ್ಲಿನ ಆಸ್ತಿ ಕೊಳ್ಳಲು ಆಗಲೆ ಅಲ್ಲಿ ಸೇರಿದ್ದರು. ಗೌಡರಿಗೆ ಆ ಜಾಗ, ತೋಟ, ಅಲ್ಲಿನ ಮನೆಗಳು ಇದನ್ನೆಲ್ಲ ನೋಡಿ

ಇದನ್ನು ಸಾರ್ವಜನಿಕ ಸೇವಾ ಕೇಂದ್ರವಾಗಿ ಪರಿವರ್ತಿಸಿದರೆ ಹೇಗೆ ಎಂಬ ಆಲೋಚನೆ ಬಂತು ತಕ್ಷಣ ಹರಾಜನ್ನು ತಾತ್ಕಾಲಿಕವಾಗಿ ನಿಲ್ಲಿಸುವಂತೆ ಆದೇಶ ನೀಡಿದರು. ಮಂಡ್ಯಕ್ಕೆ ಬಂದ ತಕ್ಷಣ ಶಂಕರಗೌಡರ ಜೊತೆ ನಮ್ಮ ಜಿಲ್ಲೆಯ ಕ್ಷಯ ರೋಗಿಗಳೆಲ್ಲ ದೂರದ ಮೈಸೂರಿನ ಸ್ಯಾನಿಟೋರಿಯಂಗೆ ಹೋಗುತ್ತಿದ್ದಾರೆ, ನಮ್ಮ ಜಿಲ್ಲೆಯ ಬಿ.ಹೊಸೂರಿನಲ್ಲಿ ಕ್ಷಯರೋಗಿಗಳಿಗೆ ಬೇಕಾದ ಆಸ್ಪತ್ರೆ ತೆಗೆದರೆ ಹೇಗೆ ಆ ಜಾಗ ಎತ್ತರವಾಗಿದೆ ಪ್ರಶಾಂತವಾಗಿದೆ, ರೋಗಿಗಳಿಗೆ ಇರಲು ಬೇಕಾದ ಕಟ್ಟಡಗಳಿವೆ. ಸರ್ಕಾರದಿಂದ ಒಂದು ಸರ್ಕಾರಿ ಆಸ್ಪತ್ರೆ ಮಂಜೂರು ಮಾಡಿಸಿದರೆ ಜಿಲ್ಲೆಗೆ ಒಂದು ಸುಸಜ್ಜಿತ ಕ್ಷಯರೋಗ ಆಸ್ಪತ್ರೆ ದೊರಕುತ್ತೆ ಎಂದು ಹೇಳಿದರು. ಶಂಕರಗೌಡರು ಇದಕ್ಕೆ ಒಪ್ಪಿದರು. ಗೌಡರು ತಕ್ಷಣ ಆಗಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರನ್ನು ಸಂಪರ್ಕಿಸಿ ಆಸ್ಪತ್ರೆ ಪ್ರಸ್ತಾಪ ಮುಂದಿಟ್ಟು, ಅವರಿಂದ ಒಪ್ಪಿಗೆ ಪಡೆದರು. ಆಗಿನ ಆರೋಗ್ಯ ಮಂತ್ರಿಗಳಾದ ವೈ.ರಾಮಕೃಷ್ಣ ಅವರು ಒಂದು ವಾರದಲ್ಲೇ ಬಂದು ಸ್ಥಳ ಪರಿಶೀಲಿಸಿ ಇದು ಆಸ್ಪತ್ರೆಗೆ ಸೂಕ್ತ ಜಾಗ ಎಂದು ಸರ್ಕಾರಕ್ಕೆ ವರದಿ ನೀಡಿದರು. ಹದಿನೈದು ದಿನದಲ್ಲಿ ಮುಖ್ಯಮಂತ್ರಿಗಳಿಂದ ಬಿ.ಹೊಸೂರಿನಲ್ಲಿ ಮಹಾತ್ಮಗಾಂಧಿ ಸ್ಮಾರಕ ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ ಪ್ರಾರಂಭೋತ್ಸವ ಆಯಿತು. ಗೌಡರ ಕರ್ತೃತ್ವ ಶಕ್ತಿಗೆ ಇದೊಂದು ಉತ್ತಮ ಉದಾಹರಣೆ. ಇಷ್ಟೆ ಅಲ್ಲದೆ 1989ರಲ್ಲಿ ಗ್ರಾಮೀಣ ಜನತೆಯ ಆರೋಗ್ಯಕ್ಕಾಗಿ ಗೌಡರು ತಮ್ಮ ಹುಟ್ಟಿದ ಊರಾದ ಮದ್ದೂರು ತಾಲ್ಲೂಕು ಗುರುದೇವರಹಳ್ಳಿಯಲ್ಲಿದ್ದ ಬೆಲೆ ಬಾಳುವ ತಮ್ಮ ತೆಂಗಿನ ತೋಟದ ಜೊತೆಗೆ ಮನೆಯನ್ನು ರಾಜ್ಯ ಸರ್ಕಾರಕ್ಕೆ ದಾನ ಮಾಡಿದರು. ಅಲ್ಲಿ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರದ ಸ್ಥಾಪನೆ ಮಾಡಿಸಿದ್ದಾರೆ. ಈ ಮೂಲಕ ತಮ್ಮ ಊರಿನ ಜನರಿಗೆ ಉಚಿತ ಆರೋಗ್ಯ ಸೌಲಭ್ಯವನ್ನು ದೊರಕಿಸಿಕೊಡುವಲ್ಲಿ ಸಫಲರಾಗಿದ್ದಾರೆ.

### 5.2.5 ಆತ್ಮಲಿಂಗೇಶ್ವರ ದೇವಾಲಯ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

ಕಾಳಮುದ್ದನದೊಡ್ಡಿಯಲ್ಲಿ ಶೈಕ್ಷಣಿಕ, ಆರ್ಥಿಕ ಅಭಿವೃದ್ಧಿಯ ಜೊತೆಗೆ ಧಾರ್ಮಿಕ ಮತ್ತು ಸಾಮಾಜಿಕ ಪುನರುಜ್ಜೀವನಕ್ಕಾಗಿ ಇಲ್ಲಿ ಯಾವುದೇ ದೇವಾಲಯ ಇಲ್ಲದ್ದನ್ನು ಮನಗಂಡ ಜಿ.ಮಾದೇಗೌಡರು ದೇವಾಲಯವೊಂದನ್ನು ನಿರ್ಮಿಸಲು ಪ್ರಯತ್ನ ಮಾಡಿದರು. ಸ್ಥಳೀಯ ಗ್ರಾಮ ಕರಡಕೆರೆ ಹತ್ತಿರದ ಬೋಳುಗುಡ್ಡದಲ್ಲಿ ಹಿತೈಷಿಗಳ ಹಾಗೂ ಮುಖಂಡರ ಸಲಹೆಯಂತೆ ದೇವಾಲಯ ನಿರ್ಮಿಸಲು ನಿರ್ಧರಿಸಿದರು. ಅದಕ್ಕೆ ಕರಡಕೆರೆ ಆಂಜನೇಯ ಸ್ವಾಮಿಯ ನೆನಪಿಗಾಗಿ ಹನುಮಂತ ನಗರವೆಂದು ನಾಮಕರಣ ಮಾಡಿದರು. ಇದೇ ಇಂದು ಪ್ರವಾಸೋದ್ಯಮ ಕೇಂದ್ರವಾಗಿ, ಸಾರ್ವಜನಿಕರು ರಾಜ್ಯ ಮತ್ತು ಕೇಂದ್ರ ಸರ್ಕಾರದ ನೆರವಿನಿಂದ ಶ್ರೀ ಆತ್ಮಲಿಂಗೇಶ್ವರ ಕ್ಷೇತ್ರವೆಂದು

ಪ್ರಸಿದ್ಧವಾಗಿದೆ[32]. ಮಂಡ್ಯದಿಂದ ಕಾಳಮುದ್ದನದೊಡ್ಡಿ ರಸ್ತೆಯಲ್ಲಿ ಹದಿನಾರು ಕಿ.ಮೀ. ದೂರದಲ್ಲಿ ಆತ್ಮಲಿಂಗೇಶ್ವರ ಕ್ಷೇತ್ರವಿದೆ. ರಸ್ತೆಯ ಪೂರ್ವಕ್ಕೆ ಪ್ರವೇಶದ್ವಾರವಿದೆ. ಇದರ ಎಡಪಕ್ಕದಲ್ಲಿ ಪಾವನಗಂಗಾ ಸರೋವರವಿದ್ದು, ಸ್ನಾನ ಮಾಡಬಹುದಾಗಿದೆ. ಈ ಸರೋವರ ವಿಶಾಲವಾದದ್ದು ಸುತ್ತಲೂ ಕಲ್ಲಿನ ಹಂತಗಳನ್ನು ನಿರ್ಮಿಸಿ ಸಿಮೆಂಟಿನಿಂದ ಕೂರಿಸಲಾಗಿದೆ. ಪಾವನಗಂಗಾದ ಪಕ್ಕ ಪ್ರಸಾದ ನಿಲಯ ಹಾಗೂ ರಥ ಮಂಟಪವಿದೆ. ಮುಂದೆ ಆತ್ಮಲಿಂಗೇಶ್ವರ ಕ್ಯಾಂಟೀನ್ ಹಾಗೂ ಅಂಗಡಿ ಇವೆ. ಪಾವನಗಂಗೆಯಲ್ಲಿ ಮಿಂದು ಮುಂದೆ ಶಿವಪಥದ ಮೂಲಕ ದೇವಸ್ಥಾನ ಪ್ರವೇಶಿಸಬಹುದು. ಮೆಟ್ಟಿಲುಗಳ ಎಡಬದಿಯಲ್ಲಿಯೇ ಅರಳಿಕಟ್ಟೆ ಇದ್ದು ಇಲ್ಲಿ ಸಾಮೂಹಿಕ ವಿವಾಹ ಜರುಗುತ್ತವೆ. ಶಿವಪಥದ ಮೆಟ್ಟಿಲುಗಳನ್ನು ಕೆಂಗಲ್ ಹನುಮಂತಯ್ಯನವರ ಸಹೋದರ ವಿ.ನಂಜಪ್ಪ ದಂಪತಿಗಳು ಧಾನವಾಗಿ ಬನ್ನೂರಿನ ವಡ್ಡರಕೊಪ್ಪಲಿನ ಎಲ್ಲಪ್ಪನವರ ಮೂಲಕ ಇದನ್ನು ಕಟ್ಟಿಸಿದ್ದಾರೆ.

ಶಿವಪಥದಲ್ಲಿ ಸಾಗಿದರೆ ಬಲಭಾಗದಲ್ಲಿ ಮೈಸೂರಿನ ಗುರುಕೃಪ ವಸತಿ ನಿಲಯದ ಮಾಲೀಕರಾದ ಸುಬ್ಬಮ್ಮ ಮತ್ತು ಎನ್.ಕೆ.ಸಿದ್ದೇಗೌಡರು ಯೋಗಿರಾಜ ಶಿಲ್ಪಿಯಿಂದ ಕಡೆಸಿದ ಮಹಾನಂದಿಯನ್ನು 3ನೇ ಮಾರ್ಚ್ 2000 ರಂದು ಪ್ರತಿಷ್ಠಾಪಿಸಿದರು. ಮಹಾನಂದಿಯ ಎದುರು ಶಿವಪಥದ ಎಡಕ್ಕೆ ಕರಡಕೆರೆ ಚಿಕ್ಕನಾಥೇ ಗೌಡರ ಕುಟುಂಬದವರು ದಿನಾಂಕ 3ನೇ ಮಾರ್ಚ್ 2000ರಂದು ಶ್ರೀ ಆಂಜನೇಯ ಸ್ವಾಮಿ ಶಿಲ್ಪವನ್ನು ನಿರ್ಮಿಸಿದ್ದಾರೆ. ದೇವಸ್ಥಾನದ ಮಹಾದ್ವಾರ ಪೂರ್ವ ದಿಕ್ಕಿಗಿದ್ದು ಇದರ ಮೇಲೆ ಶಕ್ತಿ ಗ್ರೂಪ್‌ನ ಅಧ್ಯಕ್ಷ ಎನ್.ಮಹಾಲಿಂಗಂರವರು ಸುಮಾರು 25 ಲಕ್ಷ ರೂ.ಗಳ ವೆಚ್ಚದಲ್ಲಿ ನಿರ್ಮಿಸಿಕೊಟ್ಟಿರುವ ವಿಮಾನ ಗೋಪುರವಿದೆ. ಆತ್ಮಲಿಂಗೇಶ್ವರ ದೇವಾಲಯದ ಪ್ರಾಂಗಣ ಬಹಳ ವಿಸ್ತಾರವಾದದ್ದು ಮುಂಭಾಗದಲ್ಲಿ ಗರುಡಕಂಬವಿದೆ. ಬಲಭಾಗದಲ್ಲಿ ನವಗ್ರಹ ಮಂದಿರ ಹಾಗೂ ಎಡಭಾಗದಲ್ಲಿ ದರ್ಪಣ ಮಂದಿರವಿದೆ. ಪಶ್ಚಿಮದ ಕೊನೆಯಲ್ಲಿ ಗರ್ಭಗುಡಿ ಇದೆ. ಇದರಲ್ಲಿ ಯೋಗಿರಾಜ್ ನಿರ್ಮಿಸಿದ ಆತ್ಮಲಿಂಗೇಶ್ವರ ಸ್ವಾಮಿ ಪ್ರತಿಷ್ಠಾಪಿಸಿದೆ. 5 ಲಕ್ಷ ರೂ.ಗಳ ವಜ್ರಕವಚವನ್ನು ಎ. ಅಳಗಪ್ಪನ್‌ರವರು ನೀಡಿರುತ್ತಾರೆ. ದೇವಾಲಯದ ಮುಂದೆ ಪಾರ್ವತಿ ಮತ್ತು ವಿಘ್ನೇಶ್ವರ ಹಿಂಭಾಗದಲ್ಲಿ ಬ್ರಹ್ಮ ಹಾಗೂ ಬಲಭಾಗದಲ್ಲಿ ತಮಿಳುನಾಡಿನ ಶಿವಾರಾಧಕರಾದ ರಾಜಗೋಪಲ್ ನಿರ್ಮಿಸಿಕೊಟ್ಟ ತಾಯಿದುರ್ಗಾ ಪರಮೇಶ್ವರಿಯನ್ನು 8ನೇ ಫೆಬ್ರವರಿ 2003ರಂದು ಪ್ರತಿಷ್ಠಾಪಿಸಲಾಗಿದೆ. ದೇವಾಲಯದಲ್ಲಿ ಧರ್ಮಪೀಠ, ವ್ಯಾಖ್ಯಾನ ಮಂಟಪ, ನ್ಯಾಯಪೀಠ ಮತ್ತು ಕಲ್ಯಾಣಪೀಠ ಇವುಗಳ ಮೂಲಕ ಸಾರ್ವಜನಿಕರು ತಮ್ಮ ದೂರು ದುಮ್ಮಾನಗಳನ್ನು ಬಗೆಹರಿಸಿಕೊಳ್ಳಬಹುದು. ಕಲ್ಯಾಣಪೀಠದಲ್ಲಿ ಸರಳ ವಿವಾಹ ಏರ್ಪಡಿಸಲಾಗುವುದು. 2010ರಲ್ಲಿ ಗರ್ಭಗುಡಿ ಹಿಂಭಾಗದಲ್ಲಿ ಬ್ರಹ್ಮದೇವರ ವಿಗ್ರಹ ಸ್ಥಾಪಿಸಲಾಗಿದೆ. ದೇವಸ್ಥಾನದಲ್ಲಿ ದೈನಂದಿನಪೂಜೆ ರಾತ್ರಿ 8 ರವರೆಗೆ, ಶಿವರಾತ್ರಿ,

ಯುಗಾದಿ, ಮತ್ತಿತರ ವಿಶೇಷ ದಿನಗಳಲ್ಲಿ ವಿಶೇಷ ದರ್ಶನ, ಪೂಜೆ ನಡೆಯುತ್ತದೆ. ಶಿವರಾತ್ರಿ ಸಂದರ್ಭದಲ್ಲಿ ಜಾಗರಣೆಗಾಗಿ ದಿನರಾತ್ರಿ ಪೂರ್ತಿ ವಿವಿಧ ರೀತಿಯ ಪೂಜೆ ಏರ್ಪಡಿಸಲಾಗುವುದು ಹಾಗೂ ಒಂದು ವಾರ ಭಾರೀ ದಿನಗಳ ಜಾತ್ರೆ ನಡೆಯುವುದು. ದೇಗುಲದ ಆಗು ಹೋಗುಗಳನ್ನು ನೋಡಿಕೊಳ್ಳಲು ಧರ್ಮದರ್ಶಿ ಮಂಡಳಿ ಯನ್ನು ರಚಿಸಲಾಗಿದೆ. ದೇವಸ್ಥಾನವನ್ನು ನೋಡಿಕೊಳ್ಳುವುದು, ಪ್ರಸಾದನಿಲಯದ ಜವಾಬ್ದಾರಿ, ಸಾಮೂಹಿಕ ಮದುವೆ ಮಾಡುವುದು, ಪ್ರವಚನ, ಉಪನ್ಯಾಸ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುವುದು, ಹಬ್ಬದ ದಿನಗಳಲ್ಲಿ, ಹುಣ್ಣಿಮೆ, ಅಮಾವಾಸೆಯಲ್ಲಿ ವಿಶೇಷ ಪೂಜೆ ಮಾಡಿಸುವುದು, ದೀಪಾವಳಿಯಲ್ಲಿ ಲಕ್ಷ ದೀಪೋತ್ಸವ, ಶಿವರಾತ್ರಿಯಲ್ಲಿ ರಥೋತ್ಸವ, ದನಗಳ ಜಾತ್ರೆ, ಹೋಮ ಮೊದಲಾದ ದೇವತಾಕಾರ್ಯ ಮಾಡಿಸುವುದು ಧರ್ಮದರ್ಶಿ ಮಂಡಳಿಯವರ ಕಾರ್ಯವಾಗಿದೆ[33]. ಭಕ್ತಾದಿಗಳು ಉಳಿದುಕೊಳ್ಳಲು ಕೇಂದ್ರ ಸರ್ಕಾರದ 40 ಲಕ್ಷ ರೂ.ಗಳ ಅನುದಾನದಿಂದ ಯಾತ್ರಿ ನಿವಾಸವನ್ನು 1994ರಲ್ಲಿ ನಿರ್ಮಿಸಲಾಯಿತು. ಇಲ್ಲಿ ಉಳಿದುಕೊಳ್ಳಲು ಸುಸಜ್ಜಿತವಾದ ಕೊಠಡಿಗಳಿವೆ. ಅಲ್ಲದೆ ಸಭೆ ಸಮಾರಂಭ, ವಿಚಾರಗೋಷ್ಠಿ ಏರ್ಪಡಿಸಲು ವಿಶಾಲವಾದ ಸಭಾಂಗಣ ನಿರ್ಮಿಸಲಾಗಿದೆ. ಇಲ್ಲಿ ತಂಗುವ ಭಕ್ತರಿಗೆ ಸಭೆ ಸಮಾರಂಭಗಳಿವೆ ಅಡಿಗೆಗಾಗಿ ಸುಮಾರು 20 ಲಕ್ಷ ರೂ. ವೆಚ್ಚದಲ್ಲಿ ಸುಸಜ್ಜಿತವಾದ ಅಡಿಗೆ ಮನೆ ಮತ್ತು ಊಟದ ಹಾಲ್ ವ್ಯವಸ್ಥೆ ಮಾಡಲಾಗಿದೆ. ರಾಮಕೃಷ್ಣಾಶ್ರಮದ ವಸತಿ ಶಾಲೆಯ ಮಾದರಿಯಲ್ಲಿ ಇಲ್ಲಿನ ಗುರುಕುಲ ಪದ್ಧತಿಯ ಶಾಲೆ ಹಾಗೂ ದೇವಸ್ಥಾನ, ಜಾತ್ರೆ ಮುಂತಾದವುಗಳನ್ನು ನೋಡಿಕೊಳ್ಳಲು ಆತ್ಮಲಿಂಗೇಶ್ವರ ಆಶ್ರಮವನ್ನು 18ನೇ ಜನವರಿ 1993ರಂದು ಪ್ರಾರಂಭಿಸಲಾಯಿತು. ಆದಿಚುಂಚನಗಿರಿ ಮಹಾಸಂಸ್ಥಾನ ಮಠದೀಶರಾದ ಬಾಲಗಂಗಾಧರನಾಥ ಸ್ವಾಮೀಜಿಯವರಿಂದ ಉದ್ಘಾಟನೆಗೊಂಡ ಈ ಆಶ್ರಮ ಇಂದು ಧಾರ್ಮಿಕ ಕೇಂದ್ರವಾಗಿದ್ದು ದೇವಸ್ಥಾನದ ಪಕ್ಕ ಪ್ರತ್ಯೇಕ ವ್ಯವಸ್ಥೆ ಮಾಡಲಾಗಿದೆ.ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ, ವೈದ್ಯಕೀಯ ಪ್ರವಾಸಿ ಕ್ಷೇತ್ರವಾಗಿ ಬೆಳೆಯುತ್ತಿರುವ ಶ್ರೀ ಆತ್ಮಲಿಂಗೇಶ್ವರ ಕ್ಷೇತ್ರದಲ್ಲಿ ಪರಿಸರ ಸ್ನೇಹಿ ಉದ್ಯಾನವೊಂದನ್ನು ಕೇಂದ್ರ ಸರ್ಕಾರದ ಎರಡೂವರೆ ಕೋಟಿ ಅನುದಾನದಲ್ಲಿ ನಿರ್ಮಿಸಲಾಗಿದೆ[34]. ಆತ್ಮಲಿಂಗೇಶ್ವರ ಕ್ಷೇತ್ರಕ್ಕೆ ಆಗಮಿಸಲು ಬಸ್ ಸೌಲಭ್ಯವಿದ್ದು ಭಕ್ತರಿಗೆ, ಪ್ರವಾಸಿಗರಿಗೆ ಬಹಳ ಇಷ್ಟವಾದ ಸ್ಥಳವಾಗಿದ್ದು ವಾರಾಂತ್ಯ ಪ್ರವಾಸಕ್ಕೆ ಸೂಕ್ತವಾಗಿದೆ. ಮಂಡ್ಯ ಜಿಲ್ಲೆಯಲ್ಲಿ ಪಿತೃಪಕ್ಷ ಮತ್ತು ವಿವಾಹವನ್ನು ಬಹಳ ವಿಜೃಂಭಣೆ ಮತ್ತು ವೈಭವಯುತವಾಗಿ ಆಚರಿಸುವರು. ಇದನ್ನು ಮನಗಂಡು ದುಂದುವೆಚ್ಚ ತಪ್ಪಿಸಲು ರೈತ ಸಂಘದ ನೇತೃತ್ವದಲ್ಲಿ ಕುವೆಂಪು ರೂಪಿಸಿದ ಮಂತ್ರ ಮಾಂಗಲ್ಯ, ಸರಳ ವಿವಾಹ ಜಾರಿಗೆ ತರಲಾಯಿತು. ಇದೇ ದಾರಿಯಲ್ಲಿ ಶ್ರೀ ಆತ್ಮಲಿಂಗೇಶ್ವರ ಕ್ಷೇತ್ರದಲ್ಲಿ ಸಾಮೂಹಿಕ ವಿವಾಹ ನಡೆಸಲಾಗುವುದು. ಇದಕ್ಕೆ ಪ್ರಕಟಣೆ ನೀಡಿ ಒಪ್ಪಿ ಬಂದ ವಧೂವರರ ಕುಟುಂಬದ ಸಮ್ಮುಖದಲ್ಲಿ

ಸಾಮೂಹಿಕ ವಿವಾಹ ನಡೆಸಲಾಗುವುದು. ಹೆಣ್ಣಿಗೆ ತಾಳಿ, ಸೀರೆ, ಗಂಡಿಗೆ ಧೋತರವನ್ನು ಉಚಿತವಾಗಿ ನೀಡಲಾಗುವುದು. ಅಲ್ಲದೆ ಅವರ ಬಂದು ಮಿತ್ರರಿಗೆ ಉಚಿತ ಬೋಜನ ವ್ಯವಸ್ಥೆ ಸಹ ಮಾಡಲಾಗುವುದು. ಇದೊಂದು ಸಾಮಾಜಿಕ ಪರಿವರ್ತನಾ ಕಾರ್ಯವಾಗಿ ಯಶಸ್ವಿಯಾಗಿದೆ. ಇಲ್ಲಿ ಸುಮಾರು 13 ವಿವಿಧ ಸಂಸ್ಥೆಗಳನ್ನು ನಡೆಸಲಾಗುತ್ತಿದೆ.

### 5.2.6 ಪ್ರಕೃತಿ ಆರೋಗ್ಯ ಧಾಮ ಸ್ಥಾಪನೆಯಲ್ಲಿ ಜಿ.ಮಾದೇಗೌಡರ ಪಾತ್ರ

ಆತ್ಮಲಿಂಗೇಶ್ವರ ಕ್ಷೇತ್ರದಲ್ಲಿ ಔಷಧರಹಿತ ಪ್ರಕೃತಿ ಚಿಕಿತ್ಸೆಗಾಗಿ ವಿಶಿಷ್ಟವಾದ ಪ್ರಕೃತಿ ಆರೋಗ್ಯಧಾಮವನ್ನು 12 ಎಕರೆ ಹೆಚ್ಚು ಜಾಗವನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಧರ್ಮಸ್ಥಳದ ಪ್ರಕೃತಿ ಚಿಕಿತ್ಸಾ ಕೇಂದ್ರದ ಮಾದರಿಯಲ್ಲಿ ಪ್ರಕೃತಿ ಆರೋಗ್ಯಧಾಮ ನಿರ್ಮಿಸಲಾಗಿದೆ. ಪಂಚಭೂತಗಳಾದ ಭೂಮಿ, ಆಕಾಶ, ಜಲ, ಅಗ್ನಿ, ಗಾಳಿ ಮುಂತಾದ ಪಂಚಮಹಾ ಚಿಕಿತ್ಸಾ ಕ್ರಮದಲ್ಲಿ ಜಲ, ಮಣ್ಣು, ಉಗಿಸ್ನಾನ, ಯೋಗಾಸನ, ಧ್ಯಾನ, ಪ್ರಣಾಯಾಮ ಮುಂತಾದ ಚಿಕಿತ್ಸೆಗಳಿಂದ ಬೊಜ್ಜು, ಅಧಿಕ ರಕ್ತದ ಒತ್ತಡ, ಅಸ್ತಮ, ಮಧುಮೇಹ, ಬೆನ್ನುನೋವು, ಸಂಧಿವಾತ, ಅಜೀರ್ಣ ಮುಂತಾದ ದೈಹಿಕ ಹಾಗೂ ಮಾನಸಿಕ ಚಿಕಿತ್ಸೆಗಳಿಗೆ ನುರಿತ ವೈದ್ಯರ ಮಾರ್ಗದರ್ಶನದಲ್ಲಿ ಪರಿಣಿತರಿಂದ ಚಿಕಿತ್ಸೆ ನೀಡಲಾಗುತ್ತಿದೆ. ಯೋಗ ಚಿಕಿತ್ಸೆ, ಯೋಗಾಸನ, ಪ್ರಾಣಾಯಾಮ, ಧ್ಯಾನ ಮುಂತಾದವುಗಳ ಮೂಲಕ ಚಿಕಿತ್ಸೆಯನ್ನು ನೀಡಲಾಗುತ್ತಿದೆ[35].

### 5.2.7 ಜಿ.ಮಾದೇಗೌಡ ಸಮಾಜ ಸೇವಾ ಪ್ರತಿಷ್ಠಾನದ ಮೂಲಕ ಜನಮುಖಿ ಕಾರ್ಯಗಳು

2001ನೇ ಸಾಲಿನಲ್ಲಿ ಗೌಡರ ಅಭಿನಂದನಾ ಸಮಾರಂಭವನ್ನು ಮಂಡ್ಯದಲ್ಲಿ ನಡೆಸಲಾಯಿತು. ನಂತರ ಅವರ ಹೆಸರಿನಲ್ಲಿ ಸೂಕ್ತ ಕಾರ್ಯ ಮಾಡಲು ಸಮಾಜ ಸೇವಾ ಪ್ರತಿಷ್ಠಾನವನ್ನು ಸ್ಥಾಪಿಸಲಾಗಿದೆ. ಪ್ರತಿವರ್ಷ ಪ್ರತಿಷ್ಠಾನದ ಮೂಲಕ ನಾಲ್ಕು ಪ್ರಮುಖ ಕಾರ್ಯಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಜಿ.ಮಾದೇಗೌಡರ ಜನ್ಮ ದಿನವಾದ ಜುಲೈ 10 ರಂದು ಪ್ರತಿವರ್ಷ ಸಮಾಜಸೇವೆ ಹಾಗೂ ಸಾವಯವ ಕೃಷಿಯಲ್ಲಿ ವಿಶಿಷ್ಟ ಸಾಧನೆ ಮಾಡಿರುವವರನ್ನು ಗುರುತಿಸಿ ತಲಾ 25 ಸಾವಿರ ರೂ. ನಗದು, ಪ್ರಶಸ್ತಿ ಪತ್ರ ನೀಡಿ ಸನ್ಮಾನಿಸಲಾಗುವುದು[36]. ಪ್ರತಿ ವರ್ಷ ಭಾರತೀನಗರದ ಗಾಂಧೀಭವನದಲ್ಲಿ ಅಕ್ಟೋಬರ್ 2 ರಂದು ಗಾಂಧಿ ಜಯಂತಿಯನ್ನು ಅರ್ಥಪೂರ್ಣವಾಗಿ ಆಚರಿಸಲಾಗುವುದು. ಈ ಸಂದರ್ಭದಲ್ಲಿ ವನಮಹೋತ್ಸವ, ಶ್ರಮದಾನ ಕಾರ್ಯಕ್ರಮ

ಹಮ್ಮಿಕೊಳ್ಳಲಾಗುತ್ತದೆ. ಮಂಡ್ಯದಲ್ಲಿ ಬಿ.ಎ., ಬಿ.ಎಸ್ಸಿ., ಬಿ.ಕಾಂ., ಬಿ.ಇಡಿ ಹಾಗೂ ಎಲ್.ಎಲ್.ಬಿ. ಮೂರು ಮತ್ತು ಐದು ವರ್ಷದ ಕಾನೂನು ಪದವಿ ಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿಗಳಿಗೆ ತಲಾ ಒಂದು ಸಾವಿರ ನಗದು ಮತ್ತು ಪ್ರಶಸ್ತಿ ನೀಡಿ ಗೌರವಿಸಲಾಗುವುದು. ಗ್ರಾಮೀಣ ಕಲೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಪ್ರತಿವರ್ಷ ಡಿಸೆಂಬರ್ ತಿಂಗಳಲ್ಲಿ ರಾಜ್ಯಮಟ್ಟದ ಜಾನಪದ ಗೀತಗಾಯನ ಸ್ಪರ್ಧೆ ಏರ್ಪಡಿಸಿ ಹಿರಿಯ ಮತ್ತು ಕಿರಿಯರ ವಿಭಾಗದಲ್ಲಿ ತಲಾ ಹತ್ತು ಬಹುಮಾನಗಳನ್ನು ನೀಡಲಾಗುತ್ತಿದೆ. ಹಳ್ಳಿಗರ ಆರೋಗ್ಯ, ಸ್ವಾಸ್ಥ್ಯ ಹಾಗೂ ನೈರ್ಮಲ್ಯ ಕಾಪಾಡುವ ದೆಸೆಯಿಂದ ಉಚಿತ ಆರೋಗ್ಯದ ತಪಾಸಣೆ ಔಷಧೋಪಚಾರ ಏರ್ಪಡಿಸಲಾಗುತ್ತದೆ. ಈ ಕಾರ್ಯಕ್ಕೆ ಆದಿಚುಂಚನಗಿರಿ ವೈದ್ಯಕೀಯ ಕಾಲೇಜಿನ ಆಸ್ಪತ್ರೆ ವೈದ್ಯರು, ಬೆಂಗಳೂರಿನ ಕೆಂಪೇಗೌಡ ವೈದ್ಯಕೀಯ ಕಾಲೇಜಿನ ಹಾಗೂ ಮಂಡ್ಯ ಮತ್ತು ಬೆಂಗಳೂರಿನ ಕೆಲವು ನುರಿತ ವೈದ್ಯರು ತಂತ್ರಜ್ಞರು ಆಗಮಿಸಿ ತಪಾಸಣೆ ಮತ್ತು ಉಪಚಾರ ನೀಡುತ್ತಿದ್ದಾರೆ. ಜಿಲ್ಲೆಯ ಮೆಡಿಕಲ್ ಸ್ಟೋರ್ಸ್‌ಗಳು ಸಾವಿರಾರು ರೂ. ಮೌಲ್ಯದ ಔಷಧಿಗಳನ್ನು ಇಲ್ಲಿ ಉಚಿತವಾಗಿ ನೀಡುತ್ತಿದ್ದಾರೆ. ಪ್ರತಿವರ್ಷ ಸುಮಾರು ಎರಡು ಮೂರು ಸಾವಿರ ಮಂದಿ ತಪಾಸಣೆಗೊಳಗಾಗಿ ಔಷಧೋಪಚಾರ ಪಡೆಯುತ್ತಿದ್ದಾರೆ. ಇದರಿಂದ ವಿದ್ಯಾರ್ಥಿಗಳಿಗೆ ನೌಕರರಿಗೆ ಸಾರ್ವಜನಿಕರಿಗೆ ಪ್ರಯೋಜನವಾಗುತ್ತಿದೆ.

ಜಿ.ಮಾದೇಗೌಡರ ಸಮಾಜ ಸೇವಾ ಪ್ರತಿಷ್ಠಾನದ ವತಿಯಿಂದ ಸಮಾಜ ಸೇವೆ ಹಾಗೂ ಸಾವಯವ ಕೃಷಿಯಲ್ಲಿ ವಿಶೀಷ್ಟ ಸಾಧನೆ ಮಾಡಿರುವ ವ್ಯಕ್ತಿಗಳನ್ನು ಗುರುತಿಸಿ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ರಾಜ್ಯದಲ್ಲಿ ಪ್ರಮುಖವಾಗಿ ಸಮಸ್ಯೆಗೆ ಸಿಲುಕಿಕೊಳ್ಳುವ ಕಾರ್ಯವೆಂದರೆ ವ್ಯವಸಾಯ. ರೈತರು ತಾವು ಬೆಳೆದಂತಹ ಬೆಳೆಗಳಿಗೆ ಸೂಕ್ತ ಬೆಲೆ ದೊರಕದೆ ಮಳೆ ಸರಿಯಾದ ಸಂದರ್ಭದಲ್ಲಿ ಬಾರದೆ ರೈತ ತಾನು ನಂಬಿರುವ ವ್ಯವಸಾಯದಿಂದ ನಷ್ಟ ಅನುಭವಿಸಿ ಆತ್ಮಹತ್ಯೆಗೆ ಮುಂದಾಗುತ್ತಿದ್ದಾನೆ. ಇಂತಹ ಸಂದರ್ಭದಲ್ಲಿ ಇದೇ ಕೃಷಿಯನ್ನ ವೈಜ್ಞಾನಿಕ ರೀತಿಯಲ್ಲಿ ಸಾವಯವ ಪದ್ದತಿಯನ್ನು ಅಳವಡಿಸಿಕೊಂಡು ವ್ಯವಸಾಯವನ್ನು ಮಾಡಿ ಉತ್ತಮ ಲಾಭವನ್ನು ಗಳಿಸಿ, ನೆಮ್ಮದಿಯಿಂದ ಬದುಕಬಹುದು ಎಂದು ತೋರಿಸಿಕೊಟ್ಟಿರುವಂತಹ ಮಾದರಿ ರೈತರನ್ನು ಗುರುತಿಸಲಾಗುತ್ತದೆ. ಸಾಮಾಜಿಕ ಕಾರ್ಯದಲ್ಲಿ ಜಾತಿ, ಭೇದ, ಬಡವ ಶ್ರೀಮಂತ ಎನ್ನದೆ ಸಮಾಜಕ್ಕಾಗಿ ಉತ್ತಮ ಕಾರ್ಯಗಳನ್ನು ಮಾಡಿಕೊಂಡು ಬರುತ್ತಿರುವಂತಹ ವ್ಯಕ್ತಿಗಳನ್ನು ಆಯ್ಕೆಮಾಡಿ, ಜಿ.ಮಾದೇಗೌಡರ ಹುಟ್ಟು ಹಬ್ಬದ ದಿನದಂದು ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಜಿ.ಮಾದೇಗೌಡರ ಸಮಾಜ ಸೇವಾ ಪ್ರತಿಷ್ಠಾನ ವತಿಯಿಂದ ನೀಡಲಾಗುತ್ತಿರುವ ಈ ಪ್ರಶಸ್ತಿಯನ್ನ ಅನೇಕ ಮಹಾನೀಯರು ತುಂಬು ಹೃದಯದಿಂದ ಸ್ವೀಕರಿಸಿದ್ದಾರೆ.

ಜಿ.ಮಾದೇಗೌಡರ ಸಾಧನೆಯನ್ನು ಗುರುತಿಸಿ ಹಳ್ಳಿಗಾಡಿನ ರೂವಾರಿಗೆ ಅಪರಂಜಿ ಅಭಿನಂದನಾಗ್ರಂಥದ ಮೂಲಕ ಅಭಿನಂದಿಸಲಾಗಿದೆ. ಸದುದ್ದೇಶ, ಸದಾಶಯ, ಸತ್ಕಾರ್ಯದಲ್ಲಿ ಬದುಕು ನಡೆಸುತ್ತಿರುವ ವ್ಯಕ್ತಿತ್ವದ ಗುರುದೇವರಹಳ್ಳಿ ಮಾದೇಗೌಡರು ಹಾಕಿಕೊಟ್ಟಿರುವ ಹಾದಿಯಲ್ಲಿ ಸಾಗಿದರೆ ಏನನ್ನು ಬೇಕಾದರೂ ಸಾಧಿಸಬಹುದೆಂಬುದಕ್ಕೆ ಸ್ಪಷ್ಟ ನಿದರ್ಶನ ಇವರದು ಶೈಕ್ಷಣಿಕ ಹಾಗೂ ಆರ್ಥಿಕ, ಸಾಮಾಜಿಕ ಕಾರ್ಯಗಳನ್ನು ಪರಿಗಣಿಸಿದರೆ ಇವರು ಅಭಿವೃದ್ಧಿಯ ಹರಿಕಾರರಾಗಿದ್ದಾರೆ. ಹಳ್ಳಿಗಾಡಿನ ರೂವಾರಿ ಯಾಗಿರುವ ಗೌಡರ ಈ ಕ್ರಾಂತಿಗೆ ಪ್ರತಿಷ್ಠಿತ ಮೈಸೂರು ವಿಶ್ವವಿದ್ಯಾನಿಲಯ 7ನೇ ಏಪ್ರಿಲ್ 2013ರಂದು ಘಟಿಕೋತ್ಸವದಲ್ಲಿ ಗೌರವ ಡಾಕ್ಟರೇಟ್ ಪ್ರದಾನ ಮಾಡಿದೆ. ಅಲ್ಲದೆ 2017ರಲ್ಲಿ ಸಂಗೋಳ್ಳಿರಾಯಣ್ಣ ಪ್ರಶಸ್ತಿಯನ್ನು ಕರ್ನಾಟಕ ಸರ್ಕಾರ ನೀಡಿ ಗೌರವಿಸಿದೆ ಮತ್ತು ಆದಿಚುಂಚನಗಿರಿ ಮಠ ಸಂಸ್ಥಾನವು ಚುಂಚಶ್ರೀ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಜೊತೆಗೆ ಎ.ಆರ್.ನಾರಾಯಣಘಟ್ಟ ಮತ್ತು ಸರೋಜಮ್ಮ ಇವರ ವತಿಯಿಂದ ಗಾಂಧೀಪುದವಟ್ಟು ಪ್ರಶಸಿಯನ್ನು 2016ರಂದು ನೀಡಿ ಗೌರವಿಸಲಾಗಿದೆ. ಇವುಗಳ ಜೊತೆಗೆ ತಮ್ಮ ಜೀವನದುದ್ದಕ್ಕೂ ಗಾಂಧೀತತ್ವಗಳನ್ನು ಪಾಲಿಸಿಕೊಂಡು ಬರುತ್ತಿರುವ ಜಿ.ಮಾದೇಗೌಡರನ್ನು ಬಯಲು ಸೀಮೆಯ ಗಾಂಧಿ ಎಂದು ಕರೆಯಲಾಗುತ್ತಿದೆ.

**ಕೊನೆಟಿಪ್ಪಣಿಗಳು :**

1. ಸಂದರ್ಶನ ಜಿ.ಮಾದೇಗೌಡರೊಂದಿಗೆ (05.01.2017) ಸಂಶೋಧಕನಿಂದ

1ಎ. ರಾಗೌ, (2012), ಶಿಕ್ಷಣ ಭಾರತಿ, ಸುವರ್ಣ ಮಹೋತ್ಸವ ಸ್ಮರಣ ಸಂಪುಟ, ಪು.ಸಂ. 400.

2. ರಾಜೇಗೌಡ.ಹ.ಕ., (2012), ಶ್ರೀ ಆತ್ಮಲಿಂಗೇಶ್ವರ ಕ್ಷೇತ್ರ, ಪು.ಸಂ. 61.

2ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (05.01.2017) ಸಂಶೋಧಕನಿಂದ

3. ರಾಮಕೃಷ್ಣ.ಮಾ, (2005), ರೈತ ಮಿತ್ರ ಜಿ.ಮಾದೇಗೌಡ, ಪು.ಸಂ. 16

3ಎ. ಸಂದರ್ಶನ, ಜಿ.ಮಾದೇಗೌಡರೊಂದಿಗೆ (05.01.2017) ಸಂಶೋಧಕನಿಂದ

4. ನಾಗರಾಜು.ಸಿ.ಪಿ, (2010), ಹಳ್ಳಿಗಾಡಿನ ರೂವಾರಿ, ಪು.ಸಂ. 06

4ಎ. ಸಂದರ್ಶನ ಎ.ಎಸ್.ಪ್ರಕಾಶ್‌ಗೌಡ ಹಾಸನ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿರವರೊಂದಿಗೆ (02.05.2017) ಸಂಶೋಧಕನಿಂದ

5. ಅನಂತನ.ವಿ.ಆರ್, (2012), ಶಿಕ್ಷಣ ಭಾರತಿ, ಸುವರ್ಣ ಮಹೋತ್ಸವ ಸ್ಮರಣ ಸಂಪುಟ, ಪು.ಸಂ. 406.

5ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (08.02.2017) ಸಂಶೋಧಕನಿಂದ

6. ರಾಮೇಗೌಡ.ಎಂ.ಎಸ್., (1987), ಭಾರತಿ ರಜತ್ ಮಹೋತ್ಸವ ಸ್ಮರಣ ಸಂಚಿಕೆ, ಪು.ಸಂ. 36.

7. ರಾಮಕೃಷ್ಣ.ಮ, (2005), ಪೂರ್ವೋಕ್ತ, ಪು.ಸಂ. 16, 17, 18.

7ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (08.02.2017) ಸಂಶೋಧಕನಿಂದ

8. ರಾಗೌ ಮತ್ತು ಇತರರು, (2011), ಅಪರಂಜಿ, ಪು.ಸಂ. 150–152.

9. ಪುಟ್ಟಲಿಂಗಯ್ಯ.ಕೆ., (2012), ಶಿಕ್ಷಣ ಭಾರತಿ, ಪು.ಸಂ. 422–426.

10. ಸಂದರ್ಶನ, ಮಧು ಜಿ.ಮಾದೇಗೌಡರವರೊಂದಿಗೆ (08.06.2017) ಸಂಶೋಧಕನಿಂದ

11. ಭಾರತೀ ಕಾಲೇಜಿನ ಐ.ಎ.ಎಸ್. ಅಕಾಡೆಮಿ ಕಡತದಿಂದ ಪಡೆದ ಮಾಹಿತಿ, (24.06.2017)

12. ಪುಟ್ಟಲಿಂಗಯ್ಯ.ಕೆ, (2012), ಶಿಕ್ಷಣ ಭಾರತಿ, ಪು.ಸಂ. 422–426.

13. ಪೂರ್ವೋಕ್ತ, ಪು.ಸಂ. 370.

14. ಶಿವಕುಮಾರ್.ಎಂ, (2012), ಜನನಾಯಕ, ಪು.ಸಂ. 120.

15. ನಾಗಾಜ.ಸಿ.ಪಿ, (2010), ಹಳ್ಳಿಗಾಡಿನ ರೂವಾರಿ, ಪು.ಸಂ. 2, 4.
15ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (08.02.2017) ಸಂಶೋಧಕನಿಂದ
16. ನಾಗರಾಜು.ಸಿ.ಪಿ, (2010), ಅದೇ ಪು.ಸಂ. 04.
17. ರಾಗೌ, (2010), ಅಪರಂಜಿ, ಪು.ಸಂ. 698.
18. ರಾಗೌ, (2010), ಅದೇ ಪು.ಸಂ. 198.
19. ರಾಗೌ ಮತ್ತು ಇತರರು, ಅದೇ ಪು.ಸಂ. 202.
20. ಅನಂತನ.ವಿ.ಆರ್, (2012) ಶಿಕ್ಷಣ ಭಾರತಿ, ಪು.ಸಂ. 372.
21. ರಾಗೌ, ಅದೇ ಪು.ಸಂ. 373–374.
22. ನಾಗರಾಜ.ಸಿ.ಪಿ, (2001), ಪು.ಸಂ. 30, 31.
23. ರಾಗೌ, (2010), ಪು.ಸಂ. 219.
24. ಸಂದರ್ಶನ, ಜಿ.ಮಾದೇಗೌಡರರೊಂದಿಗೆ (22.06.2017) ಸಂಶೋಧಕನಿಂದ
25. ಬಿಳಿಗೌಡ, (2012) ಶಿಕ್ಷಣ ಭಾರತಿ, ಪು.ಸಂ. 374.
26. ನಾಗರಾಜ.ಸಿ.ಪಿ., (2001), ಪು.ಸಂ. 30, 31.
26ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (09.02.2017) ಸಂಶೋಧಕನಿಂದ
27. ನೀಲಕಂಠೇಗೌಡ, (2012), ಶಿಕ್ಷಣ ಭಾರತಿ, ಪು.ಸಂ. 372.
27ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (10.02.2017) ಸಂಶೋಧಕನಿಂದ
28. ನಾಗೇಶ್.ಎಚ್.ಎಂ., (2012) ಶಿಕ್ಷಣ ಭಾರತಿ, ಪು.ಸಂ. 402–403
29. ರಾಮಕೃಷ್ಣ, (2012), ಶಿಕ್ಷಣ ಭಾರತಿ, ಪು.ಸಂ. 404–405
29ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (09.02.2017) ಸಂಶೋಧಕನಿಂದ
30. ಅನಂತನ.ವಿ.ಆರ್, (2012), ಶಿಕ್ಷಣ ಭಾರತಿ, ಪು.ಸಂ. 415–416.
30ಎ. ಸಂದರ್ಶನ ಜಿ.ಮಾದೇಗೌಡರೊಂದಿಗೆ (08.02.2017) ಸಂಶೋಧಕನಿಂದ
31. ರಾಮಕೃಷ್ಣ.ಮ, (2005), ಪೂರ್ವೋಕ್ತ, ಪು.ಸಂ. 21.
32. ರಾಜೇಗೌಡ.ಹ.ಕ, (1993), ಶ್ರೀ ಆತ್ಮಲಿಂಗೇಶ್ವರ ಕ್ಷೇತ್ರದರ್ಶನ, ಪು.ಸಂ. 34
33. ರಾಜೇಗೌಡ.ಹ.ಕ, ಪೂರ್ವೋಕ್ತ, ಪು.ಸಂ. 38
34. ರಾಜೇಗೌಡ.ಹ.ಕ, (1993), ಪೂರ್ವೋಕ್ತ, ಪು.ಸಂ. 53
35. ರಾಮಕೃಷ್ಣ.ಮ, (2005), ಪು.ಸಂ. 54
36. ಅನಂತನ.ವಿ.ಆರ್, (2012), ಶಿಕ್ಷಣ ಭಾರತಿ, ಪು.ಸಂ. 423.

# ಅಧ್ಯಾಯ-ಆರು

# ಉಪಸಂಹಾರ

ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಸಾಗಿದಂತೆಲ್ಲಾ ಮಾನವನ ಬಯಕೆಗಳು ಆಗಾಧಗೊಂಡಿವೆ, ವಿಶಿಷ್ಟ ರೂಪ ಪಡೆದುಕೊಂಡಿವೆ. ಅಪರಿಮಿತವಾದ ಬಯಕೆಗಳನ್ನು ಈಡೇರಿಸಿಕೊಳ್ಳಲು ಸಹಜವಾಗಿಯೇ ಮಾನವರು ಬಯಸುತ್ತಾರೆ. ಸೌಲಭ್ಯಗಳು ಹಾಗೂ ಸಂಪನ್ಮೂಲಗಳು ಮಿತಿಯಾಗಿದ್ದು, ಆತಿಯಾದ ಬಯಕೆಗಳನ್ನು ಈಡೇರಿಸಲು ಸಾಧ್ಯವಿಲ್ಲದಿದ್ದಾಗ ಸ್ಪರ್ಧೆ ಏರ್ಪಡುತ್ತದೆ. ಸ್ಪರ್ಧೆ ಮಿತಿ ಮೀರಿದಾಗ ಘರ್ಷಣೆ, ಕ್ರಾಂತಿ, ಕಲಹ, ಯುದ್ಧದಂತಹ ಅಶಾಂತಿಯುತವಾದ ವಾತಾವರಣ ಸೃಷ್ಟಿಯಾಗುತ್ತದೆ. ಪ್ರಬಲರು-ದುರ್ಬಲರು, ಉಳ್ಳವರು-ಇಲ್ಲದವರು ಎಂಬ ವರ್ಗಗಳು ಉಗಮವಾಗುತ್ತವೆ. ಆಳುವವ್ಯವಸ್ಥೆ ಅನಿವಾರ್ಯವಾಗಿ ಪ್ರಬಲರು ಅಥವಾ ಉಳ್ಳವರ ಕೈಸೇರಿ ಬಹುಸಂಖ್ಯಾತ ದುರ್ಬಲರು ಶೋಷಣೆಗೆ ಒಳಗಾಗುತ್ತಾರೆ.

ರಾಜಕೀಯ ವ್ಯವಸ್ಥೆಯ ವಿರುದ್ದ ರೈತರು ಹೆಚ್ಚಿನ ಪ್ರಮಾಣದಲ್ಲಿ ಸಂಘಟಿತರಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ. ಕೆಲವು ಹೋರಾಟಗಳು ಫಲಪ್ರದವಾಗಿವೆ. ಹೋರಾಟಗಳು ಚಳವಳಿಯ ಸ್ವರೂಪ ಪಡೆದುಕೊಂಡಾಗ ಅದಕ್ಕೊಂದು ನಿರ್ದಿಷ್ಟ ಮಾರ್ಗ ಸೂಚಿಗಳು ಕಂಡುಬರುತ್ತವೆ. ಹೋರಾಟಗಳು ಫಲಪ್ರದ ಅಥವಾ ವೈಫಲ್ಯತೆ ಹೊಂದುವಲ್ಲಿ ಚಿಂತನಾತ್ಮಕ ನಾಯಕತ್ವವು ಪ್ರಮುಖ ಪಾತ್ರ ವಹಿಸುತ್ತವೆ. ಪ್ರಭಾವಿ ಹಾಗೂ ಮಾದರಿ ನಾಯಕತ್ವದ ನಿರ್ದೇಶನದಲ್ಲಿ ನಡೆದಿರುವ ಅನೇಕ ಹೋರಾಟಗಳು ಯಶಸ್ವಿಯಾಗಿದ್ದು, ಇಂತಹುದೇ ಅನೇಕ ನಾಯಕರು ಕರ್ನಾಟಕದಲ್ಲಿಯೂ ಇಲ್ಲಿನ ರೈತರು, ಕಾರ್ಮಿಕರು, ಮಹಿಳೆಯರು, ವಿದ್ಯಾರ್ಥಿಗಳು, ವ್ಯಾಪಾರಿಗಳು ಸಾಮಾನ್ಯ ನಾಗರಿಕರಿಗೆ ಅನಾನುಕೂಲವಾದಾಗಲೆಲ್ಲ ಸಂಘಟಿತ ಹೋರಾಟಗಳನ್ನು ರೂಪಿಸಿದ್ದಾರೆ. ಅಂತಹ ನಾಯಕರುಗಳಲ್ಲಿ ಪ್ರಮುಖವಾಗಿ ಜಿ.ಮಾದೇಗೌಡರು ಒಬ್ಬರು. ಇವರ ಜೀವನದ ಮೇಲೆ ಮಹಾತ್ಮ ಗಾಂಧೀಜಿಯವರ ಪ್ರಭಾವ ಬಾಲ್ಯದಿಂದಲೇ ಬೀರಿತ್ತು. ಮಹಾತ್ಮ ಗಾಂಧೀಜಿಯವರ ಆಕರ್ಷಣೀಯ ಹಾಗೂ ಅನುಕರಣೀಯವಾದ ನಾಯಕತ್ವದಿಂದ ಪ್ರೇರೇಪಿತರಾಗಿ ಉತ್ತಮ ಚಿಂತನೆ ಹಾಗೂ ಹೋರಾಟದ ನಾಯಕತ್ವವನ್ನು ಗೌಡರು ಮೈಗೂಡಿಸಿಕೊಂಡರು. ಕುಗ್ರಾಮದ ರೈತಾಪಿ ಕುಟುಂಬದಲ್ಲಿ ಜನಿಸಿ ಬಾಲ್ಯದಲ್ಲಿಯೇ ಗಾಂಧೀ ತತ್ವಗಳ ಸೆಳೆತಕ್ಕೆ ಸಿಲುಕಿ ಸಮಾಜ ಸೇವೆಗೆ ಸಂಪೂರ್ಣವಾಗಿ ತೊಡಗಿಸಿಕೊಂಡ ಜಿ.ಮಾದೇಗೌಡರು ತಮ್ಮ 92ನೇಯ ಇಳಿವಯಸ್ಸಿನಲ್ಲಿಯೂ ಸಮಾಜದ ಸರ್ವತೋಮುಖ ಅಭಿವೃದ್ಧಿಯ ಬಗ್ಗೆಯೇ ಚಿಂತಿಸಿ, ವಿಶಿಷ್ಟ ಬಗೆಯ ಕನಸುಗಳನ್ನು ಕಾಣುತ್ತಾ, ಆ ಕನಸುಗಳ ಸಾಕಾರಕ್ಕೆ ಅವಿರತ ಶ್ರಮಿಸಿದ್ದಾರೆ. ಇಂದಿಗೂ ಶ್ರಮಿಸುತ್ತಿದ್ದಾರೆ. ಅಧ್ಯಯನದುದ್ದಕ್ಕೂ ಕಂಡುಕೊಂಡ

ಅಂಶಗಳಲ್ಲಿ ಜಿ.ಮಾದೇಗೌಡರು ಸ್ಥಳೀಯ ಇತಿಹಾಸಕ್ಕೆ ಸೇರಬಹುದಾದ ವ್ಯಕ್ತಿಗಳಲ್ಲಿ ಒಬ್ಬರಾಗಿದ್ದರೆ. 1938ರ ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ಸತ್ಯಾಗ್ರಹಿಗಳಿಗೆ ನೀರು ಕೊಡುವ ಕಾಯಕದೊಂದಿಗೆ 10ನೇ ವಯಸ್ಸಿಗೆ ಪ್ರಾರಂಭವಾದ ಸಾಮಾಜಿಕ ಸೇವೆಯ ತುಡಿತ ಇಂದಿಗೂ ಅದೇ ಉತ್ಸಾಹದಲ್ಲಿದ್ದು ಭವಿಷ್ಯದ ನಾಯಕರುಗಳಿಗೆ ಆದರ್ಶರಾಗಿದ್ದಾರೆ.

1942ರ ಭಾರತ ಬಿಟ್ಟು ತೊಲಗಿ ಚಳವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವುದರ ಮೂಲಕ ಅಪಾರವಾದ ರಾಷ್ಟ್ರಪ್ರೇಮವನ್ನು ಬೆಳೆಸಿಕೊಂಡರು. ತರುವಾಯ ಕರ್ನಾಟಕ ಏಕೀಕರಣ ಚಳುವಳಿ ಸಂದರ್ಭದಲ್ಲಿ ಮೈಸೂರು ಯಥಾಸ್ಥಿತಿಯಲ್ಲಿ ಇರಲಿ ಎಂದು ಬಯಸಿದರು. ಆ ಸಂದರ್ಭದಲ್ಲಿ ನಡೆದ ಮೈಸೂರು ವಿಲೀನ ವಿರೋಧಿ ಚಳುವಳಿಯಲ್ಲಿ ಭಾವಹಿಸಿದರು. ಈ ಮಧ್ಯೆ ಕಾನೂನು ಪದವಿಯನ್ನು ಪಡೆದುಕೊಂಡು ವಕೀಲರ ವೃತ್ತಿಯನ್ನು ನಿರ್ವಹಿಸಿದರು. ಬದಲಾದ ರಾಜಕೀಯ ಸನ್ನಿವೇಶದಲ್ಲಿ 1959ರಲ್ಲಿ ತಾಲ್ಲೂಕು ಬೋರ್ಡ್ ಸದಸ್ಯರಾಗುವ ಮೂಲಕ ಸಾರ್ವಜನಿಕ ಕ್ಷೇತ್ರವನ್ನು ಪ್ರವೇಶಿಸಿದರು. 1962 ರಿಂದ 1989 ರವರೆಗೂ ವಿಧಾನಸಭಾ ಸದಸ್ಯರಾಗಿದ್ದರು. 1989 ರಿಂದ 1995 ರವರೆಗೆ ಎರಡು ಬಾರಿ ಲೋಕಸಭಾ ಸದಸ್ಯರಾಗಿದ್ದರು. ಒಂದು ಬಾರಿ ರಾಜ್ಯದಲ್ಲಿ ಸಂಪುಟ ಸಚಿವರಾಗಿ ತಮ್ಮ ಚಿಂತನೆ ಹಾಗೂ ಹೋರಾಟಗಳನ್ನು ರಾಜಕೀಯ ಕ್ಷೇತ್ರಕ್ಕಷ್ಟೇ ಸೀಮಿತಗೊಳಿಸದೇ ಸಮಾಜದ ಸಬಲೀಕರಣಕ್ಕೆ ಪೂರಕವಾದ ಹಾಗೂ ಅವಶ್ಯಕವಾದ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸುವ ಮೂಲಕ ತಮ್ಮ ರಾಜಕೀಯ ಜೀವನವನ್ನು ಸಾರ್ಥಕಗೊಳಿಸಿಕೊಂಡಿದ್ದಾರೆ. ಪ್ರಮುಖವಾಗಿ ಕೆಳವರ್ಗದ ಜನರಿಗೆ ವಿದ್ಯಾರ್ಥಿಗಳು, ಕಾರ್ಮಿಕರು, ಮಹಿಳೆಯರ ಪರ ಧ್ವನಿಯಾಗಿದ್ದಾರೆ. ಭವಿಷ್ಯದ ಹೋರಾಟಗಾರರಿಗೆ ಉತ್ತಮ ಹಾದಿ ಹಾಕಿಕೊಟ್ಟಿದ್ದಾರೆ.

1962ರಲ್ಲಿ ಕುಗ್ರಾಮವಾದ ಕಾಳಮುದ್ದನದೊಡ್ಡಿಯಲ್ಲಿ (ಇಂದಿನ ಭಾರತೀನಗರ) ತಮ್ಮ ದೂರದರ್ಶಿತ್ವದಿಂದ ಸ್ಥಾಪಿಸಿದ ಭಾರತಿ ವಿದ್ಯಾಸಂಸ್ಥೆಯು ಒಂದು ಪವಿತ್ರವಾದ ವಿಶ್ವವಿದ್ಯಾನಿಲಯದಂತೆ ಎತ್ತರಕ್ಕೆ ಬೆಳೆಯುವಂತೆ ಮಾಡಿ ಶಿಕ್ಷಣ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಮಂಡ್ಯ ಜಿಲ್ಲೆಯ ರೈತರ ಆರ್ಥಿಕ ಸ್ಥಿತಿಯನ್ನು ಸ್ಥಿರಗೊಳಿಸುವ ಆಲೋಚನೆಯ ಪ್ರತಿಫಲವೇ ಕಾಳಮುದ್ದನದೊಡ್ಡಿಯಲ್ಲಿ ಸ್ಥಾಪಿತವಾಗಿರುವ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ. ಆಧ್ಯಾತ್ಮಿಕ ನೆಲೆಗಟ್ಟಿನಲ್ಲಿ ಶ್ರೀ ಆತ್ಮಲಿಂಗೇಶ್ವರ ದೇವಾಲಯದ ಸ್ಥಾಪನೆ, ಗಾಂಧಿತತ್ವದ ಪ್ರಸರಣದ ಹಿನ್ನೆಲೆಯ ಗಾಂಧಿಭವನಗಳ ಸ್ಥಾಪನೆ ಇವೇ ಮೊದಲಾದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಹಾಗೂ ರಾಜಕೀಯ ಕ್ಷೇತ್ರಗಳಲಿ ತಮ್ಮದೇ ಆದ ಸಾಧನೆಗಳ ಮೂಲಕ ವಿಶೇಷ ಛಾಪು ಮೂಡಿಸಿ ಎಲ್ಲಿಯೂ, ಯಾವ ಸಂದರ್ಭದಲ್ಲಿಯೂ ಸ್ವಾರ್ಥಪರತೆಯನ್ನು ಬಯಸಿದವರಲ್ಲ. ಧರ್ಮ ನಿರಪೇಕ್ಷ, ಜಾತ್ಯಾತೀತ ಮತ್ತು ಸಾಮಾಜಿಕ ಸಮಾನತೆಯ ತತ್ವಗಳಲ್ಲಿ ನಂಬಿಕೆಯಿರಿಸಿಕೊಂಡು

ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ದುಡಿದಿದ್ದಾರೆ. ಯಾವುದಾದರೊಂದು ವಿಶೇಷ ಕ್ಷೇತ್ರಗಳಲ್ಲಿ ಭಾಗವಹಿಸಿ ನಾಯಕರೆನಿಸಿ ಕೊಳ್ಳುವವರ ನಡುವೆ ಹಲವು ವಿಭಿನ್ನ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ಆ ಕ್ಷೇತ್ರಗಳನ್ನು ಅಚ್ಚುಕಟ್ಟಾಗಿ ಸಂಘಟಿಸಿ ಎದುರಾಗುವ ಯಾವುದೇ ರೀತಿಯ ತೊಡಕುಗಳನ್ನು ಸಮರ್ಥವಾಗಿ ನಿಭಾಯಿಸಿದವರಲ್ಲಿ ಜಿ.ಮಾದೇಗೌಡರು ಒಬ್ಬರು. ಅವರು ಆಯ್ಕೆ ಮಾಡಿಕೊಂಡ ಕ್ಷೇತ್ರಗಳಲ್ಲಿ ಶೋಷಿತವರ್ಗವನ್ನು ಶೋಷಣೆಯಿಂದ ಮುಕ್ತಗೊಳಿಸುವಲ್ಲಿ ಅವರ ಚಿಂತನಾತ್ಮಕ ಹೋರಾಟಗಳು ಉದಾರಹಣೆಯಾಗಿದೆ.

ಕರ್ನಾಟಕ ರಾಜ್ಯ ಜಿ.ಮಾದೇಗೌಡರನ್ನು ಗುರುತಿಸುವುದೇ ಉತ್ತಮ ನಾಯಕತ್ವ ಹಾಗೂ ಚಿಂತನಾತ್ಮಕ ಹೋರಾಟಗಳ ಕಾರಣಕ್ಕಾಗಿ. ಗಡಿ ಸಮಸ್ಯೆ, ಭಾಷಾ ಸಮಸ್ಯೆ, ಜಲವಿವಾದ, ಸರ್ಕಾರದ ರೈತ ವಿರೋಧಿ ನೀತಿಗಳು, ಖಾಸಗಿ ಕಂಪನಿಗಳ ದೌರ್ಜನ್ಯದಂತಹ ಸಂದರ್ಭಗಳಲ್ಲಿ ಕರ್ನಾಟಕದ ರೈತರ ಧ್ವನಿಯಾಗಿ ಅವುಗಳ ವಿರುದ್ಧ ಹೋರಾಟ ಮಾಡಿ ಚಳವಳಿ ರೂಪಿಸಿ ಯಶಸ್ವಿಯಾಗಿದ್ದಾರೆ. ಅದರಲ್ಲಿ ಪ್ರಮುಖವಾಗಿ ವರುಣಾ ನಾಲಾ ವಿರೋಧಿ ಚಳುವಳಿ, ಕಾವೇರಿ ನದಿ ನೀರಿನ ಹಂಚಿಕೆಯಲ್ಲಿ ರೈತರ ಹಿತ ಕಾಯುವಲ್ಲಿ ದುಡಿಯುತ್ತಿದ್ದಾರೆ. ಕಾವೇರಿ ಚಳವಳಿಯ ಬಗ್ಗೆ ಸಂಪೂರ್ಣ ಮಾಹಿತಿ ಹೊಂದಿರುವ ಇವರು ಕಾವೇರಿ ನದಿ ನೀರಿನ ವಿವಾದಕ್ಕೆ ಸಂಬಂಧಿಸಿದಂತೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಇಂದಿಗೂ ಪರಿತಪಿಸುತ್ತಿರುವುದು ಅವರು ರೈತರ ಬಗೆಗೆ ಹೊಂದಿರುವ ಕಾಳಜಿಯ ಪ್ರತೀಕವಾಗಿದೆ ಹಾಗೂ ಭಾಷೆ ಉಳುವಿಗಾಗಿ ನಡೆದ ಗೋಕಾಕ್ ಚಳುವಳಿಯಲ್ಲಿ ಸಹ ಭಾಗವಹಿಸಿದ್ದಾರೆ. ಜಿಲ್ಲೆಯಲ್ಲಿ ಬೃಹತ್ ಪ್ರಮಾಣದಲ್ಲಿ ಹೋರಾಟವನ್ನು ಸಂಘಟಿಸಿ ಅಂತಿಮವಾಗಿ ಬೆಂಗಳೂರಿನಲ್ಲಿ ನಡೆದ ಗೋಕಾಕ್ ಚಳುವಳಿಯಲ್ಲಿ ಭಾಗವಹಿಸಿ ಬೆಂಬಲವಾಗಿ ಕನ್ನಡ ಭಾಷೆಯ ಉಳುವಿಗಾಗಿ ಶ್ರಮಿಸಿದ್ದಾರೆ.

ತಮ್ಮ ಜೀವನದುದ್ದಕ್ಕೂ ಗಾಂಧಿತತ್ವಗಳನ್ನು ಅಕ್ಷರಶಃ ಮೈಗೂಡಿಸಿಕೊಂಡು ತಮ್ಮ ಚಿಂತನೆ ಹಾಗೂ ಹೋರಾಟಗಳಲ್ಲೆಲ್ಲಾ ಗಾಂಧಿ ತತ್ವಾದರ್ಶಗಳನ್ನು ಚಾಚುತಪ್ಪದೇ ಪಾಲಿಸಿದ್ದಾರೆ. 40 ವರ್ಷಗಳು ಸುದೀರ್ಘವಾಗಿ ರಾಜಕೀಯ ಕ್ಷೇತ್ರದಲ್ಲಿದ್ದರೂ ಕೂಡ ಭ್ರಷ್ಟಾಚಾರವನ್ನು ಹತ್ತಿರ ಸುಳಿಯಲು ಅವಕಾಶ ನೀಡಿರುವುದಿಲ್ಲ. ಭ್ರಷ್ಟಾಚಾರದ ಕಡು ವೈರಿಗಳಾಗಿ ಸಮಾಜವನ್ನು ತಿದ್ದುವ ಕೆಲಸವನ್ನು ನಾಲ್ಕು ದಶಕಗಳ ಹಿಂದೆಯೇ ಸದ್ದಿಲ್ಲದೇ ಪ್ರಾರಂಭಿಸಿ ಇಂದಿಗೂ ಭ್ರಷ್ಟಾಚಾರದ ಜೊತೆ ರಾಜಿಯಾಗಿಲ್ಲದಿರುವುದು ಪ್ರಸ್ತುತ ಹಾಗೂ ಭವಿಷ್ಯದ ರಾಜಕೀಯ ನಾಯಕರೆಲ್ಲರಿಗೂ ಮಾದರಿಯಾಗಿದ್ದಾರೆ. ಯಾವುದಾದರೊಂದು ವಿಶೇಷ ಯೋಜನೆಯನ್ನು ರೂಪಿಸಿ ರೈತರಿಗೆ, ವಿದ್ಯಾರ್ಥಿಗಳಿಗೆ, ವರ್ತಕರಿಗೆ, ಮಹಿಳೆಯರಿಗೆ, ನಿರುದ್ಯೋಗಿಗಗಳಿಗೆ ಅನುಕೂಲ ಮಾಡಿಕೊಡಬೇಕೆಂಬ

ಬಯಕೆ ಅವರಲ್ಲಿ ಇಂದಿಗೂ ಚಿಂತನೆ ಕ್ರಿಯಾಶೀಲವಾಗಿದೆ. ಕೇವಲ ಮಾತುಗಳಲ್ಲಿ, ಭಾಷಣಗಳಲ್ಲಿ, ಪುಸ್ತಕಗಳಲ್ಲಿ ಹಾಗೂ ವಾಹಿನಿಗಳಲ್ಲಿ ಸಮಾಜದ ಅಭಿವೃದ್ಧಿಯ ಬಗೆಗೆ ನಾಟಕೀಯವಾಗಿ ಚಿಂತಿಸುವ, ಚಪ್ಪಾಳೆ ಗಿಟ್ಟಿಸಿಕೊಳ್ಳುವ ನಕಲಿನಾಯಕರಿಗೆ ವಿರುದ್ಧವೆಂಬಂತೆ ಅಂದುಕೊಂಡದ್ದನ್ನು ಅಕ್ಷರಶಃ ಕಾರ್ಯರೂಪಕ್ಕೆ ತರುವಲ್ಲಿ ಜಿ.ಮಾದೇಗೌಡರು ಒಬ್ಬರು. ತಳಮಟ್ಟದ ಜನಸಾಮಾನ್ಯರಿಗೆ ಸೌಲಭ್ಯಗಳನ್ನು ತಲುಪಿಸುವ ನಿತ್ಯ ಕಾಯಕದಲ್ಲಿ ತೊಡಗಿಸಿಕೊಂಡು ಎಲ್ಲರನ್ನು ಮೀರಿಸುವ ಚಿಂತನಾತ್ಮಕ ಹೋರಾಟಕ್ಕೆ ಜಿ.ಮಾದೇಗೌಡರು ನಿದರ್ಶನವಾಗಿದ್ದಾರೆ.

ಮಂಡ್ಯದ ಸಮಗ್ರ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಆರೋಗ್ಯ, ರಾಜಕೀಯ, ಆಧ್ಯಾತ್ಮಿಕ ಹಾಗೂ ಪ್ರವಾಸೋದ್ಯಮ ಕ್ಷೇತ್ರದಲ್ಲಿ ಮಂಡ್ಯ ಜಿಲ್ಲೆಯ ಹೆಸರು ರಾಷ್ಟ್ರ ಹಾಗೂ ರಾಜ್ಯದಲ್ಲಿ ನಿರ್ಮಾಣಗೊಳಿಸುವಲ್ಲಿ ತಮ್ಮದೇ ಆದ ಕೊಡುಗೆ ಸಲ್ಲಿಸಿದ್ದಾರೆ. ಚಿಂತನಾತ್ಮಕ ಹೋರಾಟಗಾರರಾದ ಇವರ ಆದರ್ಶಗಳು ಹಾಗೂ ನಾಯಕಗುಣವನ್ನು ಇಂದಿನ ರಾಜಕಾರಣಿಗಳು ಮತ್ತು ಮುಂದಿನ ಯುವ ಪೀಳಿಗೆ ಅಳವಡಿಸಿಕೊಂಡರೆ ಭವಿಷ್ಯದಲ್ಲಿ ಮಹಾತ್ಮಗಾಂಧೀಜಿ ಅವರು ಕಂಡ ಕನಸಿನ ಗ್ರಾಮ ಸ್ವರಾಜ್ಯದ ಕಲ್ಪನೆ ಸಾಕಾರಗೊಳ್ಳುತ್ತದೆ. ಗ್ರಾಮ–ನಗರ, ಸ್ತ್ರೀ–ಪುರುಷ, ಬಡವ–ಬಲ್ಲಿದರೆನ್ನದೆ, ಜಾತಿ–ಭೇದವೆಣಿಸದೆ ಸಮಾಜದ ಜಾಗೃತಿಯಲ್ಲಿ ಸದಾ ತೊಡಗಿಸಿಕೊಂಡಿರುವ ಚಿಂತನಾತ್ಮಕ ಹೋರಾಟಗಾರ ಜಿ.ಮಾದೇಗೌಡರ ಚಿಂತನೆ ಹಾಗೂ ಹೋರಾಟದ ಸಂಶೋಧನಾ ಅಧ್ಯಯನದಿಂದ ಈ ಕೆಳಕಂಡ ಫಲಿತಗಳನ್ನು ಕ್ರೂಢೀಕರಿಸಲಾಗಿದೆ.

## ಅಧ್ಯಾಯನದ ಫಲಿತಗಳು

- ಮೈಸೂರು ಸಂಸ್ಥಾನದ ಮೊದಲ ಧ್ವಜ ಸತ್ಯಾಗ್ರಹವಾದ ಶಿವಪುರ ರಾಷ್ಟ್ರಕೂಟದಲ್ಲಿ ಭಾಗವಹಿಸುವ ಮೂಲಕ ಜಿ. ಮಾದೇಗೌಡರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು. ಜೊತೆಗೆ ಮೂರು ದಿನದ ಅಧಿವೇಶನದಲ್ಲಿ ಭಾಗವಹಿಸಿದ ಪ್ರಮುಖ ಸ್ವಾತಂತ್ರ್ಯ ಹೋರಟಗಾರರಾಗಿದ್ದ ಹೆಚ್.ಕೆ.ವೀರಣ್ಣ ಗೌಡ, ಪಿ.ಎಸ್.ಜವರಪ್ಪಗೌಡ, ಹೆಚ್.ಸಿ.ದಾಸಪ್ಪ, ಕೆಂಗಲ್ ಹನುಮಂತಯ್ಯ, ಕೆ.ಸಿ.ರೆಡ್ಡಿ, ಯಶೋಧರಮ್ಮ ದಾಸಪ್ಪ, ಬಳ್ಳಾರಿ ಸಿದ್ದಮ್ಮ ಇವರನ್ನು ನೋಡುವ ಸದಾವಕಾಶ ದೊರಕಿತ್ತು. ಇವರ ಜೀವನದ ಮೇಲೆ ರಾಷ್ಟ್ರಪ್ರೇಮ ಅಗಾಧವಾಗಿ ಪ್ರಭಾವ ಬೀರಿತು. ಮೂರುದಿನಗಳ ಈ ಹೋರಾಟದಲ್ಲಿ ನೀರು ಕೊಡುವ ಕಾಯಕವನ್ನು ನಿರ್ವಹಿಸಿದರು. ಬಾಲ್ಯದಿಂದಲೇ ಯಾವುದೇ ಕೆಲಸವನ್ನು

ಕೊಟ್ಟರು ಶಿಸ್ತು, ಸಮಯಪ್ರಜ್ಞೆಯಿಂದ ಅಚ್ಚುಕಟ್ಟಾಗಿ ನಿಭಾಯಿಸುವುದನ್ನು ಮೈಗೂಡಿಸಿಕೊಂಡಿರುವುದನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

- ಭಾರತ ಸ್ವಾತಂತ್ರ್ಯದ ಪ್ರಮುಖ ಘಟ್ಟವಾದ ಕ್ವಿಟ್ ಇಂಡಿಯಾ ಚಳುವಳಿಯು ಮಂಡ್ಯ ಜಿಲ್ಲೆಯಲ್ಲಿಯೂ ಸಹ ವ್ಯಾಪಕವಾಗಿ ನಡೆಯಿತು. ಜಿ. ಮಾದೇಗೌಡರು ಗುಪ್ತವಾಗಿ ಕರಪತ್ರ ಹಂಚುವ ಕಾಯಕವನ್ನು ಈ ಚಳುವಳಿಯಲ್ಲಿ ನಿರ್ವಹಿಸಿದರು. ದೇಶಸೇವೆ ಮಾಡುವ ಅವಕಾಶ ಒದಗಿಬಂತು. ಇಂತಹ ಅವಕಾಶವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡರು. ಸ್ವಾತಂತ್ರ್ಯದ ನಂತರದಲ್ಲಿ ಎಷ್ಟು ಹೋರಾಟಗಾರರು ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿಯನ್ನು ಪಡೆದು ಕೊಳ್ಳುತ್ತಿದ್ದಾರೆ. ಆದರೆ ಪಿಂಚಣಿಯನ್ನು ಪಡೆದುಕೊಳ್ಳದೆ ದೇಶಸೇವೆ ಮಾಡವುದೇ ಮೊದಲ ಕಾರ್ಯಕವಾಗಿದೆ ಎಂದು ತಿಳಿದುಕೊಂಡ ಜಿ. ಮಾದೇಗೌಡರು ತಾಯ್ನಾಡಿನ ಋಣ ತೀರಿಸುವ ನಿಟ್ಟಿನಲ್ಲಿ ನಿಸ್ವಾರ್ಥ ಸೇವೆಯನ್ನು ಮಾಡುವುದರ ಮೂಲಕ ಜೀವನ ನಡೆಸಿದ್ದಾರೆ ಎಂಬುದನ್ನು ಸಂಶೋಧನೆಯಿಂದ ತೀರ್ಮಾನಿಸಬಹುದು.

- ಭಾರತದ ಸ್ವಾತಂತ್ರ್ಯದ ನಂತರ ಕರ್ನಾಟಕ ಏಕೀಕರಣ ಕಾರ್ಯವೂ ಅಪೂರ್ಣಗೊಂಡಿತ್ತು. ಈ ಸಂದರ್ಭದಲ್ಲಿ ಕರ್ನಾಟಕದಾದ್ಯಂತ ಏಕೀಕರಣ ಚಳುವಳಿಯು ತೀವ್ರ ಬಿರುಸಿನಿಂದ ಕೂಡಿತ್ತು. ಆದರೆ ಮೈಸೂರು ಸಂಸ್ಥಾನದಲ್ಲಿ ಮೈಸೂರು ಯಥಾಸ್ಥಿತಿ ಉಳಿಯಲೆಂದು ಜನರ ಹೆಬ್ಬೆಯಕೆಯಾಗಿತ್ತು. ಇದಕ್ಕಾಗಿ ಮಂಡ್ಯದಲ್ಲಿ ಮೈಸೂರು ವಿಲೀನವಿರೊಧಿ ಚಳುವಳಿಯನ್ನು ಆರಂಭಿಸಿದರು. ಮಂಡ್ಯದಲ್ಲಿ 1956ರಲ್ಲಿ ಮೈಸೂರುವಿಲೀನ ವಿರೋಧಿ ಸಮ್ಮೇಳನ ಮಾಡಲಾಯಿತು. ಇದರಲ್ಲಿ ಪ್ರಮುಖ ಪಾತ್ರವಹಿಸಿದವರಲ್ಲಿ ಹೆಚ್.ಕೆ.ವೀರಣ್ಣ ಗೌಡ, ಕೆ.ವಿ.ಶಂಕರಗೌಡ, ಪಿ.ಎನ್.ಜವರಪ್ಪಗೌಡ ಇವರ ಸಾಲಿನಲ್ಲಿ ಯುವ ನಾಯಕರಾಗಿ ಜಿ. ಮಾದೇಗೌಡರೂ ಸಹ ಒಬ್ಬರಾಗಿ ಗುರುತಿಸಿಕೊಂಡರು. ತರುವಾಯ ಬಹುಜನರ ಇಚ್ಚೆಯಂತೆ ಕರ್ನಾಟಕವೂ ಏಕೀಕರಣಗೊಂಡಿತು. ಆದರೆ ರಾಜ್ಯಕ್ಕೆ ಕರ್ನಾಟಕ ಎಂಬ ಹೆಸರಿನ ಬದಲಾಗಿ ಮೈಸೂರು ರಾಜ್ಯ ಎಂಬ ಹೆಸರನ್ನು ಉಳಿಸಿಕೊಳ್ಳಲು ಆ ಸಂದರ್ಭದಲ್ಲಿ ಈ ನಾಯಕರ ಹೋರಾಟ ಯಶಸ್ವಿಯಾಯಿತು ಎಂಬುದನ್ನು ಅಧ್ಯಯನದಿಂದ ನಿರೂಪಿಸ ಬಹುದು.
- ಶಿಕ್ಷಣದಲ್ಲಿ ಕನ್ನಡಕ್ಕೆ ಮೊದಲ ಆದ್ಯತೆ ನೀಡಬೇಕೆಂದು ಅಂದಿನ ಮುಖ್ಯಮಂತ್ರಿ ಆರ್.ಗುಂಡುರಾವ್ ಸರ್ಕಾರ ವಿ.ಕೃ.ಗೋಕಾಕ್ ಸಮಿತಿಯನ್ನು ರಚಿಸಿತು. ಈ ಸಮಿತಿಯ ಶಿಫಾರಸ್ಸನ್ನು ಸರ್ಕಾರ ಜಾರಿಗೊಳಿಸದಿದ್ದ ಸಂದರ್ಭದಲ್ಲಿ ಗೋಕಾಕ್ ಚಳುವಳಿ ರಾಜ್ಯದಾದ್ಯಂತ ಅರಂಭವಾಯಿತು. ಈ ಚಳುವಳಿ ಮಂಡ್ಯ ಜಿಲ್ಲೆಗೂ ವ್ಯಾಪಿಸಿತು. ಈ ಚಳುವಳಿಯಲ್ಲಿ ಚಿತ್ರನಟರು, ರಾಜಕೀಯ ಮುಖಂಡರು, ವಿವಿಧ ಸಂಘ–ಸಂಸ್ಥೆಗಳ ನಾಯಕರು, ಸಾಹಿತಿಗಳು, ಪ್ರಗತಿಪರ ಚಿಂತಕರು,

ಕನ್ನಡಪರ ಮನಸ್ಸುಗಳು, ವಿದ್ಯಾರ್ಥಿಗಳು, ಕಾರ್ಮಿಕರು, ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸಿದರು. ಈ ಚಳುವಳಿಯನ್ನು ಅಚ್ಚುಕಟ್ಟಾಗಿ ಜಿ.ಮಾದೇಗೌಡರು ರೂಪಿಸಿದರು. ಮಂಡ್ಯ ಜಿಲ್ಲೆಯಲ್ಲಿ ಎಲ್ಲರೂ ಈ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಹಾಗೂ ಈ ಚಳುವಳಿ ಮಂಡ್ಯ ಜಿಲ್ಲೆಯಲ್ಲಿ ನಡೆಯಲು ಜಿ. ಮಾದೇಗೌಡರೇ ಕಾರಣರಾದರು. ಭಾಷೆಯ ಉಳಿವಿಗಾಗಿ ಇವರೊಂದಿಗೆ ಈ ಮೇಲಿನವರು ಕೈ ಜೋಡಿಸಿದರು ಹಾಗೂ ಗೋಕಾಕ್ ಶಿಫಾರಸ್ಸು ಬರುವಂತೆ ಜಿಲ್ಲೆಯ ಹೋರಾಟಗಾರರು ಮುಖ್ಯಮಂತ್ರಿಗಳ ಮೇಲೆ ಒತ್ತಡ ಹೇರುವಲ್ಲಿಯಶಸ್ವಿಯಾದರು ಎಂಬುದನ್ನು ಫಲಿತದಲ್ಲಿ ದೃಢೀಕರಿಸಬಹುದು.

- ಬಡ ರೈತಾಪಿ ಕುಟುಂಬದಿಂದ ಬಂದ ಜಿ. ಮಾದೆಗೌಡರು ರಾಜಕೀಯದಲ್ಲಿ ಹಂತ ಹಂತವಾಗಿ ಬೆಳದು ಶಾಸಕರಾಗಿ, ಸಚಿವರಾಗಿ, ಲೋಕಸಭಾ ಸದಸ್ಯರಾಗಿದ್ದರು. ಆದರೆ ಅವರ ಜೀವನ ಶೈಲಿಯಲ್ಲಿ ವಿಲಾಸಿ, ಐಷರಾಮಿ ಬದಲಾವಣೆಗಳು, ಭ್ರಷ್ಟಾಚಾರ, ಹಗರಣದಲ್ಲಿ ಭಾಗಿಯಾಗುವುದು ಹಾಗೂ ರಾಜಕೀಯದಲ್ಲಿ ಯಾವುದು ಕಪ್ಪುಚುಕ್ಕಿ ಕಂಡುಬಂದಿರುವುದಿಲ್ಲ. ಇದಕ್ಕೆ ಕಾರಣ ಚಿಕ್ಕವಯಸ್ಸಿನಿಂದಲೂ ಗಾಂಧೀಜಿಯವರ ತತ್ವಸಿದ್ಧಾಂತಗಳನ್ನು ಮೈಗೂಡಿಸಿ ಕೊಂಡಿರುವುದೇ ಕಾರಣವೆಂದು ಹೇಳಬಹುದು. ಅವರ ಜೀವನದಲ್ಲಿ ಸರಳತೆ, ಪ್ರಾಮಾಣಿಕತೆ, ಮಿತಿಭಾಷೆ, ಸಂದರ್ಭಕ್ಕೆ ಹೊಂದಿಕೊಳ್ಳುವ ಸ್ವಭಾವ, ಪರೋಪಕಾರ, ನಿಸ್ವಾರ್ಥಸೇವಾ ಗುಣಗಳು ಯುವಜನಾಂಗಕ್ಕೆ ಮಾದರಿ ಯಾಗಿವೆ ಎಂಬುದನ್ನು ಸಂಶೋಧನಾ ಅಧ್ಯಯನದಿಂದ ದೃಢೀಕರಿಸಲಾಗಿದೆ.
- ಡಿ.ದೇವರಾಜು ಅರಸರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಕಾವೇರಿನದಿಗೆ ವರುಣಾ ನಾಲಾ ಯೋಜನೆ ರೂಪಿಸಿದ್ದರು. ಈ ಯೋಜನೆ ವರುಣಾ ಮಂಡ್ಯ ಜಿಲ್ಲೆಗೆ ಮರಣ ಎಂದು ಜಿಲ್ಲೆಯ ಪ್ರಮುಖ ನಾಯಕರು ಒಟ್ಟಾಗಿ ವಿರೋಧಿಸಿದ್ದರು. ಈ ಸಂದರ್ಭದಲ್ಲಿ ಜಿ. ಮಾದೇಗೌಡರು ತನ್ನ ಜಿಲ್ಲೆಯ ಜನರ ಹಿತಶಕ್ತಿಯೇ ಮುಖ್ಯವೆಂದು ವರುಣಾ ನಾಲಾ ವಿರೋಧಿ ಚಳುವಳಿಯ ನೇತೃತ್ವವ ವಹಿಸಿಕೊಂಡರು. ಈ ಚಳುವಳಿಯ ಒಂದು ಭಾಗವಾಗಿ ಚಡ್ಡಿ ಚಳುವಳಿಯನ್ನು ನಡೆಸಿದರು. ಇದು ಭಾರತದ ಗಮನವನ್ನು ಸೆಳೆಯಿತು. ಆದರೆ ಚಳುವಳಿ ವಿಫಲವಾಯಿತು. ಈ ಚಳುವಳಿಯಲ್ಲಿ ಜಿ. ಮಾದೇಗೌಡರ ವಿಶಾಲದೃಷ್ಟಿಕೋನ ಅವಶ್ಯಕವಾಗಿತ್ತು. ಈ ಚಳುವಳಿಯ ಸಂದರ್ಭದಲ್ಲಿ ನೆರೆ ಹೊರೆಯ ಜಿಲ್ಲೆಗಳ ಜನರ ಹಿತಾಸಕ್ತಿಯನ್ನು ಪರಿಗಣಿಸದೆ ಹೋದರು. ಇದು ಇವರನ್ನು ರಾಜ್ಯಮಟ್ಟದ ನಾಯಕರಾಗಿ ಗುರುತಿಸಿಕೊಳ್ಳುವ ಅವಕಾಶವನ್ನು ಕಳೆದುಕೊಳ್ಳು ವಂತೆ ಮಾಡಿತು. ಹೀಗಾಗಿ ಗೌಡರ ಹೋರಾಟ ಮಂಡ್ಯ ಜಿಲ್ಲೆಗೆ ಮಾತ್ರ ಸೀಮಿತವಾಯಿತು ಎಂಬುದನ್ನು ಸಂಶೋಧನೆಯಿಂದ ಕಂಡು ಕೊಳ್ಳಲಾಗಿದೆ.

- ಕಾವೇರಿ ನದಿ ನೀರಿನ ಹಂಚಿಕೆ ಹೋರಾಟದಲ್ಲಿ ಜಿ. ಮಾದೇಗೌಡರು ತಮ್ಮ ಜೀವನದ ಉದ್ದಕ್ಕೂ ಮುಂಚೂಣಿ ನಾಯಕರಾಗಿದ್ದಾರೆ. ಕಾವೇರಿ ನದಿ ನೀರಿನ್ನು ನಾಲ್ಕು ರಾಜ್ಯಗಳು ಹಂಚಿಕೊಳ್ಳುತ್ತಿದ್ದು, ಸ್ವತಂತ್ರ ಪೂರ್ವದಿಂದಲೂ ವಿವಾದಕ್ಕೆ ಒಳಗಾಗಿದೆ. ಸ್ವತಂತ್ರ್ಯ ನಂತರ ಅಸ್ತಿತ್ವಕ್ಕೆ ಬಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಾಗಲೀ ಈ ವಿವಾದಕ್ಕೆ ಅಂತಿಮ ಪರಿಹಾರ ಕಂಡುಕೊಳ್ಳಲು ವಿಫಲವಾಗಿವೆ. ಕಾವೇರಿ ಹೋರಾಟ ಎಂದರೆ ಕರ್ನಾಟಕದಲ್ಲಿ ಮಂಡ್ಯ ಜಿಲ್ಲೆಗೆ ಮಾತ್ರ ಸೀಮಿತವಾಗಿದೆ. ಆದರೆ ದಕ್ಷಿಣ ಕರ್ನಾಟಕದ ಜಿಲ್ಲೆಗಳಿಗೆ ದಿನನಿತ್ಯದ ಜೀವನಕ್ಕೆ ಕಾವೇರಿ ನದಿ ನೀರು ಬಹು ಅವಶ್ಯಕವಾಗಿದೆ. ಆದರೆ ಪ್ರಕೃತಿ ಮುನಿಸಿಕೊಂಡಾಗ, ಕಾವೇರಿ ನದಿ ನೀರಿನ ಸಮಸ್ಯೆ ತಲೆದೋರಿದಾಗ ಹೋರಾಟಕ್ಕೆ ಜಿ. ಮಾದೇಗೌಡರು ನೇತೃತ್ವ ವಹಿಸುತ್ತಾರೆ. ಹೋರಾಟ ಮಂಡ್ಯ ಜಿಲ್ಲೆಗೆ ಮಾತ್ರ ಸೀಮಿತವಾಗುತ್ತದೆ. ಹೀಗಾಗಿ ಗೌಡರ ಒಟ್ಟಾರೆ ಜೀವನ ಅವಲೋಕಿಸಿದಾಗ ವ್ಯಕ್ತಿಗತ ನೆಲೆಯಲ್ಲಿ ಅವರು ಸಫಲವಾಗಿಲ್ಲದಿದ್ದರೂ ಅವರು ರೂಪಿಸಿದ ಕಾವೇರಿ ನದಿ ನೀರಿಗಾಗಿನ ಹೋರಾಟಗಳು ಆ ಸಂದರ್ಭಕ್ಕೆ ಸಫಲವಾಗಿವೆ. ಆದರೆ ಕಾವೇರಿ ನದಿ ನೀರಿನ್ನು ಸಮಾನವಾಗಿ ಹಂಚಿಕೊಳ್ಳುವ ಮೂಲಕ ಪರಿಹಾರ ಕಂಡುಕೊಳ್ಳಬೇಕೆಂಬ ಸದುದ್ದೇಶವನ್ನು ಈಗಲೂ ಜಿ. ಮಾದೇಗೌಡರು ಹೊಂದಿದ್ದಾರೆ. ಸಾರ್ವಜನಿಕರ ಬದುಕಿಗಾಗಿ ಹೊಂದಿರುವ ಉತ್ತಮ ಕಾಳಜಿಗಳನ್ನು ಪ್ರಸ್ತುತ ಅಧ್ಯಯನದಿಂದ ಪರಿಶೀಲನೆ ಮಾಡಲಾಗಿದೆ.

- ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಯಾದ ನಂತರ ಅದಕ್ಕೆ ಸಾಗಿಸುತ್ತಿದ್ದ ಪ್ರತಿಟನ್ ಕಬ್ಬಿಗೆ ಒಂದು ರೂಪಾಯಿಯನ್ನು ಭಾರತೀ ವಿದ್ಯಾಸಂಸ್ಥೆಗೆ ಸಂದಾಯವಾಗುವಂತೆ ಯೋಜನೆ ರೂಪಿಸಿದ್ದರು. ಈ ಯೋಜನೆಯನ್ನು ಗಮನಿಸಿದಾಗ ರೈತರಿಗೆ, ಹಿಂದುಳಿದವರ್ಗದ ಮಕ್ಕಳ ವಿದ್ಯಾಭ್ಯಾಸಕ್ಕೆ ಈ ಹಣವನ್ನು ಸದುಪಯೋಗ ಮಾಡಿಕೊಳ್ಳಲಾಗುತ್ತಿತ್ತು. ಈ ಯೋಜನೆಯು ಜಿ. ಮಾದೇಗೌಡರ ದೂರದೃಷ್ಟಿತ್ವದ ಅತ್ಯುತ್ತಮ ಉದಾಹರಣೆಯಾಗಿದೆ. ಜನಸಾಮಾನ್ಯರು ಹಳ್ಳಿಗಾಡಿನ ರೈತರ ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಈ ಯೋಜನೆ ಸಹಾಯಕವಾಗಿದೆ ಹಾಗೂ ಸುತ್ತುಮುತ್ತಲಿನ ಜಿಲ್ಲೆಗಳ ವಿದ್ಯಾರ್ಥಿಗಳಿಗೂ ಸಹಾಯಕವಾಗಿರುವುದನ್ನು ಪ್ರಸ್ತುತ ಅಧ್ಯಯನ ದಿಂದ ಪರಿಶೀಲಿಸಲಾಗಿರುವುದು ವಿಶೇಷವಾಗಿದೆ.
- 1970ರ ದಶಕದಲ್ಲಿ ಕುಗ್ರಾಮವಾಗಿದ್ದ ಕಾಳಮುದ್ದನದೊಡ್ಡಿಯನ್ನು ಇಂದು ಭಾರತೀನಗರ ಎಂದು ಖ್ಯಾತಿ ಬರುವಷ್ಟರ ಮಟ್ಟಿಗೆ ಜಿ.ಮಾದೇಗೌಡರೇ ಕಾರಣ. ಅಂದರೆ ಈ ಪ್ರದೇಶ ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿತ್ತು. ಜಿ.ಮಾದೇಗೌಡರ ದೂರದೃಷ್ಟಿತ್ವದಿಂದ ಶಿಕ್ಷಣ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆ ಮಾಡಿದ್ದಾರೆ. ಇದರ ಪ್ರತಿಫಲವಾಗಿ ಅಂದರೆ

ಒಬ್ಬ ವ್ಯಕ್ತಿ ಸಮಾಜದ ಹಿತಕ್ಕಾಗಿ ದೂರದೃಷ್ಟಿಯಿಂದ ಚಿಂತನೆ ನಡೆಸಿದ್ದಾಗ ಇಂತಹ ಸಾಮಾಜಿಕ ಕಾರ್ಯಗಳಲ್ಲಿ ಬದಲಾವಣೆ ಆಗುವುದಕ್ಕೆ ಸಾಧ್ಯವೆಂಬುದನ್ನು ಸಂಶೋಧನೆಯಿಂದ ನಿರ್ಧಾರ ತಳೆಯಬಹುದಾಗಿದೆ. ಅಂದರೆ ಆರ್ಥಿಕವಾಗಿ ಸಕ್ಕರೆ ಕಾರ್ಖಾನೆ ನಿರ್ಮಾಣ, ಶೈಕ್ಷಣಿಕವಾಗಿ ಪ್ರಾಥಮಿಕ ಶಾಲೆಯಿಂದ ಸ್ನಾತಕೋತ್ತರ, ಪಿಎಚ್.ಡಿ. ಅಧ್ಯಯನ ಕೇಂದ್ರಗಳ ಸ್ಥಾಪನೆ, ಬಡಮಹಿಳೆ ಹಾಗೂ ಪುರುಷರು ಜೀವನ ಕಟ್ಟಿಕೊಳ್ಳಲು ಸ್ವ-ಉದ್ಯೋಗ ಕೇಂದ್ರ ಸ್ಥಾಪನೆ, ಆರೋಗ್ಯ ದೃಷ್ಟಿಯಿಂದ ಸಾರ್ವಜನಿಕ ಅಸ್ಪತ್ರೆ ಸ್ಥಾಪನೆಯಿಂದಾಗಿ ಕರ್ನಾಟಕದ ಪ್ರಮುಖ ಶೈಕ್ಷಣಿಕ ಕೇಂದ್ರ, ಆರ್ಥಿಕ ಚಟುವಟಿಕೆಗಳ ಕೇಂದ್ರಗಳಲ್ಲಿ ಒಂದಾಗಿದೆ ಎಂಬ ನಿಲುವು ತಳೆಯಬಹುದು.

- ಜಿ. ಮಾದೇಗೌಡರು 30 ವರ್ಷಗಳ ಕಾಲ ವಿಧಾನಸಭಾ ಸದಸ್ಯರಾಗಿ, ಸಚಿವರಾಗಿ ಸದನದ ಕಲಾಪದಲ್ಲಿ ಅನೇಕ ವಿಚಾರಗಳನ್ನು ಸಭಾಧ್ಯಕ್ಷರು, ಸಚಿವರುಗಳು, ಶಾಸಕರುಗಳ ಜೊತೆ ಚರ್ಚಿಸಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಸಫಲರಾಗಿದ್ದಾರೆ. ಅವುಗಳೆಂದರೆ, ಸಹಕಾರಿ ಕ್ಷೇತ್ರ, ಕೃಷಿ ಕ್ಷೇತ್ರ, ಶಿಕ್ಷಣ ಕ್ಷೇತ್ರ, ಪಂಚಾಯಿತಿ ಚುನಾವಣೆ, ಅಣೆಕಟ್ಟೆಗಳ ಯೋಜನೆ, ಪಂಚವಾರ್ಷಿಕ ಯೋಜನೆ, ನಿರುದ್ಯೋಗ ಸಮಸ್ಯ, ಪಾನ ನಿರೋಧ ನಿಷೇಧದ ಬಗ್ಗೆ, ಆಡಳಿತದಲ್ಲಿ ಪಾರದರ್ಶಕತೆಯ ಜಾರಿಗೆ ಬಗ್ಗೆ, ರೈತರ ಹಕ್ಕುಬಾಧ್ಯತೆಗಳ ಸೂಚನೆಗಳ ಬಗ್ಗೆ, ಭೂ ರಹಿತರಿಗೆ ಸಾಗುವಳಿ ಜಮೀನು ನೀಡುವ ಬಗ್ಗೆ, ಅರಣ್ಯ ಅಭಿವೃದ್ಧಿ ಬಗ್ಗೆ, ಸಮಾಜ ಕಲ್ಯಾಣದ ಅನೇಕ ವಿಚಾರಗಳ ಬಗ್ಗೆ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿದ್ದಾರೆ. ಈ ಮೇಲಿನ ಎಲ್ಲಾ ವಿಚಾರಗಳು ಜಿ. ಮಾದೇಗೌಡರ ಗಾಂಧೀಜಿಯ ಚಿಂತನೆಯ ಪ್ರತೀಕವಾಗಿವೆ ಎಂಬುದನ್ನು ಸಂಶೋಧನೆಯ ಮೂಲಕ ಕಂಡುಕೊಳ್ಳಲಾಗಿದೆ.
- ರಾಜಕೀಯ ಜೀವನದಲ್ಲಿರುವ ಜನಪ್ರತಿನಿಧಿಗಳು ಅಧಿಕಾರದಲ್ಲಿರುವಾಗ ಸರ್ಕಾರದ ಬಂಗಲೆ, ವಾಹನ, ಮುಂತಾದ ಸೌಲಭ್ಯಗಳನ್ನು ಅನುಭವಿಸಿ ನಂತರ ಅಧಿಕಾರದಿಂದ ಕೆಳಗೆ ಇಳಿದಾಗಲೂ ಈ ಸೌಲಭ್ಯಗಳನ್ನು ಬಯಸುತ್ತಾರೆ. ಜೊತೆಗೆ ತಮ್ಮ ಕುಟುಂಬದ ಸದಸ್ಯರು, ತಮ್ಮ ಹಿಂಬಾಲಕರಿಗೂ ಕೊಡಿಸಲು ಸಹಕರಿಸುತ್ತಾರೆ. ಸರ್ಕಾರದ ಸೌಲಭ್ಯಗಳನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಜಿ.ಮಾದೇಗೌಡರ 40 ವರ್ಷಗಳ ರಾಜಕೀಯ ಜೀವನದಲ್ಲಿ ಇಂತಹ ಯಾವುದೇ ಘಟನೆಗಳು ಕಂಡುಬರುವುದಿಲ್ಲ. ತಮ್ಮ ಪೂರ್ವಜರಿಂದ ಬಂದಿದ್ದ ಬೆಲೆಬಾಳುವ ಮನೆ ಹಾಗೂ ತೋಟವನ್ನು ಸಾರ್ವಜನಿಕ ಉಪಯೋಗಕ್ಕಾಗಿ ಗುರುದೇವರಹಳ್ಳಿಯಲ್ಲಿ ಸಾರ್ವಜನಿಕ ಆಸ್ಪತ್ರೆ ಸ್ಥಾಪಿಸಲು ಸರ್ಕಾರಕ್ಕೆ ನೀಡಿದ್ದಾರೆ. ಇಂತಹ ಕಾರ್ಯಗಳ ಮೂಲಕ ಜಿ.ಮಾದೇಗೌಡರ ಸಾಮಾಜಿಕ ಕಳಕಳಿಯನ್ನು ಅಧ್ಯಯನದ ಮೂಲಕ ರುಜುವಾತುಪಡಿಸುವ ಪ್ರಯತ್ನ ಈ ಅಧ್ಯಯನದ್ದು.

- ಗಾಂಧೀಜಿಯವರ ತತ್ವ ಸಿದ್ಧಾಂತಗಳನ್ನು ಹಳ್ಳಿಗಳಿಗೆ ಪ್ರಸರಿಸುವ ಸಲುವಾಗಿ ಗಾಂಧೀಭವನಗಳ ಸ್ಥಾಪನೆಯನ್ನು ಮಾಡಿದ್ದಾರೆ. ಅಲ್ಲದೆ ಗಾಂಧೀಜಿಯವರ ವಿಚಾರ ಸಂಕಿರಣ, ಗಾಂಧಿ ಕಿರುಚಿತ್ರ ಪ್ರಸರಣವನ್ನು ರಾಷ್ಟ್ರೀಯ ಸೇವಾ ಯೋಜನಾ ಶಿಬಿರಗಳಲ್ಲಿ, ಕಾಲೇಜುಗಳಲ್ಲಿ ಉಚಿತವಾಗಿ ಪ್ರಸಾರ ಮಾಡಲಾಗುತ್ತಿದೆ. ಸ್ವಾವಲಂಬಿ ಉದ್ಯೋಗಕ್ಕೆ ಉತ್ತೇಜನ, ಖಾದಿಗೆ ಪ್ರೋತ್ಸಾಹವನ್ನು ನೀಡುತ್ತಿದ್ದಾರೆ. ಇವು ಜಿ. ಮಾದೇಗೌಡರು ಗಾಂಧೀ ಚಿಂತನೆಗಳನ್ನು ಪ್ರತಿಯೊಬ್ಬರ ಜೀವನದ ಅಳವಡಿಕೆಗಾಗಿ ಮಾಡುತ್ತಿರುವ ದೊಡ್ಡ ಪ್ರಯತ್ನವಾಗಿದೆ ಹಾಗೂ ಗಾಂಧಿ ವಿಚಾರಗಳು ಜೀವಂತಿಕೆಯಾಗಿ ಉಳಿಯಲು ಸಕ್ರಿಯವಾಗಿರುವುದನ್ನು ಸಂಶೋಧನೆಯ ಮೂಲಕ ಸ್ಪಷ್ಟಪಡಿಸಬಹುದಾಗಿದೆ.
- ಜಿ.ಮಾದೇಗೌಡರ ಚಿಂತನೆ ಕಾರ್ಯಚಟುವಟಿಕೆಗಳನ್ನು ಅಭ್ಯಸಿಸಿದ್ದಾಗ ಪ್ರಮುಖವಾಗಿ ಗ್ರಾಮೀಣಾಭೀವೃದ್ದಿ ಮತ್ತು ಸ್ತ್ರಿ-ಸಾಮಾನ್ಯರ ಹಿತಾಸಕ್ತಿ ಕೇಂದ್ರವುಳ್ಳ ಕಾರ್ಯಚಟುವಟಿಕೆಗಳಾಗಿದ್ದವು. ಅವುಗಳೆಂದರೆ, ಭಾರತೀ ವಿದ್ಯಾಸಂಸ್ಥೆಯ ಸ್ಥಾಪನೆ, ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆ, ಆತ್ಮಲಿಂಗೇಶ್ವರ ದೇವಾಲಯ ಸ್ಥಾಪನೆ, ಬ್ಯಾಂಕುಗಳು, ಸಹಕಾರಿ ಸಂಘಗಳು, ವಿದ್ಯಾರ್ಥಿನಿಲಯಗಳು, ಸಾರಿಗೆ ಸೌಲಭ್ಯಗಳ ವಿಸ್ತರಣೆ, ಕಾಲುವೆಗಳ ಆಧುನೀಕರಣ ಇವೇ ಮೊದಲಾದ ಸಾಧನೆಗಳ ಮೂಲಕ ಹಳ್ಳಿಗಳನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಸಬಲೀಕರಣಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ ಎಂಬುದು ಅಧ್ಯಯನದಿಂದ ಸಾಬೀತಾಗಿದೆ.
- ಗ್ರಾಮೀಣ ಜನರ ಬದುಕು ಹಿತಾಸಕ್ತಿಗಳನ್ನು ಸ್ಥಳೀಯ ಜನಪ್ರತಿನಿಧಿಗಳೇ ರೂಪಿಸಬೇಕು ಮತ್ತು ನಿಯಂತ್ರಿಸಬೇಕು ಆದರೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ವಿದ್ಯಾಮಾನಗಳು ಸ್ಥಳೀಯ ಹಿತಾಸಕ್ತಿಗಳನ್ನು ನಿಯಂತ್ರಿಸುವ ಈ ಸಂದರ್ಭದಲ್ಲಿ ಇಂತಹ ಜಟಿಲತೆಗೆ ಜಿ. ಮಾದೇಗೌಡರ ಜೀವನವೇ ಉತ್ತರವಾಗಿದೆ. ಜಿ.ಮಾದೇಗೌಡರು ಜನಪ್ರತಿನಿಧಿ ಗಳಾಗಿ ರೂಪಿಸಿದ ನೀರಾವರಿ ಸೌಲಭ್ಯಗಳು, ಗ್ರಾಮೀಣ ಜನತೆಗೆ ಮೂಲಭೂತ ಸೌಕರ್ಯಗಳು ಸ್ಥಳೀಯ ಕೈಗಾರಿಕೆಗಳ, ಅಭಿವೃದ್ದಿ, ಕೆರೆ ಕಟ್ಟೆಗಳನ್ನು ದುರಸ್ತಿಗೊಳಿಸಿವುದು, ಆಸ್ಪತ್ರೆಗಳನ್ನು ಹೋಬಳಿ ಮಟ್ಟದಲ್ಲಿ ಸ್ಥಾಪಿಸುವುದು, ಶಾಲೆಗಳ ಸ್ಥಾಪನೆ, ಹಳ್ಳಿಗಳಲ್ಲಿ ಸಾರಾಯಿ ಅಂಗಡಿಗಳನ್ನು ಮುಚ್ಚುವಂತೆ ಮಾಡುವುದರಲ್ಲಿ ಪ್ರಮುಖವಾಗಿವೆ ಎಂಬುದನ್ನು ಅರಿಯಲಾಗಿದೆ.
- ಯಾವುದೇ ರೀತಿಯ ಚಳುವಳಿ, ಹೋರಾಟಗಳ ಮೂಲ ಸಂಸ್ಕೃತಿ. ತಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿ, ಜಡ್ಡುಕಟ್ಟಿದಂತೆ ತಮ್ಮ ಸುತ್ತ-ಮುತ್ತಲಿನ ಸಮಾಜವನ್ನು ಕ್ರಿಯಾಶೀಲವಾಗಿಡುವುದು ಅಷ್ಟು ಸುಲಭದ ಮಾತಲ್ಲ. ಗ್ರಾಮೀಣ ಪರಿಸರವನ್ನು ಕ್ರೀಯಾಶೀಲ ಪ್ರಗತಿಪರವನ್ನಾಗಿ ಪರಿವರ್ತಿಸಿ, ಅಲ್ಲಿನ

ಮೂಲಭೂತ ಸೌಕರ್ಯಗಳ ಪೂರೈಕೆಗಾಗಿ ಶ್ರಮಿಸಿದ್ದಾರೆ. ಪ್ರಮುಖವಾಗಿ ಕಾಳಮುದ್ದನದೊಡ್ಡಿಯಲ್ಲಿ ಕೋಳಿ ಸಾಗಾಕಾಣಿಕೆ, ರೇಷ್ಮೆ, ಹೈನುಗಾರಿಕೆ, ಮೀನುಗಾರಿಕೆ, ತೋಟಗಾರಿಕೆ, ಕರಕುಶಲ ಕೈಗಾರಿಕೆ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿ ಗ್ರಾಮೀಣ ಜನರಿಗೆ ತರಬೇತಿ ನೀಡುವ ಮೂಲಕ ಈ ಎಲ್ಲಾ ಚಟುವಟಿಕೆಗಳ ಮೂಲಕ ಗಾಂಧೀಜಿಯವರ ಗ್ರಾಮಗಳ ಉದ್ಧಾರವೇ ದೇಶಗಳ ಉದ್ಧಾರ ಎಂಬ ಕಲ್ಪನೆಯನ್ನು ಈಡೇರಿಸಿದ್ದಾರೆ. ಈವತ್ತಿಗೆ ಗ್ರಾಮಗಳಲ್ಲಿ ಈ ಎಲ್ಲಾ ಸೌಲಭ್ಯಗಳು ದೊರಕುವ ಮೂಲಕ ಗ್ರಾಮ ಸ್ವರಾಜ್ಯ ಕಲ್ಪನೆ ಯಶಸ್ವಿಯಾಗಿದೆ ಎಂಬುದನ್ನು ಇಲ್ಲಿ ಪರಿಶೀಲಿಸಲಾಗಿದೆ.

- ಜಿ.ಮಾದೇಗೌಡರ ಸಮಾಜ ಸೇವಾ ಪ್ರತಿಷ್ಠಾನ ಮೂಲಕ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡವರನ್ನು ಗುರುತಿಸಿ ಅಂದರೆ ಸಾವಯಕೃಷಿ ಮತ್ತು ಸಾಮಾಜ ಸೇವಾ ಕ್ಷೇತ್ರಗಳಲ್ಲಿ ಸೇವೆ ಮಾಡಿದವರನ್ನು ಗುರುತಿಸಿ ಜಾತಿ, ಭೇದ, ಬಡವ, ಶ್ರೀಮಂತ ಎನ್ನದೆ ಸಾಮಾಜಕ್ಕಾಗಿ ಉತ್ತಮ ಕಾರ್ಯಗಳನ್ನು ಮಾಡಿಕೊಂಡು ಬರುತ್ತಿರುವ ವ್ಯಕ್ತಿಗಳನ್ನು ಆಯ್ಕೆಮಾಡಿ ಅವರಿಗೆ ಪ್ರಶಸ್ತಿ ಪುರಸ್ಕಾರಗಳನ್ನು ನೀಡಿ ಇತರರಿಗೆ ಪ್ರೇರಣೆಯಾಗುವಂತೆ ಕಾರ್ಯಕ್ರಮ ಮಾಡುತ್ತಿದ್ದಾರೆ. ಪ್ರಮುಖವಾಗಿ ಕೃಷಿ ಕ್ಷೇತ್ರದಲ್ಲಿ ಸ್ಥಳೀಯಮಟ್ಟ ದಿಂದ ರಾಷ್ಟ್ರಮಟ್ಟದವರೆಗೂ ಪ್ರಶಸ್ತಿ ಪುರಸ್ಕಾರಗಳಿರುವುದಿಲ್ಲ. ಈ ಸೇವಾ ಕಾರ್ಯಕ್ರಮವನ್ನು ಪ್ರತಿಷ್ಠಾನದ ಮೂಲಕ ಮಾಡುತ್ತಿದ್ದಾರೆ. ಇದರಿಂದ ಜಿ. ಮಾದೇಗೌಡರು ಸಮಾಜದ ಎಲ್ಲಾ ವರ್ಗದ ಏಳಿಗೆಗಾಗಿ ಚಿಂತನಾತ್ಮಕ ಹೋರಾ ಟಗಳನ್ನು ನಡೆಸಿರುವುದು ಸಂಶೋಧನಾ ಅಧ್ಯಯನದಿಂದ ಸಕಾರಗೊಂಡಿದೆ.

## ಸಂದರ್ಶನ

### ಜಿ. ಮಾದೇಗೌಡರ ಜೊತೆ ನಡೆಸಿದ ಸಂದರ್ಶನದ ಆಯ್ದಭಾಗ

1. ಸಂಶೋಧನ ವಿದ್ಯಾರ್ಥಿ : ನೀವು ಪ್ರಾಥಮಿಕ, ಪ್ರೌಢಶಿಕ್ಷಣವನ್ನು ಎಲ್ಲಿ ಪೂರೈಸಿದ್ದೀರಿ? ಆ ದಿನಗಳು ಹೇಗಿದ್ದವು?

ಗುರುದೇವರಹಳ್ಳಿ ಮಾದೇಗೌಡರು: ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮ ಗುರುದೇವರ ಹಳ್ಳಿಯಲ್ಲಿ ಪೂರೈಸಿದೆ. ಮಾಧ್ಯಮಿಕ ಪ್ರೌಢಶಿಕ್ಷಣ ವನ್ನು ನಮ್ಮೂರಿನಲ್ಲಿ ಅನುಕೂಲತೆ ಇಲ್ಲದಿರುವುದ ರಿಂದ ನಮ್ಮ ತಾಯಿ ತವರು ಮನೆ ಮಂಡ್ಯದ ಹೊಸಹಳ್ಳಿಯಲ್ಲಿ ವಿದ್ಯಾಭ್ಯಾಸ ಮಾಡಿದೆ. ನಾವು ರೈತಾಪಿ ಕುಟುಂಬದಿಂದ ಬಂದಿದ್ದು, ಯಾವುದೇ ಮುಲಭೂತ ಸೌಕರ್ಯಗಳಿರುವುದಿಲ್ಲ. ಆದರೆ ತಂದೆಯವರಿಂದ ಸ್ವಾಭಿಮಾನ, ಪ್ರಾಮಾಣಿಕತೆ, ನಿಷ್ಠೆ, ಗುರು-ಹಿರಿಯರನ್ನು ಗೌರವಿಸುವುದನ್ನು ಮತ್ತು ಅವರೊಂದಿಗೆ ಸೌಜನ್ಯತೆಯಿಂದ ನಡೆದು ಕೊಳ್ಳುವುದು, ಬಡಜನರಿಗೆ ಸಹಾಯ ಮಾಡುವ ಮನೋಭಾವನೆಯನ್ನು ತಮ್ಮ ತಂದೆಯಿಂದ ಕಲಿತು. ನನ್ನ ಜೀವನದುದ್ದಕ್ಕು ಮೈಗೂಡಿಸಿ ಕೊಂಡು ಬಂದಿದ್ದೇನೆ.

2. ಸಂಶೋಧನ ವಿದ್ಯಾರ್ಥಿ : 10ನೇ ವಯಸ್ಸಿನಲ್ಲಿಯೇ ಶಿವಪುರ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದೀರಿ, ಇದಕ್ಕೆ ಪ್ರೇರಣೆ ಯಾರು? ಆ ಸತ್ಯಾಗ್ರಹದಲ್ಲಿ ನಿಮ್ಮ ಕಾರ್ಯವೈಖರಿ ಏನು ?

ಗುರುದೇವರಹಳ್ಳಿ ಮಾದೇಗೌಡರು: ಆರಂಭದಲ್ಲಿ ಕೆಂಪೇಗೌಡರ ನೇತೃತ್ವದಲ್ಲಿ ಕಾಂಗ್ರೇಸ್‌ನ ಘೋಷಣೆ ಕೂಗಲು ಸ್ನೇಹಿತರೊಂದಿಗೆ ಹೋಗುತ್ತಿದ್ದೇವು. ಈ ಸಂದರ್ಭದಲ್ಲಿ ನಾಲ್ಕಾಣೆ ಕಾಸು ಕೊಡುತ್ತಿದ್ದರು. ದೋಸೆ ಬರುತ್ತದೆ ಅಂತ ಆಸೆಗೆ ಹೋಗುತ್ತಿದ್ದೆ. ತರುವಾಯ ಮೈಸೂರು ಸಂಸ್ಥಾನದ ಮೊದಲ ಸತ್ಯಾಗ್ರಹವು ಶಿವಪುರದಲ್ಲಿ ನಡೆದಾಗ ಭಾಗವಹಿಸಿದೆನು. ಈ ಸತ್ಯಗ್ರಹದಲ್ಲಿ ನೀರು ಹಂಚುವ ಕಾಯಕವನ್ನು ಮಾಡಿದೆನು. ಈ

ಸಂದರ್ಭದಲ್ಲಿ ಅಂದಿನ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಹೆಚ್.ಸಿ.ದಾಸಪ್ಪ, ಯಶೋಧರಮ್ಮ ದಾಸಪ್ಪ, ದಾಸಪ್ಪ, ಕೆ.ಸಿ.ರೆಡ್ಡಿ, ಕೆಂಗಲ್ ಹನುಮಂತಯ್ಯ, ಹೆಚ್.ಕೆ.ವೀರಣ್ಣಗೌಡ, ಪಿ.ಎನ್.ಜವರಪ್ಪಗೌಡ, ಬಳ್ಳಾರಿ ಸಿದ್ದಮ್ಮ, ಎಂ.ಎನ್.ಜೋಯಿಷ್ ರವರನ್ನು ನೋಡುವ ಸದಾವಕಾಶ ದೊರೆಯಿತು. ಅವರ ನಾಯಕತ್ವ ನನ್ನ ಜೀವನದ ಮೇಲೆ ಅಗಾಧ ಪ್ರಭಾವ ಬೀರಿತು.

3. ಸಂಶೋಧನ ವಿದ್ಯಾರ್ಥಿ :1942 ರಲ್ಲಿ ಭಾರತ ಬಿಟ್ಟು ತೊಲಗಿ ಚಳುವಳಿಯು (ಕ್ವಿಟ್ ಇಂಡಿಯಾ ಚಳವಳಿ) ಮಂಡ್ಯದಲ್ಲಿ ಹೇಗೆ ನಡೆಯಿತು? ಅದರಲ್ಲಿ ನಿಮ್ಮ ಪಾತ್ರವೇನಾಗಿತ್ತು?

ಗುರುದೇವರಹಳ್ಳಿ ಮಾದೇಗೌಡರು: ಈ ಚಳುವಳಿಯ ಸಂದರ್ಭದಲ್ಲಿ ಮಹಾತ್ಮ ಗಾಂಧೀಜಿಯವರು ಮಾಡು ಇಲ್ಲವೆ ಮಡಿ ಎಂಬ ಕರೆಯನ್ನು ನೀಡಿದರು. ಈ ಕರೆಯಿಂದ ಪ್ರೇರೇಪಿತನಾಗಿ ಈ ಚಳುವಳಿಯಲ್ಲಿ ಭಾಗವಹಿಸಿದನು. ದೇಶದ್ಯಾದಂತ ಪ್ರಮುಖ ನಾಯಕರನ್ನು ಬಂದಿಸಿದಂತೆ ಮೈಸೂರು ಸಂಸ್ಥಾನದಲ್ಲಿ ಪ್ರಮುಖ ನಾಯಕರನ್ನು ಬಂದಿಸಲಾಯಿತು. ಆ ಸಂದರ್ಭದಲ್ಲಿ ಗುಪ್ತವಾಗಿ ಕರಪತ್ರ ಹಂಚುವ ಕಾರ್ಯವನ್ನು ನಿರ್ವಹಿಸಿದೆನು. ಈ ಚಳುವಳಿಯು ಮಂಡ್ಯ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿಯೂ ನಡೆಯಿತು. ಚಳುವಳಿಯ ಭಾಗವಾಗಿ ಮುಷ್ಕರ, ಶಾಲಾ ಕಾಲೇಜುಗಳನ್ನು ತ್ಯಜಿಸುವುದು, ಅಂಗಡಿ ಮುಗಟ್ಟುಗಳನ್ನು ಮುಚ್ಚಿಸುವುದು, ಜೈ ಹಿಂದ್ ಘೋಷಣೆಗಳನ್ನು ಕೂಗುವುದು ಪ್ರಮುಖವಾಗಿತ್ತು.

4. ಸಂಶೋಧನ ವಿದ್ಯಾರ್ಥಿ : ನೀವು ಉನ್ನತ ಶಿಕ್ಷಣವನ್ನು ಎಲ್ಲಿ ಪೂರೈಸಿದ್ದೀರಾ? ನಿಮ್ಮ ಮೇಲೆ ಪ್ರಭಾವ ಬೀರಿದ ಗುರುಗಳು ಯಾರು?

ಗುರುದೇವರಹಳ್ಳಿ ಮಾದೇಗೌಡರು: ಉನ್ನತ ಶಿಕ್ಷಣವನ್ನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪೂರೈಸಿದ್ದು, ರಾಷ್ಟ್ರಕವಿ ಕುವೆಂಪುರವರು ಸೀತಾರಾಮನ್ ಮತ್ತು ಹೆಚ್.ಎನ್.ರಾಮನಾಥನ್ ಇಂತಹ ಈ ಗುರುಗಳ ಪ್ರಭಾವ ಬೀರಿತು. ಕಾನೂನು ಪದವಿಯನ್ನು ಬೆಂಗಳೂರಿನ ಸರ್ಕಾರಿ ಲಾ ಕಾಲೇಜಿನಲ್ಲಿ ಪೂರೈಸಿದೆನು.

5. ಸಂಶೋಧನ ವಿದ್ಯಾರ್ಥಿ : ನೀವು ವಕೀಲ ವೃತ್ತಿಯನ್ನು ಆಯ್ಕೆ ಮಾಡಿದ್ದೀರಿ, ತದನಂತರ ತ್ಯಜಿಸಲು ಕಾರಣವೇನು?

ಗುರುದೇವರಹಳ್ಳಿ ಮಾದೇಗೌಡರು: ಸಾಮಾನ್ಯ ಜನರಿಗೆ ಆಗುತ್ತಿದ್ದ ಅನ್ಯಾಯವನ್ನು ತಡೆಗಟ್ಟುವ ಸಲುವಾಗಿ ವಕೀಲ ವೃತ್ತಿಯನ್ನು ಆಯ್ಕೆ ಮಾಡಿಕೊಂಡೆನು. ತರುವಾಯ ಸಾಮಾನ್ಯ ಜನರಿಗೆ ಹೆಚ್ಚಿನ ಸೌಲಭ್ಯಗಳನ್ನು ಈ ವೃತ್ತಿಯಿಂದ ನೀಡಲು ಸಾಧ್ಯವಾಗುವುದಿಲ್ಲ. ಸಾಮಾನ್ಯ ಜನರಿಂದ ಹಣವನ್ನು ಪಡೆದು ಜನ ಸೇವೆ ಮಾಡುವುದೇ ಜೀವನವಲ್ಲ ಎಂದು ತೀರ್ಮಾನಿ ಹುದ್ದೆಯನ್ನು ತ್ಯಜಿಸಿದೆನು.

6. ಸಂಶೋಧನ ವಿದ್ಯಾರ್ಥಿ : ನೀವು ರಾಜಕೀಯ ಕ್ಷೇತ್ರಕ್ಕೆ ಬರಲು ಪ್ರೇರಣೆ ನೀಡಿದ ವ್ಯಕ್ತಿ ಯಾರು? ಇದಕ್ಕೆ ನಿಮ್ಮ ಕುಟುಂಬದ ಸಮ್ಮತಿ ಮತ್ತು ಸಹಕಾರವಿತ್ತೆ?

ಗುರುದೇವರಹಳ್ಳಿ ಮಾದೇಗೌಡರು: ನಾನು ರಾಜಕೀಯ ಕ್ಷೇತ್ರಕ್ಕೆ ಬರಲು ಕೆ.ವಿ.ಶಂಕರಗೌಡರ ಜನಸಾಮಾನ್ಯರ ಬಗ್ಗೆ ಮಾಡಬಹುದಾದ ಸ್ಫೂರ್ತಿದಾಯಕ ಮಾತುಗಳೇ ಕಾರಣವಾದವು. ನಮ್ಮ ಕುಟುಂಬದಲ್ಲಿ ಯಾರೂ ರಾಜಕೀಯದಿಂದ ಬಂದವರಲ್ಲ ಮತ್ತು ರಾಜಕೀಯದ ಪರಿಚಯವವೂ ಅವರಿಗೆ ಇರಲಿಲ್ಲ ಮತ್ತು ಅವರಿಗೆ ಸಮ್ಮತಿಯು ಇರಲಿಲ್ಲ.

7. ಸಂಶೋಧನ ವಿದ್ಯಾರ್ಥಿ : ರಾಜಕೀಯ ಪ್ರವೇಶ ನಿಮಗೆ ತೃಪ್ತಿ ನೀಡಿದೆಯಾ?

ಗುರುದೇವರಹಳ್ಳಿ ಮಾದೇಗೌಡರು: ಓ, ತೃಪ್ತಿ ನೀಡಿದೆ. ಸಮಾಜಕ್ಕೆ ಅನುಕೂಲ ಮಾಡುವುದಕ್ಕೆ ಸಹಕಾರಿ ಆಯಿತು.

8. ಸಂಶೋಧನ ವಿದ್ಯಾರ್ಥಿ : ಮೊದಲ ಬಾರಿ ವಿಧಾನಸಭೆ ಸದಸ್ಯರಾದಾಗ ನಿಮ್ಮ ಅನುಭವ ಹೇಗಿತ್ತು?

ಗುರುದೇವರಹಳ್ಳಿ ಮಾದೇಗೌಡರು: ಜವಾಬ್ದಾರಿ ಹೆಚ್ಚಾಯಿತು ಅನಿಸಿತು. ಜನ ಸಾಮಾನ್ಯರ ಸೇವೆ ಮಾಡುವುದು ಜೀವನದ ಗುರಿ ಎನಿಸಿತು. ತಾಲ್ಲೂಕು ಬೋರ್ಡ್ ಸದಸ್ಯನ ಕಾರ್ಯವ್ಯಾಪ್ತಿಯು ಸೀಮಿತವಾಗಿತ್ತು. ಆದರೆ ವಿಧಾನಸಭೆ ಕಾರ್ಯವ್ಯಾಪ್ತಿಯು ವಿಸ್ತಾರವಾಗಿದ್ದು, ಜನರ ಅಶೋತ್ತರಗಳಿಗೆ ಸ್ಪಂದಿಸಿ ಕಾರ್ಯ ಮಾಡುವುದೆಂದು ತೀರ್ಮಾನಿಸಿದೆನು.

9. ಸಂಶೋಧನ ವಿದ್ಯಾರ್ಥಿ : ಕಾವೇರಿ ಚಳವಳಿಯ ಬಗ್ಗೆ ನಿಮ್ಮ ಅನಿಸಿಕೆ ಏನು?

ಗುರುದೇವರಹಳ್ಳಿ ಮಾದೇಗೌಡರು: ಬ್ರಿಟಿಷರ ಕುತಂತ್ರದಿಂದ ಬ್ರಿಟಿಷರ ಕಾಲದಲ್ಲೇ ಕಾವೇರಿ ವಿವಾದ ಆರಂಭವಾಯಿತು. ಮೈಸೂರು ಪ್ರಾಂತ್ಯದ ಆಡಳಿತ ಮದ್ರಾಸ್ ಸರ್ಕಾರದ ಅಣತಿ ಯಂತೆ ನಡೆಯುತ್ತಿತ್ತು. ಕೃಷ್ಣರಾಜಸಾಗರ ಅಣೆಕಟ್ಟು ಕಟ್ಟುವುದಕ್ಕೆ ಮದ್ರಾಸ್ ಸರ್ಕಾರ ಒಪ್ಪಿಗೆ ನೀಡಲು ನಿರಾಕರಿಸುವ ಮೂಲಕ ಅಂದಿನಿಂದಲೇ ತಗಾದೆ ಆರಂಭಿಸಿತ್ತು. ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗೂ ಸರ್ ಎಂ.ವಿಶ್ವೇಶ್ವರಯ್ಯ ಅವರ ಪ್ರಯತ್ನದಿಂದಾಗಿ ಕೇವಲ 45 ಟಿ.ಎಂ.ಸಿ. ನೀರು ಸಂಗ್ರಹದ ಅಣೆಕಟ್ಟೆ ನಿರ್ಮಾಣಕ್ಕೆ ಅನುಮತಿ ಸಿಕ್ಕಿತ್ತು. ಒಟ್ಟಾರೆ ತಮಿಳುನಾಡು ಸರ್ಕಾರ ಆಗಲೇ ತಗಾದೆ ಆರಂಭಿಸಿತು.

10. ಸಂಶೋಧನ ವಿದ್ಯಾರ್ಥಿ : ತಮಿಳುನಾಡಿನಲ್ಲಿ ನೀರಿಗೆ ನಿಜಕ್ಕೂ ತೊಂದರೆ ಇದೆಯೇ ಅಥವಾ ರಾಜಕೀಯ ಪ್ರೇರಿಪಿತವೇ?

ಗುರುದೇವರಹಳ್ಳಿ ಮಾದೇಗೌಡರು: ಖಂಡಿತಾ ಇಲ್ಲ. ತಮಿಳುನಾಡಿನಲ್ಲಿ ಬೇಕಾದಷ್ಟು ನೀರಿದೆ. ನೀರನ್ನು ಸಂಗ್ರಹ ಮಾಡಿಕೊಳ್ಳದೇ ಸಮುದ್ರದಪಾಲು ಮಾಡುತ್ತಿದ್ದಾರೆ. ಮೇಕೆದಾಟಿನಲ್ಲಿ ಒಂದು ಡ್ಯಾಂಕಟ್ಟಿ ನೀವು ನೀರು ಬಳಸಿಕೊಂಡರೆ, ನಾವು ವಿದ್ಯುತ್ ಉತ್ಪಾದನೆ ಮಾಡಿಕೊಳ್ಳುತ್ತೇವೆ ಎಂದರೆ ಜಯಲಲಿತರವರು ಒಪ್ಪಲಿಲ್ಲ. ಆದರೆ ಈಗ ಕರ್ನಾಟಕ ಸರ್ಕಾರ ಅದೇ ಪ್ರಯತ್ನದಲ್ಲಿದೆ.

11. ಸಂಶೋಧನ ವಿದ್ಯಾರ್ಥಿ : ಕೇಂದ್ರ ಸರ್ಕಾರದ ಧೋರಣೆ ಹಾಗೂ ಸರ್ವೋಚ್ಚ ನ್ಯಾಯಾಲಯದ ಬಗ್ಗೆ ನಿಮ್ಮ ಅನಿಸಿಕೆ?

ಗುರುದೇವರಹಳ್ಳಿ ಮಾದೇಗೌಡರು: ಜಯಲಲಿತಾರವರು ಎಲ್ಲರಿಗೂ ದುಡ್ಡು, ಚಿನ್ನಾಭರಣ ಕೊಟ್ಟು ಅಡ್ಜೆಸ್ಟ್ ಮಾಡಿಕೊಂಡು ಬಿಡುತ್ತಿದ್ದರು. ಆದ್ದರಿಂದ ಎಲ್ಲರೂ ಅವರ ಪರವಾಗಿಯೇ ತೀರ್ಪು ನೀಡುತ್ತಿದ್ದರು ಎಂಬುದು ನನ್ನ ಭಾವನೆ ಸರಿಯೋ ತಪ್ಪೋ ಗೊತ್ತಿಲ್ಲ.

12. ಸಂಶೋಧನ ವಿದ್ಯಾರ್ಥಿ : ಕರ್ನಾಟಕದ ಸಂಸದರ ಹೋರಾಟಕ್ಕೆ ಬೆಲೆ ಇಲ್ಲದಂತಾಗಿದೆಯೇ?

ಗುರುದೇವರಹಳ್ಳಿ ಮಾದೇಗೌಡರು: ತಮಿಳುನಾಡಿನಲ್ಲಿ ಎರಡು ಪ್ರಮುಖ ರಾಜಕೀಯ ಪಕ್ಷಗಳಿವೆ. ಅವರು ಎಷ್ಟೇ ಕಚ್ಚಾಡಿದ್ರೂ ರಾಜ್ಯದ ವಿಷಯ ಬಂದಾಗ ಒಂದಾಗ್ತಾರೆ. ನಾನು ಸಂಸದನಾಗಿದ್ದಾಗ ಮಾತನಾಡಲು ಎದ್ದು ನಿಂತೆ, ಆಗ ತಮಿಳಿಗರೆಲ್ಲಾ ಸುತ್ತುವರೆದು ಮಾತನಾಡಲು ಅವಕಾಶವನ್ನೇ ನೀಡಲಿಲ್ಲ. ಆದರೆ ನಾನು ಬಿಡಲಿಲ್ಲ. ಸ್ಪೀಕರ್ಗೆ ದೂರು ನೀಡಿ ಮಾತನಾಡಿದ್ದೆ. ನಂತರ ದೇವೇಗೌಡರು ತಮಿಳುನಾಡಿಗೆ 5 ಟಿ.ಎಂ.ಸಿ. ನೀರು ಬಿಟ್ಟಾಗ ರಾಜಿನಾಮೆ ಬಿಸಾಡಿ ಬಂದಿದ್ದೆ. ನಮ್ಮ ರಾಜ್ಯದ ಸಂಸದರಲ್ಲಿ ಒಗ್ಗಟ್ಟು ಇಲ್ಲ. ಆದರೂ ನನ್ನ ಉಸಿರಿರುವ ತನಕ ಕಾವೇರಿ ನೀರಿಗಾಗಿ ಹೋರಾಡುತ್ತೇನೆ.

13. ಸಂಶೋಧನ ವಿದ್ಯಾರ್ಥಿ : ನಿಮ್ಮ ಹೋರಾಟಗಳಿಗೆ ಜನರು ಈಗಲೂ ಸ್ಪಂದಿಸುತ್ತಾರಾ?

ಗುರುದೇವರಹಳ್ಳಿ ಮಾದೇಗೌಡರು: ಬಂದೇ ಬರ್ತಾರೆ. ಯಾಕಂದ್ರೆ ಇದು ಬದುಕಿನ ವಿಷಯ. ಕುಡಿವ ನೀರನ್ನೇ ಕಳೆದುಕೊಳ್ಳುವಾಗ ಯಾರೂ ಕೈಕಟ್ಟಿ ಕೂರಲ್ಲ. ಅದಕ್ಕೆ ಇದುವರೆಗೂ ನಡೆದಿರುವ ಚಳವಳಿಗಳೇ ಸಾಕ್ಷಿ. ಯಾರನ್ನೂ ನಾವು ಕರೆಯಬೇಕಿಲ್ಲ. ನಮಗೆ ಅನ್ಯಾಯವಾಗುವ ತೀರ್ಪು ಬರಲಿ ಜನತೆಯ ಹೋರಾಟ ನಿಮಗೇ ಗೊತ್ತಾಗುತ್ತದೆ.

14. ಸಂಶೋಧನ ವಿದ್ಯಾರ್ಥಿ : ಹೋರಾಟಗಳಿಂದ ನ್ಯಾಯ ಸಿಗುವ ವಿಶ್ವಾಸ ವಿದೆಯೇ?

ಗುರುದೇವರಹಳ್ಳಿ ಮಾದೇಗೌಡರು: ಬ್ರಿಟಿಷರಿಂದ ಸ್ವಾತಂತ್ರ್ಯ ಗಳಿಸಿದ್ದು ಬೀದಿ ಚಳವಳಿಗಳಿಂದಲೇ, ಅಂದ ಮೇಲೆ ನಮ್ಮವರ ವಿರುದ್ಧ ಹೋರಾಟ ಮಾಡಿ ಗೆಲ್ಲುವುದು ಸಾಧ್ಯವಿಲ್ಲವೇ. ನ್ಯಾಯ ಪಡೆದೇ ತೀರುತ್ತೇವೆ. ನ್ಯಾಯಾಲಯದ ಬಗ್ಗೆ ವಿಶ್ವಾಸವಿದೆ.

15. ಸಂಶೋಧನ ವಿದ್ಯಾರ್ಥಿ : ಹಕ್ಕುಗಳನ್ನು ಪಡೆಯಲು ಜೀವನಪರ್ಯಂತ ಹೋರಾಟಗಳೇ ನಡೆಯಬೇಕಾ?

ಗುರುದೇವರಹಳ್ಳಿ ಮಾದೇಗೌಡರು: ನನಗೆ ವಯಸ್ಸಾಗಿದೆ ಅಂಥ ಜನ ಹೋರಾಟ ನಿಲ್ಲಿಸಲ್ಲ. ನನಗೆ ಈಗ ಕಾಲಿನ ಶಸ್ತ್ರಚಿಕಿತ್ಸೆ ಆಗಿದೆ. ಆದರೂ ಹೋರಾಟ ಮುಂದುವರೆಸುತ್ತೇನೆ. ನಮಗೆ ಶಾಶ್ವತ ಪರಿಹಾರ ಸಿಗುವ ತನಕ ಜನತೆ ಯಾರಿಗೂ ಬೆದರದೇ ಹೋರಾಟ ಮಾಡೇ ಮಾಡುತ್ತಾರೆ. ನ್ಯಾಯ ಪಡೆದೇ ತೀರುತ್ತಾರೆ. ಆದರೆ ಅಹಿಂಸಾತ್ಮಕವಾಗಿ ಹೋರಾಟ ಮಾಡಲು ಸಲಹೆ ನೀಡುತ್ತೇನೆ.

16. ಸಂಶೋಧನ ವಿದ್ಯಾರ್ಥಿ : ತಮಿಳುನಾಡು ಮುಖ್ಯಮಂತ್ರಿಯಾಗಿದ್ದ ಜಯ ಲಲಿತಾರವರು ಕರ್ನಾಟಕದ ಅದರಲ್ಲಿಯೂ

ಮಂಡ್ಯದ ಮಗಳಾದರೂ ನೀರಿನ ವಿಷಯದಲ್ಲಿ ದ್ವೇಷಿಸುತ್ತಾ ಬಂದಿದ್ದರು ಏಕೆ?

ಗುರುದೇವರಹಳ್ಳಿ ಮಾದೇಗೌಡರು: ನಾವು ಜಯಲಲಿತಾರಿಗೆ ಮನೆ ಮಗಳು ಸ್ಥಾನ ಕೊಟ್ಟಿದ್ದೇವೆ. ಆದರೆ ಆಕೆ ಮಾತ್ರ ಅಧಿಕಾರ ಸಿಕ್ಕಾಗಲೆಲ್ಲಾ ತಮಿಳುನಾಡಿನ ಜನರನ್ನು ಮೆಚ್ಚಿಸಲು ನಮ್ಮ ಮೇಲೆ ಕಾವೇರಿ ಅಸ್ತ್ರ ಬಿಡುತ್ತಲೇ ಬಂದಿದ್ದರು. ಇದು ಕೇವಲ ರಾಜಕಾರಣ ಮಾಡುವ ಸಲುವಾಗಿ ಆಡುವ ನಾಟಕ ಎನ್ನುವುದು ಉಭಯ ರಾಜ್ಯಗಳ ಜನರಿಗೆ ಸಹಜವಾಗಿ ಗೊತ್ತಾಗುತ್ತದೆ. ಇದಕ್ಕೆ ಪ್ರಾಯಶ್ಚಿತ್ತ ಅನುಭವಿಸಿದ್ದಾರೆ.

17. ಸಂಶೋಧನ ವಿದ್ಯಾರ್ಥಿ : ಕಾವೇರಿ ನ್ಯಾಯ ಮಂಡಳಿ ತೀರ್ಪಿನ ಸಂಬಂಧ ಗೆಜೆಟ್ ನೋಟಿಫಿಕೇಷನ್ ಹೊರಡಿಸುವಂತೆ ಜಯಲಲಿತಾರವರು ಮಾಡಿದ್ದ ಒತ್ತಾಯದ ಬಗ್ಗೆ ನಿಮ್ಮ ಅನಿಸಿಕೆ ಏನು?

ಗುರುದೇವರಹಳ್ಳಿ ಮಾದೇಗೌಡರು: ಇದೊಂದು ಅಪ್ರಬುದ್ಧ ಹೇಳಿಕೆ, ಸಾಮಾನ್ಯ ಮನುಷ್ಯನಿಗೂ ಈಗಿನ ಕಾಲದಲ್ಲಿ ಕಾನೂನಿನ ಅರಿವು ಇದೆ. ಕಾವೇರಿ ನ್ಯಾಯ ಮಂಡಳಿ ತೀರ್ಪನ್ನೇ ಧಿಕ್ಕರಿಸಿ ನಾವು (ಮಂಡ್ಯ ಜಿಲ್ಲಾ ರೈತರ ಹಿತರಕ್ಷಣಾ ಸಮಿತಿ) ಹಾಗೂ ರಾಜ್ಯ ಸರ್ಕಾರ ಪ್ರತ್ಯೇಕವಾಗಿ ಸರ್ವೋಚ್ಚ ನ್ಯಾಯಾಲಯ ದಲ್ಲಿ ದಾವೆ ಹೂಡಿದ್ದೇವೆ. ಈ ವಿವಾದ ನ್ಯಾಯಾಲಯದ ಅಂಗಳದಲ್ಲಿ ಇದೆ. ನ್ಯಾಯಾಲಯದಲ್ಲಿ ನ್ಯಾಯ ಸಿಗುವ ತನಕ ಕಾಯುತ್ತೇವೆ.

18. ಸಂಶೋಧನ ವಿದ್ಯಾರ್ಥಿ : ಕಾವೇರಿ ನದಿ ನೀರಿನ ಹಂಚಿಕೆಗೆ ಶಾಶ್ವತ ಪರಿಹಾರ ಕಂಡುಕೊಳ್ಳಬಹುದೆ?

ಗುರುದೇವರಹಳ್ಳಿ ಮಾದೇಗೌಡರು: ಖಂಡಿತವಾಗಲೂ ಮಾತುಕತೆ ಮೂಲಕ ಈಗಲೂ ಪರಿಹಾರ ಕಂಡುಕೊಳ್ಳಬಹುದು. ಯಾವುದೇ

ಸಮಸ್ಯೆ ಬಂದರೂ ಎಲ್ಲರೂ ಕೂಡಲೇ ನ್ಯಾಯಾಲಯಕ್ಕೆ ಮೊರೆ ಹೋಗುತ್ತಾರೆ. ಪ್ರಾರಂಭ ದಲ್ಲಿ ಒಂದಲ್ಲ ಹಲವಾರು ಭಾರಿ ಮಾತುಕತೆ ಮೂಲಕ ಸಮಸ್ಯೆ ಪರಿಹರಿಸುವ ಪ್ರಯತ್ನ ಮಾಡುವುದಿಲ್ಲ. ಕಾವೇರಿ ನದಿ ನೀರಿನ ಹಂಚಿಕೆ ಸಂಬಂಧ ಸಾಕಷ್ಟು ಮಾತುಕತೆಗಳು ನಡೆದಿವೆ. ಆದರೆ ತಮಿಳುನಾಡಿನ ಹಠಮಾರಿ ಧೋರಣೆಗಳು ಪರಿಹಾರ ಮಾರ್ಗಗಳನ್ನು ಹಾಳು ಮಾಡಿವೆ. ಉಭಯ ರಾಜ್ಯಗಳಲ್ಲಿ ಬೀಳುವ ಮಳೆ ನೀರಿನ ಪ್ರಮಾಣದ ಅಂಕಿ ಅಂಶಗಳನ್ನು ಪಡೆದು, ಅಗತ್ಯ ಎನಿಸುವ ಕಡೆ ಅಣೆಕಟ್ಟೆಗಳನ್ನು ಕಟ್ಟಿಸಿಕೊಳ್ಳಲು ಅವಕಾಶ ಮತ್ತು ಹಣವನ್ನು ನೀಡಿದರೆ ಸಮಸ್ಯೆಗೆ ಪರಿಹಾರ ಇದ್ದೇ ಇದೆ. ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗಬೇಕಾಗಿದೆ.

19. ಸಂಶೋಧನ ವಿದ್ಯಾರ್ಥಿ : ಕೇಂದ್ರ ಸರ್ಕಾರ ಪ್ರಾಮಾಣಿಕತೆಯಿಂದ ಮಾತು ಕತೆಗಳ ಮೂಲಕ ವಿವಾದವನ್ನು ಪರಿಹರಿಸುವ ಪ್ರಯತ್ನ ಮಾಡಿದೆಯೇ?

ಗುರುದೇವರಹಳ್ಳಿ ಮಾದೇಗೌಡರು: ರಾಜಕೀಯ ಇಚ್ಛಾಶಕ್ತಿಯ ಕೊರತೆಯಿಂದಾಗಿ ಎಷ್ಟೇ ಮಾತುಕತೆ ಸಂಧಾನಗಳು ನಡೆದಿದ್ದರೂ ಯಾವುದೇ ಫಲ ಕೊಟ್ಟಿಲ್ಲ. ಕೇಂದ್ರದಲ್ಲಿ ಯಾವು ದೇ ಪಕ್ಷದ ಸರ್ಕಾರ ಬಂದರೂ ತಮಿಳುನಾಡಿನ ಸಂಸದರ ಸಹಕಾರವನ್ನು ಅಗತ್ಯವಾಗಿ ಪಡೆದು ಕೊಳ್ಳುವುದರಿಂದ ಕೇಂದ್ರವೂ ಪಕ್ಷಪಾತ ಧೋರಣೆ ಅನುಸರಿಸುತ್ತಲೇ ಬಂದಿವೆ. ನಾನು ಸಂಸದನಾಗಿದ್ದ ಸಂದರ್ಭದಲ್ಲಿ ಪ್ರಧಾನಿ ಪಿ.ವಿ.ನರಸಿಂಹರಾವ್ ಜೊತೆ ವಾಗ್ವಾದ ಮಾಡಿದ್ದೇನೆ. ಸಭೆಗಳನ್ನು ಬಹಿ ಷ್ಕರಿಸಿ ರಾಜ್ಯದ ಹಿತ ಕಾಯುವ ಪ್ರಯತ್ನ ಮಾಡಿದ್ದೇನೆ. ಇನ್ನು ಮುಂದೆಯು ಮಾಡುತ್ತೇನೆ. ಯಾರಿಗೂ ಹೆದರಬೇಕಾಗಿಲ್ಲ.

20. ಸಂಶೋಧನ ವಿದ್ಯಾರ್ಥಿ : ತಮಿಳುನಾಡಿನ ರಾಜಕಾರಣಿಗಳ ಒತ್ತಡಕ್ಕೆ ಕೇಂದ್ರ ಸರ್ಕಾರ ಮಣಿಯುತ್ತಲೇ ಇದೆ. ಈ ಕಾರಣವೂ ನಮಗೆ ಹಿನ್ನಡೆಯಾಗಿದೆ ಅಲ್ಲವೆ?

ಗುರುದೇವರಹಳ್ಳಿ ಮಾದೇಗೌಡರು: ಹೌದು. ಇದು ಕಳೆದ ಮೂರು ನಾಲ್ಕು ದಶಕಗಳಿಂದ ಚೇತರಿಸಿಕೊಳ್ಳಲಾಗದ ಸಂಗತಿಯಾಗಿದೆ. ಅಲ್ಲಿನ ರಾಜಕಾರಣಿಗಳು ಒಗ್ಗಟ್ಟಾಗುತ್ತಾರೆ. ಇಲ್ಲಿನ ರಾಜಕಾರಣಿಗಳು ಬಹುಬೇಗ ಒಗ್ಗಟ್ಟಾಗುವುದಿಲ್ಲ. ಇದೂ ಕೂಡ ನಮ್ಮೆ ಹಿನ್ನಡೆಗೆ ಕಾರಣವಾಗಿದೆ. ಹೀಗಾಗಿ ಕಾವೇರಿ ನದಿ ನೀರಿನ ಹಂಚಿಕೆ ವಿವಾದ ಆರಂಭವಾದಾಗಲೇ ನಾವು ಕೂಗಿಕೊಂಡೆವು, ನೀರು ಮತ್ತು ಪ್ರಕೃತಿ ಎಂಬುದು ಯಾರ ಸೊತ್ತೂ ಅಲ್ಲ. ಆಯಾ ವರ್ಷ ನಮಗೆ ಲಭ್ಯವಾಗುವ ನೀರಿನ ಪ್ರಮಾಣ ಹಾಗೂ ನಮ್ಮ ರಾಜ್ಯದ ರೈತರ ನೀರಿನ ಅಗತ್ಯತೆಯನ್ನು ಅರಿತುಕೊಂಡು ಉಳಿದ ನೀರನ್ನು ಬಿಡಲು ತಮ್ಮ ಅಭ್ಯಂತರವಿಲ್ಲ ಎಂಬ ಸರಳ ಸೂತ್ರಕ್ಕೆ ಸುತಾರಾಂ ಒಪ್ಪುವುದಿಲ್ಲ. ಹೀಗಾಗಿ ಕೇಂದ್ರ ಸರ್ಕಾರ ಕೂಡ ತಮಿಳುನಾಡಿನ ರಾಜಕಾರಣಿಗಳ ತಾಳಕ್ಕೆ ತಕ್ಕಂತೆ ಕುಣಿಯುತ್ತಿದೆ. ಆದ್ದರಿಂದಲೇ ನ್ಯಾಯಾಲಯದಲ್ಲಿ ನ್ಯಾಯಕ್ಕಾಗಿ ಮನವಿ ಸಲ್ಲಿಸುತ್ತಾ ಬಂದಿದ್ದೇವೆ.

21. ಸಂಶೋಧನ ವಿದ್ಯಾರ್ಥಿ : ನಿಮ್ಮ ಶಾಂತಿಯುತ ಹೋರಾಟವನ್ನು ಸರ್ಕಾರ ಹಾಗೂ ನ್ಯಾಯಾಂಗ ಅರ್ಥ ಮಾಡಿಕೊಂಡಿದೆಯಾ?

ಗುರುದೇವರಹಳ್ಳಿ ಮಾದೇಗೌಡರು: ಕರ ನಿರಾಕರಣೆ, ಕೇಂದ್ರ ಸರ್ಕಾರದ ಕಛೇರಿಗಳಿಗೆ ಮುತ್ತಿಗೆ, ಉಪವಾಸ ಸತ್ಯಾಗ್ರಹ, ಅಸಹಕಾರ ಚಳವಳಿ, ಬಸ್ಸು, ರೈಲು ತಡೆದು ಜೈಲ್‌ಭರೋ ಚಳುವಳಿ ಹೀಗೆ ಹಂತ ಹಂತವಾಗಿ ಕಾವೇರಿ ಪ್ರಾಧಿಕಾರದ ಅವೈಜ್ಞಾನಿಕ ತೀರ್ಪು ರದ್ದಾಗುವ ತನಕ ಹೋರಾಟ, ಚಳವಳಿ ಮಾಡಿಕೊಂಡು ಬಂದಿದ್ದೇವೆ. ಜನಬೆಂಬಲ ಇದ್ದೇ ಇರುತ್ತದೆ.

22. ಸಂಶೋಧನ ವಿದ್ಯಾರ್ಥಿ : ಇಷ್ಟೆಲ್ಲಾ ಸಾಧನೆಗಳು ನಿಮ್ಮಿಂದ ಹೇಗೆ ಸಾಧ್ಯ ಆಯಿತು?

ಗುರುದೇವರಹಳ್ಳಿ ಮಾದೇಗೌಡರು: ನನ್ನ ಮನಸ್ಸಿಗೆ ತೋಚಿದ ಒಳ್ಳೆಯದೆಲ್ಲವನ್ನೂ ಮಾಡಿದ್ದೇನೆ. ಯಾವುದನ್ನೂ ಅಸಾಧ್ಯ ಅಂದು ಕೊಳ್ಳಬಾರದು.

23. ಸಂಶೋಧನ ವಿದ್ಯಾರ್ಥಿ : ಇಂದಿನ ಸಮಾಜದ ಬಗ್ಗೆ ನಿಮ್ಮ ಅಭಿಪ್ರಾಯ ಏನು?

ಗುರುದೇವರಹಳ್ಳಿ ಮಾದೇಗೌಡರು: ಪ್ರಸ್ತುತ ಸಮಾಜ ಅತಿಯಾದ ದುರಾಸೆ, ಭ್ರಷ್ಟಾ ಚಾರ, ಸೋಮಾರಿತನ, ಅಪ್ರಮಾಣಿಕತೆ, ಸುಳ್ಳು, ಮೋಸ, ಮಹಿಳೆಯರ ಬಗ್ಗೆ ಅಗೌರವ, ಕಳ್ಳತನ, ಅತ್ಯಾಚಾರ, ಅನಾಚಾರ, ಶೋಷಣೆ ಗಳಿಂದ ತುಂಬಿಹೋಗಿದ್ದು ಅಸಹ್ಯ ಹುಟ್ಟಿಸುತ್ತದೆ. ಬೆಳಿಗ್ಗೆ ಎದ್ದ ತಕ್ಷಣ ಪತ್ರಿಕೆ ನೋಡಿದರೆ ಎಲ್ಲಿ ನೋಡಿ ದರೂ ಅತ್ಯಾಚಾರ, ದರೋಡೆ, ಸುಲಿಗೆ ಬಗ್ಗೆಯೇ ಮಾಹಿತಿ ಇರುತ್ತದೆ. ನಿಜಕ್ಕೂ ಬೇಸರವಾಗಿದೆ. ಆದರೆ ನಮ್ಮ ಕಾಲದಲ್ಲಿ ಇದು ಯಾವುದು ಅತಿಯಾಗಿರಲಿಲ್ಲ. ಆದ್ದರಿಂದ ಕಾಲಕಾಲಕ್ಕೆ ಮಳೆ ಬೆಳೆ ಆಗುತ್ತಿತ್ತು. ಮುಂದಿನ ಪೀಳಿಗೆ ಎಚ್ಚರಿಸಿ ಕೊಳ್ಳದಿದ್ದರೆ ಸಮಾಜ ತುಂಬಾ ತೊಂದರೆಗೆ ಸಿಕ್ಕಿ ಕೊಳ್ಳುತ್ತದೆ ಎಂಬುವುದರ ಬಗ್ಗೆ ಸದಾ ಚಿಂತಿ ಸುವಂತಾಗಿದೆ.

24. ಸಂಶೋಧನ ವಿದ್ಯಾರ್ಥಿ : ನೀವು ರಾಜಕೀಯದ ಜೊತೆಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದೀರಿ. ಇದು ಹೇಗೆ ಸಾಧ್ಯವಾಯಿತು?

ಗುರುದೇವರಹಳ್ಳಿ ಮಾದೇಗೌಡರು: ನನ್ನ ಕ್ಷೇತ್ರದ ಜನತೆ ಹಿಂದುಳಿದಿದ್ದ ಕಾರಣ ಅವರಿಗೆ ಎಲ್ಲಾ ರೀತಿಯ ಸೌಲಭ್ಯ ಕಲ್ಪಿಸಬೇಕು ಎಂಬುವುದು ನನ್ನ ಮನಸ್ಸಿಯಲ್ಲಿ ಯಾವಾಗಲೂ ಕೊರಗಿತ್ತು. ಆದ್ದರಿಂದ ಜನರಿಗೆ ಅನುಕೂಲವಾಗ

ಲೆಂದು ಈ ಎಲ್ಲಾ ಕ್ಷೇತ್ರಗಳಲ್ಲಿ ಅಲ್ಪ–ಸ್ವಲ್ಪ ಕೆಲಸಗಳನ್ನು ಪ್ರಾಮಾಣಿಕವಾಗಿ ಮಾಡಿದ್ದೇನೆ.

25. ಸಂಶೋಧನ ವಿದ್ಯಾರ್ಥಿ : ಮಾಜಿ ಮುಖ್ಯಮಂತ್ರಿ ಆರ್.ಗುಂಡೂರಾವ್ ಸರ್ಕಾರದಲ್ಲಿ ಸಚಿವ ಪದವಿ ಪಡೆಯಲು ಹೈಕಮಾಂಡ್‌ನಿಂದ ಒತ್ತಡ ತಂದಿದ್ರಾ?

ಗುರುದೇವರಹಳ್ಳಿ ಮಾದೇಗೌಡರು: ಸಚಿವನಾಗಬೇಕೆಂಬ ಹಂಬಲ ನನಗಿರಲಿಲ್ಲ. ಯಾವ ಹೈಕಮಾಂಡ್ ನಿಂದಲೂ ಒತ್ತಡವನ್ನು ತರಲಿಲ್ಲ. ಸಮಯ ಸಂದರ್ಭ ಸಚಿವ ಸ್ಥಾನ ಒದಗಿಬಂತು ಸಚಿವನಾದೆ. ಸಿಕ್ಕಿದ ಅಲ್ಪ ಸಮಯದಲ್ಲಿ ನನ್ನ ಕೈಲಾದಷ್ಟು ಕೆಲಸ ನಿರ್ವಹಿಸಿದ್ದೇನೆ ಎಂಬುದು ನನ್ನ ಅಭಿಪ್ರಾಯ.

26. ಸಂಶೋಧನ ವಿದ್ಯಾರ್ಥಿ : ಮಂತ್ರಿಯಾಗಿ ಕಾರ್ಯನಿರ್ವಹಿಸವಾಗ ಪ್ರಮುಖವಾಗಿ ಎದುರಿಸಿದ ಸಮಸ್ಯೆ ಯಾವುದು?

ಗುರುದೇವರಹಳ್ಳಿ ಮಾದೇಗೌಡರು: ಅರಣ್ಯ ಸಚಿವನಾಗಿ ಕಾರ್ಯನಿರ್ವಹಿಸುವ ಸಮಯದಲ್ಲಿ ಅರಣ್ಯ ಪ್ರದೇಶದಲ್ಲಿ ಹಕ್ಕಿ–ಪಿಕ್ಕಿ, ದೊಂಬರು, ಗಿರಿಜನರು ಸಣ್ಣ ಸಣ್ಣ ಗುಡಿಸಲು ಹಾಕಿಕೊಂಡು ಜೀವನ ನಡೆಸುತ್ತಿದ್ದರು. ಇಂತಹವರನ್ನು ಅರಣ್ಯ ರಕ್ಷಣೆ ದೃಷ್ಟಿಯಿಂದ ಅರಣ್ಯದಿಂದ ಹೊರಹಾಕಬೇಕೆಂದು ಸದನದಲ್ಲಿ ಕೆಲವು ಶಾಸಕರು, ವಿರೋಧ ಪಕ್ಷದವರು ಹೆಚ್ಚು ಒತ್ತಡ ತಂದಾಗ ನನ್ನ ಮನಸ್ಸಿಗೆ ನೋವುಂಟಾಯಿತು.

27. ಸಂಶೋಧನ ವಿದ್ಯಾರ್ಥಿ : ಜಿಲ್ಲೆಯ ರೈತರ ಎಲ್ಲಾ ಹೋರಾಟಗಳಲ್ಲಿಯೂ ನಾಯಕತ್ವವನ್ನು ವಹಿಸಿಕೊಂಡು ಯಶಸ್ಸನ್ನು ಕಂಡಿದ್ದೀರಿ. ಇದರ ತಂತ್ರವೇನು.

ಗುರುದೇವರಹಳ್ಳಿ ಮಾದೇಗೌಡರು: ನನ್ನ ಜೀವನದ ಎಲ್ಲಾ ಸಮಯವನ್ನು ಹೋರಾಟಕ್ಕೆ ಮೀಸಲಿಟ್ಟಿದ್ದೇನೆ. ರೈತರಿಗೆ ಅನುಕೂಲವಾಗಬೇಕು ಎಂಬ ಕಾರಣಕ್ಕಾಗಿ ಹೋರಾಟದಲ್ಲಿ ಸಂಪೂರ್ಣವಾಗಿ ತೊಡಗಿಸಿ

ಕೊಂಡು ಅವರಿಗೆ ನ್ಯಾಯ ಸಿಗುವ ತನಕ ಹೋರಾಟ ಮಾಡಿರುವುದು ನನ್ನ ಮನಸ್ಸಿಗೆ ಸಂತೋಷವನ್ನು ತಂದಿದೆ. ಈಗಲೂ ಯುವ ಹೋರಾಟಗಾರರು ನಡೆಸುವ ಹೋರಟಗಳಿಗೆ ನನ್ನನ್ನು ಕರೆದಾಗ ತುಂಬ ಖುಷಿಯಿಂದ ಅವರ ಹೋರಾಟಗಳಲ್ಲಿ ಭಾಗವಹಿಸುತ್ತೇನೆ. ಹೀಗೆ ಮುಂದಿನ ಪೀಳಿಗೆ ರೈತರಿಗೆ, ಬಡ ಕಾರ್ಮಿಕರಿಗೆ, ಹಿಂದುಳಿದವರಿಗೆ ಅನ್ಯಾಯ ಆದಾಗ ಹೋರಾಟ ಮಾಡುವಂತಹ ಮನಸ್ಥಿತಿಯನ್ನು ಬೆಳೆಸಿಕೊಂಡು ಅವರಿಗೆ ನ್ಯಾಯ ದೊರಕಿಸಿಕೊಟ್ಟರೆ ನನಗೆ ಖುಷಿಯಾಗುತ್ತದೆ.

28. ಸಂಶೋಧನ ವಿದ್ಯಾರ್ಥಿ : ನಿಮ್ಮ ಎಲ್ಲಾ ಹೋರಾಟಗಳಲ್ಲಿಯೂ ಗಾಂಧೀಜಿಯವರ ಅಹಿಂಸ ತತ್ವಗಳನ್ನೇ ಪಾಲಿಸಿಕೊಂಡು ಬಂದಿದ್ದೀರಿ. ಕಾರಣವೇನು?

ಗುರುದೇವರಹಳ್ಳಿ ಮಾದೇಗೌಡರು: ಚಿಕ್ಕ ವಯಸ್ಸಿನಿಂದಲೂ ಗಾಂಧೀಜಿಯವರು ನನಗೆ ಆದರ್ಶರಾಗಿದ್ದಾರೆ. ಅವರು ನಡೆಸಿದ ಅನೇಕ ಹೋರಾಟಗಳು ಶಿಸ್ತು ಮತ್ತು ಅಹಿಂಸಾತ್ಮಕ ವಾಗಿದ್ದವು. ಗೊಂದಲ, ಗಲಾಟೆ, ರಕ್ತಪಾತ ಇವುಗಳಿಲ್ಲದೆ ಹೋರಾಟ ನಡೆಸಿ ಜಯಗಳಿಸ ಬಹುದು ಎಂಬುವುದಕ್ಕೆ ಸಾಕ್ಷಿ ಅವರು ದೊರಕಿಸಿ ಕೊಟ್ಟ ಸ್ವಾತಂತ್ರ್ಯ. ಈ ಕಾರಣದಿಂದ ಗಾಂಧಿಜಿಯವರೇ ಆದರ್ಶರಾಗಿದ್ದಾರೆ. ಜೊತೆಗೆ ನಾನು ರೂಪಿಸಿದ ಎಲ್ಲಾ ರೈತ ಹೋರಾಟಗಳಲ್ಲಿ ಗಾಂಧೀಜಿಯವರ ಅಹಿಂಸಾತ್ಮಕ ತತ್ವಗಳನ್ನು ಪಾಲಿಸಿಕೊಂಡು ಬಂದಿದ್ದೇನೆ. ಮುಂದಿನ ಪೀಳಿಗೆಗೂ ಇದನ್ನೇ ಹೇಳುತ್ತೇನೆ.

29. ಸಂಶೋಧನ ವಿದ್ಯಾರ್ಥಿ : ಗಾಂಧಿಭವನ ಸ್ಥಾಪನೆ ಮಾಡಲು ಕಾರಣ ಮತ್ತು ಇದರ ಉದ್ದೇಶವೇನು?

ಗುರುದೇವರಹಳ್ಳಿ ಮಾದೇಗೌಡರು: ಗಾಂಧಿಜಿಯವರು ಗ್ರಾಮಗಳು ಆರ್ಥಿಕವಾಗಿ ಬಲಿಷ್ಠವಾದರೆ ದೇಶದ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂಬ ಅಂಶವನ್ನು ಅಚಲವಾಗಿ ನಂಬಿದ್ದರು. ಈ ಕಾರಣದಿಂದಿದಾಗಿ ಗ್ರಾಮ ಮತ್ತು ನಗರ ಪ್ರದೇಶದಲ್ಲಿ ಗಾಂಧಿಭವನ ಸ್ಥಾಪನೆ ಮಾಡಿ ಅದರ ಮೂಲಕ ಬಡಜನರು ಆರ್ಥಿಕವಾಗಿ ಸ್ವಾವಲಂಬಿ ಗಳಾಗಲು ಸ್ವ-ಉದ್ಯೋಗ ಕಲ್ಪಿಸಿ ಕೊಡುವುದು, ಗುಡಿಕೈಗಾರಿಕೆಗಳ ಮೂಲಕ ತರಬೇತಿ ನೀಡು ವುದು. ಮುಂತಾದ ಕಾರ್ಯಕ್ರಮ ಗಳನ್ನು ಗಾಂಧಿಭವನದ ಮುಖೇನವಾಗಿ ನಡೆಸುವ ಸಲು ವಾಗಿ ಗಾಂಧಿಭವನವನ್ನು ಸ್ಥಾಪನೆ ಮಾಡಲಾಗಿದೆ.

30. ಸಂಶೋಧನ ವಿದ್ಯಾರ್ಥಿ : ನೀವು ಕೆ.ಎಂ.ದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆ ಯನ್ನು ಸ್ಥಾಪಿಸಲು ಕಾರಣವೇನು?

ಗುರುದೇವರಹಳ್ಳಿ ಮಾದೇಗೌಡರು: ನನ್ನ ಕ್ಷೇತ್ರಕ್ಕೆ ಸೇರಿರುವ ಕಾಳಮುದ್ದನದೊಡ್ಡಿ ಮೂಲಸೌಕರ್ಯದಿಂದ ವಂಚಿತವಾಗಿ ಹಾಗೂ ರೈತರು ವ್ಯವಸಾಯವನ್ನು ಮಾಡಿ ಬಹಳನಷ್ಟ ವನ್ನು ಅನುಭವಿಸುತ್ತಿದ್ದರು. ಕಾರಣ ಸರಿಯಾದ ಸಮಯಕ್ಕೆ ಮಳೆಯಾಗುತ್ತಿರಲಿಲ್ಲ. ಈ ಕಾರಣ ದಿಂದ ಕಾವೇರಿ ನದಿ ನೀರನ್ನು ಕಾಲುವೆ ಮುಖಾಂತರ ಈ ಭಾಗಗಳಿಗೆ ತಲುಪುವಂತೆ ಮಾಡಲಾಗಿದೆ. ಈ ನದಿ ನೀರನ್ನು ವ್ಯವಸಾಯಕ್ಕೆ ಬಳಸಿಕೊಂಡ ನಂತರ ಇಲ್ಲಿನ ರೈತರು ಕಬ್ಬು ಬೆಳೆದರೆ ಆರ್ಥಿಕವಾಗಿ ಸದೃಢರಾಗುತ್ತಾರೆ ಎಂಬ ನಂಬಿಕೆಯಿಂದ ಈ ಸಕ್ಕರೆ ಕಾರ್ಖಾನೆಯನ್ನು ಅನೇಕ ರೀತಿಯ ಆಡಳಿತಾತ್ಮಕ ಹೋರಾಟವನ್ನು ನಡೆಸಿ ಸ್ಥಾಪನೆ ಮಾಡಲಾಗಿದೆ.

# ಆಕರಗಳು

## I. ಪ್ರಾಥಮಿಕ ಆಕರಗಳು

### ಅ. Legislative assembly Debates


1. Congress committee conference report, political and private meeting held at Bangalore (08.08.1937).
2. Election results, (1994), publicity and information department, Bangalore-(1994).
3. Karnataka legistative assembly debates proceedings (4 August 1963), page no.180-181
4. Karnataka legistative assembly debates proceedings (4 August 1964), page no. 152-153
5. Karnataka legistative assembly debates proceedings (4 August 1965), page no. 160-161
6. Karnataka legistative assembly debates proceedings (4 August 1972) page no. 155-156
7. Karnataka legistative assembly debates proceedings date (20 Augest 1978), page no. 345-347
8. Karnataka legistative assembly debates proceedings volxl-L.A. (15 date 23, janvary), page no. 1979
9. Karnataka legistative assembly debates proceedings (17 Jun 1980) page no. 242-243
10. Karnataka legistative assembly debates proceedings (23 march 1985), page no. 480
11. Karnataka legistative assembly debates proceedings (17 march 1986), page no. 25-26 and 40
12. Karnataka legistative assembly debates proceedings (10 Febravery 1987), page no. 233-236
13. Karnataka legistative assembly debates proceedings (30 March 1988), page no. 346-351

14. Karnataka State Election Statistics of General Election of Legislative Assembly, Banglore, (1989).

15. Karnataka State Tenth General Election's to Lok Sabha (1991), Chief Electate Officer, Bangalore, (1993).

16. Karnataka State Election Statistics of General Election to Legislative Assembly, Bangalore, (1994).

17. Karnataka Whitepaper on concessions to farmers announced by the Government to Karnataka, (October 1980) Government press, Bangalore (1980).

18. Karnataka Legislative Assembly who's who, government press Bangalore, (1985).

19. Karnataka State Election statistics of general election to legislative assembly, (1994).

20. Mysore legislative assembly debetes prosidings (1963), vol. no. 5, page no. 244

21. Mysore legislative assembly debetes prosidings (10 july 1964), page no. 3689

22. Mysore legislative assembly debetes prosidings (31 march 1965), page no. 1965

23. Mysore legislative assembly debetes prosidings (1967-68), page no. 1186

24. Mysore legislative assembly debetes prosidings (23rd janavery 1969) to (march 1970), volumes iv to xxvii

25. Mandya at a Glance, (1993-94), Zilla Panchayat, Mandya.

26. Mandya at a Glance, (1996-97), Zilla Panchayat, Mandya.

27. Mysugar company Ltd., Mandya public notice (1.8.1940), KSA.

28. Sugar Mill, Mysore, Financial report, Mandya, (1983).

ಆ. **ಜಿ.ಮಾದೇಗೌಡರ ಪತ್ರಗಳು, ಕರ ಪತ್ರಗಳು, ಡೈರಿ, ಕೈ ಬರಹ, ಇತ್ಯಾದಿ**

ಇ. **ಭಾಷಣಗಳ ಆಡಿಯೋ ಮತ್ತು ವಿಡಿಯೋಗಳು**

1. ಮೈಸೂರು ವಿಲೀನ ವಿರೋಧಿ ಚಳುವಳಿ ಸಮಾವೇಶ (22.01.1956), ಮಂಡ್ಯ.
2. ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿದ್ದ ವೇಳೆ ಬೃಹತ್ ಸಮಾವೇಶ (10.04.1962), ಮದ್ದೂರು.
3. ವಿಧಾನಸೌಧಕ್ಕೆ ರೈತರೊಂದಿಗೆ ಪಾದಯಾತ್ರೆ ಬೆಳೆಗೆ ಬೆಲೆ ನಿಗಧಿಗಾಗಿ ಸಮಾವೇಶ (01.11.1974), ಬೆಂಗಳೂರು.
4. ವರುಣ ನಾಲಾ ವಿರೋಧಿ ಚಳುವಳಿ ಬೃಹತ್ ಸಮಾವೇಶ (09.06.1977), ಮಂಡ್ಯ.
5. ಚುನಾವಣೆ ಪ್ರಚಾರ ಸಮಾವೇಶ (20.07.1979), ಕಿರುಗಾವಲು.
6. ವಿಧಾನಸಭಾ ಸದಸ್ಯರಾಗಿದ್ದಾಗ ಚರ್ಚೆ (16.07.1980), ಬೆಂಗಳೂರು.
7. ಗೋಕಾಕ್ ಚಳುವಳಿಯ ಬೃಹತ್ ಸಮಾವೇಶ (13.04.1982), ಮಂಡ್ಯ.
8. ಅರಣ್ಯ, ಗಣಿ ಭೂ ವಿಜ್ಞಾನ, ಸಚಿವರಾಗಿದ್ದಾಗ ಅಭಿವೃದ್ಧಿ ಕಾರ್ಯಗಳ ಉದ್ಘಾಟನಾ ಸಮಾವೇಶ (12.03.1982), ಮಂಡ್ಯ.
9. ಮಂಡ್ಯ ರೈತ ಸಮಾವೇಶ (24.11.1989), ಮಂಡ್ಯ.
10. ಬ್ಯಾಂಕುಗಳೊಂದಿಗೆ ಸಾಲ ನೀಡಿಕೆಯ ಸಮಾವೇಶ (7.10.1990), ಮಂಡ್ಯ.
11. ಕಬ್ಬಿನ ಬೆಲೆ ಪರಿಸ್ಕರಣೆಗಾಗಿ ರೈತರೊಂದಿಗೆ ಸಮಾವೇಶ (13.07.1990), ಮದ್ದೂರು.
12. ರೈತರನ್ನು ವಂಚಿಸುತ್ತಿದ್ದ ಮಧ್ಯವರ್ತಿಗಳ ವಿರುದ್ಧ ಬೃಹತ್ ಸಮಾವೇಶ (02.10.1990), ಮಂಡ್ಯ.
13. ಅಂತರರಾಷ್ಟ್ರೀಯ ರೈತ ಸಮಾವೇಶ (07.10.1993), ಬೆಂಗಳೂರು.
14. ವಿದೇಶಿಕರಣದ ವಿರೋಧಿ ಸಮಾವೇಶ (01.11.1995), ಬೆಂಗಳೂರು.
15. ಕಾವೇರಿ ನದಿ ನೀರಿನ ಹಂಚಿಕೆಯ ಹೋರಾಟದ ಸಮಾವೇಶ (10.06.1995)
16. ರೈತರೊಂದಿಗೆ ವಿಧಾನಸಭೆ ಮುಂದೆ ಧರಣಿ (14.08.1997)
17. ಮಂಡ್ಯ ಮೈಷುಗರ್ ಕಂಪನಿ ಮುಂದೆ ಧರಣಿ ಹಾಗು ಸಮಾವೇಶ (16.10.1997)

18. ನೀರಾ ವಿರೋಧಿ ಚಳುವಳಿ ಸಮಾವೇಶ (02.10.2001), ಮಂಡ್ಯ.

19. ವಿದ್ಯುತ್ಶಕ್ತಿ ಸಮಸ್ಯೆ ವಿರುದ್ಧ ಮುಸ್ಕರ, ಕಾವೇರಿ ಭವನ, (25.01.2002), ಬೆಂಗಳೂರು.

20. ರಸಗೊಬ್ಬರ ಹಂಚಿಕೆಗಾಗಿ ಸಮಾವೇಶ (2003), ಮಂಡ್ಯ.

**ಈ. ಜಿ.ಮಾದೇಗೌಡರನ್ನು ಕುರಿತ ಅಂತರ್ಜಾಲ ವೀಡಿಯೋಗಳು**

1. ಅರಣ್ಯ, ಗಣಿ ಭೂ ವಿಜ್ಞಾನ ಸಚಿವರಾಗಿದ್ದ ವೇಳೆ ಜಿ.ಮಾದೇಗೌಡರೊಂದಿಗೆ ಸಂದರ್ಶನ (18.07.1983), ಕನ್ನಡ ದೂರದರ್ಶನ.

2. ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಮುಂದೆ, ಧರಣಿ ನಡೆಸುವ ಸಂದರ್ಭದಲ್ಲಿ ಜಿ.ಮಾದೇಗೌಡರೊಂದಿಗೆ ಸಂದರ್ಶನ (13.03.1994), ಈ ಟಿವಿ, ಕನ್ನಡ.

3. ಮಂಡ್ಯ ರಾಜಕೀಯ ಬೆಳವಣಿಗೆ ಕುರಿತು ಸಂದರ್ಶನ (14.07.1999), ಕರ್ನಾಟಕ ಟಿ.ವಿ., ಕನ್ನಡ.

4. ಕಾವೇರಿ ನೀರನ್ನು ತಮಿಳುನಾಡಿಗೆ ಬಿಡುಗಡೆ ಮಾಡಿದ ದಿನದಂದು ಜಿ.ಮಾದೇಗೌಡರೊಂದಿಗೆ ಸಂದರ್ಶನ (16.07.2001), ಬಿ ಟಿವಿ ನ್ಯೂಸ್, ಕನ್ನಡ.

5. ರೈತರ ಸಾಲು ಸಾಲು ಆತ್ಮಹತ್ಯೆ ಸಂದರ್ಭದಲ್ಲಿ ಜಿ.ಮಾದೇಗೌಡರೊಂದಿಗೆ ಸಂದರ್ಶನ (12.04.2005), ಟಿವಿ–9 ನ್ಯೂಸ್ ಕನ್ನಡ.

6. ಜಿ.ಮಾದೇಗೌಡ ಸಮಾಜಸೇವಾ ಪ್ರತಿಷ್ಠಾನಾ ಕಾರ್ಯಕ್ರಮದ ದಿನದಂದು ಜಿ.ಮಾದೇಗೌಡರೊಂದಿಗೆ ನಡೆಸಿದ ಸಂವಾದ (10.07.2009) ಪಬ್ಲಿಕ್ ಟಿ.ವಿ., ಕನ್ನಡ

7. ಕಾವೇರಿ ನೀದಿ ನೀರಿನ ವಿಚಾರವಾಗಿ ಸುಪ್ರೀಂಕೋರ್ಟಿನ ಅಂತಿಮ ತೀರ್ಪಿನ ವಿಚಾರವಾಗಿ ಜಿ.ಮಾದೇಗೌಡರೊಂದಿಗೆ ಸಂದರ್ಶನ (18.07.2008), ಸುವರ್ಣ ನ್ಯೂಸ್, ಕನ್ನಡ.

8. ರೈತಪರ ಹೋರಾಟಗಳನ್ನು ಸಂದರ್ಭದಲ್ಲಿ ಜಿ.ಮಾದೇಗೌಡರೊಂದಿಗೆ ಸಂದರ್ಶನ (06.09.2012), ಉದಯ ಟಿ.ವಿ., ಕನ್ನಡ.

9. ಕಾವೇರಿ ನದಿ ನೀರಿನ ಹಂಚಿಕೆಯ ವಿಚಾರವಾಗಿ ಜಿ.ಮಾದೇಗೌಡರೊಂದಿಗೆ ಸಂದರ್ಶನ (13.07.2012), ನ್ಯೂಸ್–18, ಕನ್ನಡ.

10. ಕಾವೇರಿ ನದಿ ನೀರನ ಹಂಚಿಕೆಯ ವಿಚಾರವಾಗಿ ಜಿ.ಮಾದೇಗೌಡರೊಂದಿಗೆ ಸಂದರ್ಶನ (11.02.2013), ದಿಗ್ವಿಜಯ ನ್ಯೂಸ್, ಕನ್ನಡ.

11. ರಾಜಕೀಯ ವಿದ್ಯಾಮಾನ್ಯ ಬೆಳವಣಿಗೆಗೆ ಸಂಬಂಧಿಸಿದಂತೆ, ಜಿ.ಮಾದೇಗೌಡ ರೊಂದಿಗೆ ಸಂದರ್ಶನ, (18.09.2013), ಟಿ.ವಿ.–5 ನ್ಯೂಸ್, ಕನ್ನಡ.

12. ಗಾಂಧೀಜಯಂತಿಯ ಪ್ರಯುಕ್ತ ಜಿ.ಮಾದೇಗೌಡರೊಂದಿಗೆ ನಡೆಸಿದ ಸಂವಾದ (02.10.2014), ಈ ಟಿವಿ ನ್ಯೂಸ್, ಕನ್ನಡ.

**ಉ. ಪತ್ರಗಳು (ಜಿ.ಮಾದೇಗೌಡರಿಗೆ ಬರೆದಿರುವ ಪತ್ರಗಳು)**

1. ಕೆಂಗಲ್ ಹನುಮಂತಯ್ಯ
2. ಜಗಜೀವನ್‌ರಾಂ
3. ಶ್ರೀ ಸುಬ್ರಮಣ್ಯಂ
4. ಗಾಡ್ಗಿಲ್
5. ಮಹಾಲಿಂಗಮ್
6. ಎಸ್.ಎನ್.ನಂಜುಂಡರಾವ್
7. ಪಿ.ಎಂ.ಕವಾಡಿಯಾ
8. ಹೆಚ್.ಡಿ.ದೇವೇಗೌಡ
9. ಎಸ್.ಎಂ.ಕೃಷ್ಣ
10. ಎಸ್.ಆರ್.ಬೊಮ್ಮಾಯಿ
11. ಆಸ್ಕರ್ ಫರ್ನಾಂಡೀಸ್
12. ಎಂ.ವೀರಪ್ಪಮೊಯ್ಲಿ

## II ಪೂರಕ ಸಾಹಿತ್ಯ ಹಾಗೂ ಲೇಖನಗಳು

### ಅ. ಪೂರಕ ಸಾಹಿತ್ಯ

1. ಅರ್ಜುನಪುರಿ ಅಪ್ಪಾಜಿಗೌಡ, (1999), ಮದ್ದೂರು ತಾಲ್ಲೂಕು ದರ್ಶನ, ಮಂಡ್ಯ; ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು.

2. ಅರ್ಜುನಪುರಿ ಅಪ್ಪಾಜಿಗೌಡ, (2005), ಸಂಘಟನಾ ಚತುರ ಎಚ್.ಕೆ.ವೀರಣ್ಣಗೌಡ, ಮಂಡ್ಯ ಬಂಧುಮಿತ್ರ ಪ್ರಕಾಶನ.

3. ಅರ್ಜುನಪುರಿ ಅಪ್ಪಾಜಿಗೌಡ, (2007), ತಲೆ ಕಾಯ್ವಳೇ ಕಾವೇರಿ, ಮಂಡ್ಯ; ಶ್ರೀ ಸಿದ್ದಾರೂಢ ಪ್ರಕಾಶನ.

4. ಅಶೋಕ್‌ಕುಮಾರ್.ಯು.ಬಿ, (2001), ಕೃಷಿ ಕೂಲಿಕಾರರ ಬದುಕು-ಬವಣೆ, ಮೈಸೂರು ಚೇತನ ಬುಕ್‌ಹೌಸ್.

5. ಅಕ್ಷತಾ.ಕೆ, (2011), ಕಾಡುತೊರೆಯ ಜಾಡು (ಕಡಿದಾಳು ಶಾಮಣ್ಣ ಬದುಕು ಹೋರಾಟಗಳ ಆತ್ಮಕತೆ), ಬೆಂಗಳೂರು; ಅಭಿನವ ಪ್ರಕಾಶನ.

6. ಅನಂತರಾಮ.ಕೆ.ಕೆ, (1982), ಸಕ್ಕರೆಯ ಸೀಮೆ, ಮಂಡ್ಯ ಜಿಲ್ಲೆಯ ಪ್ರವಾಸ ಕಥನ, ಮೈಸೂರು; ಅನಂತ ಪ್ರಕಾಶನ.

7. ಈರಯ್ಯ ಕಿಲ್ಲೇದಾರ, (2010), ರೈತ ತೀರ್ಪು, ಬೆಂಗಳೂರು ಕಾಲ ಪ್ರಕಾಶನ.

8. ಒಡೆಯರ್ ಡಿ. ಹೆಗ್ಗಡೆ, (2010), ರಾಷ್ಟ್ರೀಯವಾದಿ ಆಂದೋಲನ ಸಾಮಾಜಿಕ ಆರ್ಥಿಕ ಆಯಾಮಗಳು, ಮೈಸೂರು; ಅರ್ಜುನ್ ಪಬ್ಲಿಶಿಂಗ್ ಹೌಸ್.

9. ಕಡಿದಾಳು ಶಾಮಣ್ಣ, (2009), ಆದರ್ಶ (ಎಂಬತ್ತರ ದರ್ಶದ ಬರಹ ಮತ್ತು ಪತ್ರಗಳು), ಶಿವಮೊಗ್ಗ; ಅಹರ್ನಿಶಿ ಪ್ರಕಾಶನ.

10. ಕರ್ನಾಟಕ ಸರ್ಕಾರ, (1977), ವರುಣಾ ನಾಲೆ, ಅನುಮಾನ, ಸಮಾಧಾನ, ಬೆಂಗಳೂರು; ಸರ್ಕಾರಿ ಮುದ್ರಣಾಲಯ, ಬೆಂಗಳೂರು.

11. ಕರ್ನಾಟಕ ಸಂಗಾತಿ, (2002), ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು, ಮಂಡ್ಯ; ಭಾರತದ ಗೆಜೆಟಿಯರ್.

12. ಕಾವೇರಿ ಜಲವಿವಾದ, (2002), ಜಲಶಕ್ತಿಗಾಗಿ ಜನಶಕ್ತಿಯ ಹೋರಾಟ, ಬೆಂಗಳೂರು; ಜಲ ಸಂಪನ್ಮೂಲ ಇಲಾಖೆ, ಕರ್ನಾಟಕ ಸರ್ಕಾರ.

13. ಕಾಳೇಗೌಡ ನಾಗವಾರ ಹಾಗೂ ಜಿ.ವಿ.ಆನಂದಮೂರ್ತಿ (ಸಂ.), (1997), ಶಾಂತವೇರಿ ಗೋಪಲಗೌಡ ನೆನಪಿನ ಸಂಪುಟ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ.

14. ಕುಮಾರ್.ಕೆ.ಎಂ, (2008), ಕರ್ನಾಟಕದಲ್ಲಿನ ರೈತ ಚಳವಳಿ, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

15. ಕೃಷ್ಣಸ್ವಾಮಿ.ಸಿ.ಎನ್, (2005), ವಿಶ್ವಮಾನ್ಯ ಗಾಂಧೀಜಿ, ಬೆಂಗಳೂರು; ಭಾಗ್ಯಲಕ್ಷ್ಮೀ ಪ್ರಕಾಶನ.

16. ಕೃಷ್ಣೇಗೌಡ.ಟಿ.ಎಲ್, (2009), ಪಿ.ಸಾಯಿನಾಥ್ ರೈತರ ಬವಣೆಗಳ ಬಗ್ಗೆ, ಬೆಂಗಳೂರು; ಚಿಂತನ ಪುಸ್ತಕ.

17. ಕೇಶವಮೂರ್ತಿ.ಎಚ್.ಎಲ್, (2007), ಕಾವೇರಿ ತೀರ್ಪು ಅನ್ಯಾಯ ಎಲ್ಲಿ? ಮೈಸೂರು; ಅಭಿರುಚಿ ಪ್ರಕಾಶನ.

18. ಗೋವಿಂದರಾಜು.ಸಿ.ಆರ್, (2005), ಕರ್ನಾಟಕ ಏಕೀಕರಣ ಹಾಗೂ ನಾಮಕರಣ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, ಬೆಂಗಳೂರು; ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ ವಿಧಾನಸೌಧ.

19. ಗೋವಿಂದಯ್ಯ.ಟಿ, (2007), ಕಾವೇರಿ ಅಂತಿಮ ತೀರ್ಪು ಕರ್ನಾಟಕದ ಪಾಲಿನ ಮರಣಶಾಸನ, ಬೆಂಗಳೂರು; ಗೋಮತಿ ಪ್ರಕಾಶನ.

20. ಚಿನ್ನಸ್ವಾಮಿ ಎಸ್.ಸೋಸಲೆ (ಸಂ.), (2010), ಸಮಕಾಲೀನ ಕರ್ನಾಟಕ ಚರಿತ್ರೆಯ ವಿವಿಧ ಆಯಾಮಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗ.

21. ಚಂದ್ರಪ್ಪ.ಸಿ, (2012), ರೈತ ಮತ್ತು ಆದಿವಾಸಿ ಚಳುವಳಿ (ಸ್ವಾತಂತ್ರ್ಯ ಪೂರ್ವ) ಬೆಂಗಳೂರು; ಮನೋಜ್ ಪಬ್ಲೀಕೇಷನ್ಸ್.

22. ಚಂದ್ರಪೂಜಾರಿ.ಎಂ, (2009), ಹಂಪಿ; ಪ್ರಸಾರಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ,.

23. ಚಂದು.ಕೆ.ಟಿ, (1999), ಶಿವಪುರ ರಾಷ್ಟ್ರಕೂಟ ನೆನಪು, ಮದ್ದೂರು; ಎಚ್.ಕೆ.ವೀರಣ್ಣಗೌಡ ಸ್ಮಾರಕ ಪ್ರಕಾಶನ.

24. ಚಂದ್ರಶೇಖರ್.ರಾ.ನಂ, (1987), ಕಬ್ಬು ಬೆಳೆಗಾರರ ಹೋರಾಟ, ಹೊಸಪೇಟೆ; ರೈತ ಸಂಘ ಪ್ರಕಟಣೆ.

25. ಜಗದೀಶ್‌ಕೊಪ್ಪಲ, (2005), ಕೆ.ವಿ.ಶಂಕರಗೌಡ ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, ಬೆಂಗಳೂರು; ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ ವಿಧಾನಸೌಧ.

26. ಜಯಪ್ರಕಾಶ್‌ಗೌಡ.ಬಿ ಹಾಗೂ ಲಿಂಗಣ್ಣ ಬಂಧುಕಾರ್ (ಸಂ.), (2006), ಮಂಡ್ಯ; ಜಿಲ್ಲಾ ಸ್ವಾತಂತ್ರ್ಯ ವೀರರು ಪರಂಪರಾವಲೋಕನ ಸಮಿತಿ.

27. ಜಯಪ್ರಕಾಶ್‌ಗೌಡ.ಬಿ., (2006), ಸುವರ್ಣ ಮಂಡ್ಯ; ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು.

28. ಜಯಪ್ರಕಾಶ್‌ಗೌಡ.ಬಿ. (2006), ಜನಮನದಲ್ಲಿ ಶಂಕರಗೌಡ, ಮಂಡ್ಯ; ಕೆ.ವಿ.ಶಂಕರಗೌಡ ಸಾಂಸ್ಕೃತಿಕ ಪ್ರತಿಷ್ಠಾನ (ರಿ.).

29. ಜಯಪ್ಪಗೌಡ.ಡಿ.ಎಸ್, (2011), ಸಮಾಜವಾದಿ ಶಾಂತವೇರಿ ಗೋಪಾಲಗೌಡ, ಮೈಸೂರು; ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

30. ಜವರೇಗೌಡ.ದೇ, (1976), ಹೋರಾಟದ ಬದುಕು, ಮೈಸೂರು; ದೇಜಗೌ ಸಾಂಸ್ಕೃತಿಕ ಪ್ರತಿಷ್ಠಾನ, ಕಲಾನಿಲಯ.

31. ಜವರೇಗೌಡ.ದೇ, (1975), ಕಬ್ಬಿನಹಾಲು, ಮೈಸೂರು; ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ವಾಣಿವಿಲಾಸಮರಂ.

32. ಜವರಪ್ಪಗೌಡ.ಪಿ.ಎನ್., (1989), ಮಂಡ್ಯ; ಅಭಿನಂದನ ಸಮಿತಿ,

33. ಜವರೇಗೌಡ.ದೇ, (1986), ನಿತ್ಯಸಚಿವ (ಕೆ.ವಿ.ಶಂಕರಗೌಡರ ಜೀವನಚರಿತ್ರೆ), ಮೈಸೂರು; ದೇಜಗೌ ಟ್ರಸ್ಟ್ ಕಲಾನಿಲಯ ಪ್ರಕಾಶನ.

34. ಜೋಶಿ.ಜಿ.ವಿ, (1999), ದಕ್ಷಿಣ ಕನ್ನಡ ಜಿಲ್ಲೆಯ ರೈತರ ಹೋರಾಟ, ಮಂಗಳೂರು; ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ.

35. ತಿಮ್ಮನಹಳ್ಳಿ ವೇಣುಗೋಪಾಲ್, (2010), ರೈತರು, ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ, 1881–1947, ಬೆಂಗಳೂರು; ಎಂ.ಮೀನಾಕ್ಷಿ ರಮೇಶ್ ಧಾತ್ರಿ ಪುಸ್ತಕ ಮಾಲೆ.

36. ದೇಜಗೌ (ಸಂ), (1994) ಸಿರಿಯೊಡಲು, ಮಂಡ್ಯ; 63ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ.

37. ದೇಜಗೌ (ಸಂ.), (1994) ಸುವರ್ಣ ಮಂಡ್ಯ, ಮಂಡ್ಯ; 63ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ.

38. ದೇ.ಜ.ಗೌ., (1999), ಎಸ್.ಎಂ.ಕೃಷ್ಣ (ಬದುಕು–ಸಾಧನೆ), ಮೈಸೂರು; ವನಶ್ರೀ ಪ್ರಕಾಶನ.

39. ದೇ.ಜ.ಗೌ., (1998), ಕರ್ನಾಟಕದ ರೂವಾರಿ, ಎಸ್.ನಿಜಲಿಂಗಪ್ಪ, ಮೈಸೂರು; ಕುವೆಂಪು ವಿದ್ಯಾವರ್ಧಕ ಟ್ರಸ್ಟ್ (ರಿ.).

40. ನಾಗರಾಜ್ ಎಂ.ಜಿ, (2006), ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು, ಸಹಸ್ತಮಾನ ಸಂಪುಟ–1, 2, 3, 4, 5, 6 ಗ್ರಂಥಾಲಯ ಸಮಿತಿ, ಬೆಂಗಳೂರು; ಕರ್ನಾಟಕ ವಿಧಾನ ಮಂಡಲ, ವಿಧಾನಸೌಧ.

41. ನಾಗರಾಜು.ಸಿ.ಪಿ., (2010), ಹಳ್ಳಿಗಾಡಿನ ರೂವಾರಿ, ಮಂಡ್ಯ; ನಾಗು ಸ್ಮಾರಕ ಪ್ರಕಾಶನ.

42. ನಾಗತಿಹಳ್ಳಿ ರಮೇಶ್, (2003), ಮಾನವತಾವಾದಿ ಮಲ್ಲಯ್ಯ, ಬೆಂಗಳೂರು; ಸೃಷ್ಟಿ ಪ್ರಕಾಶನ.

43. ನಾಡಕರ್ಣಿ.ಎಂ.ವಿ. (2004), ಕರ್ನಾಟಕದ ರೈತ ಹೋರಾಟಗಳು, ಬೆಂಗಳೂರು; ಪ್ರಿಂಟರ್ಸ್ ಪ್ರಕಾಶನ.

44. ನಾಗೇಶ್.ಎಚ್.ವಿ. ಮತ್ತು ಪುನೀತ್.ಎ.ಇ., (1984), ಭಾರತದಲ್ಲಿ ರೈತ ಹೋರಾಟಗಳು, ಧಾರವಾಡ; ಚಂದ್ರನಾಥ್ ಪ್ರಕಾಶನ.

45. ನಾರಾಯಣರಾವ್.ವಿ.ಎಸ್, (2001), ಕರ್ನಾಟಕದಲ್ಲಿ ಗಾಂಧೀಜಿ ಪ್ರಭಾವ, ಬೆಂಗಳೂರು; ಗಾಂಧೀಯಾನ ಪಬ್ಲಿಷಿಂಗ್ ಹೌಸ್.

46. ನಾಗರಾಜು.ಟಿ, (1999), ಸಾಮಾಜಿಕ ಚಳವಳಿಗಳು, ಮೈಸೂರು; ಚೇತನ ಬುಕ್‌ಹೌಸ್.

47. ಪಟ್ಟಾಭಿರಾಮ್.ಬಿ.ವಿ., (2007), ನಾಯಕತ್ವ ಲಕ್ಷಣ ಯಶಸ್ಸಿನ ಮೊದಲ ಸೋಪಾನ, ಹುಬ್ಬಳ್ಳಿ; ಸಾಹಿತ್ಯ ಪ್ರಕಾಶನ.

48. ಪಾರ್ಥಸಾರಥಿ.ಕೆ.ಎಸ್, (2011), ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಬೆಂಗಳೂರು;ನವಕರ್ನಾಟಕ ಪ್ರಕಾಶನ.

49. ಪುಟ್ಟಣ್ಣಯ್ಯ.ಕೆ.ಎಸ್.ನವರು ಶಾಸಕರಾಗಿ (1994 ರಿಂದ 1999), ಕ್ಷೇತ್ರಗಳ ಮಾಡಿದ ಸಾಧನೆಗಳು, ಮೈಸೂರು; ಪದ್ಮಶೇಖರ್ ಪ್ರಿಂಟರ್ಸ್.

50. ಪೂರ್ಣಿಮಾ.ಟಿ.ಸಿ, (2005), ಎಸ್.ಸಿ.ಮಲ್ಲಯ್ಯ, ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, ವಿಧಾನಸೌಧ ಬೆಂಗಳೂರು; ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ.

51. ಪ್ರಹ್ಲಾದರಾವ್.ಕೆ, (2005), ಸಿ.ಭೈರೇಗೌಡ, ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, ವಿಧಾನಸೌಧ ಬೆಂಗಳೂರು; ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ,

52. ಪ್ರಧಾನ್ ಗುರುದತ್ತ ಹಾಗೂ ಎನ್.ರಾಜ.ಸಿ.ಕೆ. (ಪ್ರ.ಸಂ.), (2010), ಕಾವೇರಿ ಜಲವಿವಾದಗಳ ನ್ಯಾಯಾಧೀಕರಣದ ವರದಿ ಮತ್ತು ತೀರ್ಪು, ಜ್ಞಾನ ಭಾರತೀ ಬೆಂಗಳೂರು; ಕುವೆಂಪು ಭಾಷಾ ಭಾರತೀ ಪ್ರಾಧಿಕಾರ ಕಲಾಗ್ರಾಮ.

53. ಬಸವರಾಜು.ಜಿ.ಪಿ., (1981), ಶಿವಮೊಗ್ಗ ರೈತ ಚಳವಳಿ, ಬೆಂಗಳೂರು; ಸಮುದಾಯ ಪ್ರಕಾಶನ.

54. ಬಾಳೇಕುಂದ್ರಿ.ಎಸ್.ಜಿ., (1992), ಕಾವೇರಿ ಜಲ, ಕರ್ನಾಟಕಕ್ಕೆ ಆಗಿರುವ ಅನ್ಯಾಯ ಮತ್ತು ದೊರಬೇಕಾದ ನ್ಯಾಯ, ಮಂಡ್ಯ; ಜಿಲ್ಲಾ ರೈತ ಸಂಘ ಪ್ರಕಟಣೆ.

55. ಮುಜಾಫರ್ ಅಸ್ಸಾದಿ, (2009), ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ-ರೈತ, ರೈತ ಹೋರಾಟ ಹಾಗೂ ಸಾಮಾಜಿಕ ಚಳವಳಿ, ಬೆಂಗಳೂರು; ಪ್ರಗತಿ ಗ್ರಾಫಿಕ್ಸ್.

56. ಮುದ್ದೇಗೌಡ.ಎಚ್.ಎಸ್., (2001), ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಸಮೀಕ್ಷೆ, ಮಂಡ್ಯ; ಬಯಲುನಾಡು.

57. ಮುದ್ದೇಗೌಡ.ಎಚ್.ಎಸ್, (1997), ಜೀವನಾಡಿ, ಮಂಡ್ಯ; ಹೆಬ್ಬಕವಾಡಿ ವೆಂಕಟೇಶ್ ತಾವರೆಗೆರೆ.

58. ಮೋಹನ್ ಕೃಷ್ಣ ರೈ.ಕೆ, (2004), ಪ್ರಭುತ್ವ ಮತ್ತು ಜನತೆ, ಹಂಪಿ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ.

59. ಮಂಡ್ಯ ಜಿಲ್ಲಾ ಜನಪದ ವೇದಿಕೆ, (2007), ಕಾವೇರಿ ವಿವಾದ ಕರ್ನಾಟಕಕ್ಕಾದ ಅನ್ಯಾಯವೇನು? ಪರಿಹಾರವೇನು? ಒಂದು ಚಾರಿತ್ರ್ಯಕ, ವೈಜ್ಞಾನಿಕ, ರಾಜಕೀಯ ವಿಶ್ಲೇಷಣೆ ಮಂಡ್ಯ;

60. ಮಂಡ್ಯ ಜಿಲ್ಲೆ, (2003), ಭಾರತದ ಗೆಜೆಟಿಯರ್, ಕರ್ನಾಟಕ ರಾಜ್ಯ ಕರ್ನಾಟಕ ಸರ್ಕಾರ, ಬೆಂಗಳೂರು, ರಾಷ್ಟ್ರೋತ್ಥಾನ ಮುದ್ರಣಾಲಯ.

61. ಮಂಡ್ಯ ಜಿಲ್ಲೆಯ ರಸ್ತೆಗಳ ಸಮಗ್ರ ಅಭಿವೃದ್ಧಿ ಯೋಜನೆ ಲೋಕೋಪಯೋಗಿ ಇಲಾಖೆ, (2004), ಕರ್ನಾಟಕ ಸರ್ಕಾರಿ.

62. ರಮೇಶ್.ಬಿ.ಕೆ, (ಮಾರ್ಚ್ 2007), ಕಾವೇರಿ ಸಚಿತ್ರ ಚರಿತೆ, ಬೆಂಗಳೂರು.

63. ರಾಗೌ ಹಾಗೂ ಬಿಳೀಗೌಡ.ಎಚ್, (2010), ಅಪರಂಜಿ, ಮಂಡ್ಯ;

64. ರಾಮಕೃಷ್ಣ.ಮ, (2005), ರೈತಮಿತ್ರ, ಜಿ.ಮಾದೇಗೌಡ, ಮಂಡ್ಯ; ಬಂಧು-ಮಿತ್ರ ಪ್ರಕಾಶನ.

65. ರಾಜೇಗೌಡ.ಹ.ಕ. ಸಿಂಗಾರ.ಕೆ. ಸಿಂಗಾರಿಗೌಡ, (1988), ಮಂಡ್ಯ, ಕೆ.ಸಿಂಗಾರಿಗೌಡ ಅಭಿನಂದನ ಸಮಿತಿ.

66. ರಾಮೇಗೌಡ.ಎನ್.ಎಸ್. ಹಾಗೂ ಬಿಳಿಗೌಡ.ಹೆಚ್, (1987), ಭಾರತೀ, ಮಂಡ್ಯ; ಭಾರತೀ ಎಜುಕೇಷನ್ ಟ್ರಸ್ಟ್ (ರಿ).

67. ರಾಮಮನೋಹರ ಲೋಹಿಯ, ಅನುವಾದ ನಾರಾಯಣಸ್ವಾಮಿ.ಜ.ಹೊ, (2000), ಭಾರತದ ರೈತ ಮತ್ತು ಇತರ ಲೇಖನಗಳು, ಮಂಡ್ಯ; ನೆಲಮನೆ ಪ್ರಕಾಶನ.

68. ರಾಗೌ ಮತ್ತು ಇತರರು, (2012). ಶಿಕ್ಷಣ ಭಾರತೀ ಮಂಡ್ಯ; ಭಾರತೀ ಎಜುಕೇಷನ್ ಟ್ರಸ್ಟ್ (ರಿ).

69. ರಾಜಶೇಖರ.ಜಿ., (1980), ಕಾಗೋಡು ಸತ್ಯಾಗ್ರಹ, ಸಾಗರ; ಅಕ್ಷರ ಪ್ರಕಾಶನ.

70. ರಾಮಚಂದ್ರೇಗೌಡ.ಹಿ.ಶಿ., (2010), ರೈತ ಹೋರಾಟ ಸಾಹಿತ್ಯ, ಮೈಸೂರು; ದಾರಿದೀಪ ಪ್ರಕಾಶನ.

71. ರಾಮಚಂದ್ರೇಗೌಡ.ಹಿ.ಶಿ. (2010), ರೈತ ಚಳುವಳಿ ಸುಮ್ಮನೆ, ಮೈಸೂರು; ದಾರಿದೀಪ ಪ್ರಕಾಶನ.

72. ರಾಮಕೃಷ್ಣ.ಮ, (2014). ಶೋಧ ಭಾರತಿ, ಮಂಡ್ಯ; ಭಾರತೀ ಕಾಲೇಜು,

73. ರಂಗಸ್ವಾಮಿ.ಎ, (2011), ಕರ್ನಾಟಕ ರೈತ ಚಳುವಳಿ, ಮೈಸೂರು; ಮಾನಸಗಂಗೋತ್ರಿ, ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

74. ರಂಗರಾಜ ವನದುರ್ಗ (ಸಂ.), (2006), ಕನ್ನಡ ಮತ್ತು ಜನಪರ ಚಳುವಳಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು; ಕನ್ನಡ ಭವನ.

75. ಲಿಂಗಯ್ಯ.ಡಿ., (1995), ಶಿವಪುರ ಧ್ವಜಸತ್ಯಾಗ್ರಹ, ಬೆಂಗಳೂರು; ವೈಶಾಖ ಪ್ರಕಾಶನ.

76. ಲಿಂಗಯ್ಯ.ಡಿ, (2011), ಶಿವಪುರ ಧ್ವಜಸತ್ಯಾಗ್ರಹ, ಬೆಂಗಳೂರು; ಗೋಧೂಳಿ ಪ್ರಕಾಶನ.

77. ಲಿಂಗಯ್ಯ.ಡಿ, (1998), ಸತ್ಯಾಗ್ರಹಿಗಳ ನೆನಪುಗಳು, ಬೆಂಗಳೂರು; ದಿನಕರ ಪ್ರಕಾಶನ.

78. ವಿಜಯ ಪೂಣಚ್ಚ ತಂಬಂಡ ಹಾಗೂ ಚಿನ್ನಸ್ವಾಮಿ ಸೋಸಲೆ.ಎನ್. (ಸಂ.ಸಂ.), (2010), ಸಮಕಾಲೀನ ಕರ್ನಾಟಕ ಚರಿತ್ರೆ ವಿವಿಧ ಆಯಾಮಗಳು, ಹಂಪಿ; ಪ್ರಸಾರಾಂಗ ಕ.ವಿ.ವಿ.

79. ವಿಜಯ್ ಪೂಣಚ್ಚ ತಂಬಂಡ, (1999), ರೈತ ಚಳವಳಿಗಳು, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ.

80. ವಿಜಯ್ ಪೂಣಚ್ಚ ತಂಬಂಡ, (1999), ರೈತ ಚಳವಳಿಗಳು, ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ–6, ಹಂಪಿ; ಕನ್ನಡ ವಿಶ್ವವಿದ್ಯಾನಿಲಯ ಪ್ರಸಾರಂಗ.

81. ವಿರೂಪಾಕ್ಷ ಪೂಜಾರಹಳ್ಳಿ, (1999), ಜಲಸಂಬಂಧಿ ಚಳವಳಿಗಳು, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ.

82. ವೀರಣ್ಣಗೌಡ.ಹೆಚ್.ಕೆ., (1974), ಬದುಕು ಮೆಲುಕು, ಮೈಸೂರು; ಪ್ರಬುದ್ಧ ಪ್ರಕಾಶನ.

83. ವೀರಪ್ಪ.ಜಿ.ಟಿ., (1995), ಪುಣ್ಯಕೋಟಿ, ಮದ್ದೂರು; 4ನೇ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ.

84. ವೀರಭದ್ರಪ್ಪ ಬಿಸ್ಲಳ್ಳಿ, (2008), ಪ್ರೊಫೆಸರ್ ಎಂ.ಡಿ.ಎನ್, ಮೈಸೂರು; ಅಭಿರುಚಿ ಪ್ರಕಾಶನ.

85. ವೆಂಕಟಕೃಷ್ಣ, ತೈಲೂರು, (1992), ಮಂಡ್ಯ; ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ.

86. ವೆಂಕಟರಾವ್.ಡಿ, (1977), ಭಾರತದ ರೈತ, ಬೆಂಗಳೂರು; ಸುನಿಲ್ ಪ್ರಕಾಶನ.

87. ಶಿವರಾಮು.ಎಸ್, (2011), ಮಂಡ್ಯ ಜಿಲ್ಲೆಯ ಜನಪರ ಚಳವಳಿಗಳು, ಬೆಂಗಳೂರು; ಮನೋಜ್ ಪಬ್ಲಿಕೇಷನ್.

88. ಶಿವರಾಮು.ಎಸ್, (2008), ಕೆ.ವಿ.ಶಂಕರಗೌಡ ಜೀವನ–ಸಾಧನೆ, ಮಂಡ್ಯ; ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ.

89. ಶ್ರೀನಿವಾಸ್.ಎಚ್., (2008), ಜಾಗತೀಕರಣ ಮತ್ತು ಕೃಷಿ, ಮಂಡ್ಯ; ಪಾಂಡವಪುರ ತಾಲ್ಲೂಕು, ಕನ್ನಡ ಸಾಹಿತ್ಯ ಪರಿಷತ್.

90. ಶೇಷನಾರಾಯಣ, (2007), ಕಾವೇರಿ (ಒಂದು ಚಿಮ್ಮು : ಒಂದು ಹೊರಳು), ಬೆಂಗಳೂರು, ಭಾಗ್ಯಲಕ್ಷ್ಮಿ ಪ್ರಕಾಶನ.

91. ಶಂಕರಗೌಡ.ಕೆ.ವಿ. (ಪ್ರ.ಸಂ.), (1989), ಸಾಹಸಯಾತ್ರಿ (ಪಿ.ಎನ್.ಜವರಪ್ಪಗೌಡರ ಅಭಿನಂದನ ಗ್ರಂಥ) ಮಂಡ್ಯ; ಪಿ.ಎನ್.ಜವರಪ್ಪಗೌಡ ಅಭಿನಂದನ ಸಮಿತಿ.

92. ಶಂಕರಗೌಡ.ಕೆ.ವಿ., (1990), ರೈತಾಪಿ ಜನರ ಸಮಸ್ಯೆಗಳು ಮತ್ತು ಪರಿಹಾರ, ಮಂಡ್ಯ; ಮಂಡ್ಯ ಪ್ರೆಸ್.

93. ಸವಿತ.ಬಿ.ಸಿ., (2017), ಹಸಿರುಸಾಲು ಬಾರುಕೋಲು, ರೈತ ಹೋರಾಟಗಾರ ಪ್ರೊ. ಎಂ.ಡಿ.ನಂಜುಂಡಸ್ವಾಮಿರವರ ಚಿಂತನೆ ಹಾಗೂ ಹೋರಾಟಗಳ ವಿಶ್ಲೇಷಣೆ, ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

94. ಸಿದ್ದರಾಜು.ಸಿ.ಆಲಕೆರೆ, (2012), ಕಾವೇರಿ ಚಳವಳಿ, ಮಂಡ್ಯ; ಚನ್ನಟು ಪ್ರಕಾಶನ,.

95. ಸಂದೇಶ್.ಎಲ್, (2003), ಕಾವೇರಿ ಕದನ, ಮಂಡ್ಯ; ಪಾಪು ಪ್ರಕಾಶನ.

96. ಹಾರೋಗದ್ದೆ ಉಷಾ ರಮೇಶ್‌ನಾಯಕ್ (ಸಂ.), (2009), ರೈತಧ್ವನಿ ಎನ್.ಡಿ.ಸುಂದರೇಶ್ ಬೆಂಗಳೂರು; ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ.

## ಆ. ಲೇಖನಗಳು

1) ಕೊಳಲು ವಾರಪತ್ರಿಕೆ (2015), ಬಯಲುಸೀಮೆಯ ಗಾಂಧಿ, ಮಂಡ್ಯ, ಕೊಳಲು ವಾರಪತ್ರಿಕೆ ಸಂಪಾಕರು ಹಾಗೂ ಪ್ರಕಟಣೆ.

2) ರಾಮಕೃಷ್ಣ.ಮ, (2016), ಅಭಿವೃದ್ಧಿಯ ಹರಿಕಾರ ಮಂಡ್ಯ, ಬಂಧುಮಿತ್ರ ಪ್ರಕಾಶನ.

3) ಕೆಂಪಮ್ಮ ಕಾರ್ಕಹಳ್ಳಿ, (2017), ಮರೆಯಲಾಗದ ಮಾಣಿಕ್ಯ, ಮಂಡ್ಯ, ಶೋಧಭಾರತಿ ಸಂಚಿಕೆ.

## ಇ. ಪಿಎಚ್.ಡಿ. ಹಾಗೂ ಎಂ.ಫಿಲ್., ಪ್ರಬಂಧಗಳು (ಪ್ರಕಟಿತ ಹಾಗೂ ಅಪ್ರಕಟಿತ)

1. ವೆಂಕಟೇಗೌಡ, (2012), ಮಂಡ್ಯ ಜಿಲ್ಲೆಯ ರೈತ ಚಳುವಳಿಯಲ್ಲಿ ಮಾದರಿ ನಾಯಕತ್ವ ಜಿ.ಮಾದೇಗೌಡರ ನಾಯಕತ್ವ, ಒಂದು ಅಧ್ಯಯನ (ಅಪ್ರಕಟಿತ), ಕರ್ನಾಟಕ ರಾಜ್ಯ ಮುಕ್ತವಿಶ್ವವಿದ್ಯಾನಿಲಯ, ಮೈಸೂರು.

2. ಕುಶಾಲಪ್ಪ.ಎಚ್.ಕೆ., (2006), ಹಾಸನ ಜಿಲ್ಲಾ ರೈತ ಸಂಘಟನೆ ಮತ್ತು ರಾಜಕೀಯ : ಒಂದು ಅಧ್ಯಯನ, (ಅಪ್ರಕಟಿತ), ಮೈಸೂರು; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

3. ನುಚ್ಚೆ, ಬಿ.ಎಂ., (2006), ಬಿ.ಎಂ. ಪಾಟೀಲರ ರಾಜಕೀಯ ನಾಯಕತ್ವ : ಅವರ ರಾಜಕೀಯ ಕೊಡುಗೆಗಳ ಒಂದು ಚಿತ್ರಣ (ಪ್ರಕಟಿತ), ಮೈಸೂರು; ಕರ್ನಾಟಕ ಮುಕ್ತ ವಿಶ್ವವಿದ್ಯಾನಿಲಯ.

4. ಯೋಗರಾಜು. ಎಸ್.ಡಿ., (2010), ಮಹಿಳಾ ಸಬಲೀಕರಣ ಮತ್ತು ಪಂಚಾಯ್ತಿ ವ್ಯವಸ್ಥೆ ಮಂಡ್ಯ ಜಿಲ್ಲಾ ಪಂಚಾಯ್ತಿ ಒಂದು ಅಧ್ಯಯನ (ಪ್ರಕಟಿತ), ಮೈಸೂರು; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ.

5. ಯೋಗಾನರಸಿಂಹಚಾರಿ.ಕೆ., (2012), ದೂರಶಿಕ್ಷಣದ ಪರಿಣಾಮಗಳು–ವಿಶೇಷವಾಗಿ ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ (ಪ್ರಕಟಿತ), ಮೈಸೂರು; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

6. ವರದರಾಜು.ಎಚ್.ಎಮ್, (2010) ಕಾವೇರಿ ಜಲವಿವಾದ–ಒಂದು ಅಧ್ಯಯನ (ಪ್ರಕಟಿತ), ಮೈಸೂರು; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

7. ಶಿವಾನಂದ.ಕೆ.ಆರ್., (2010) ಶ್ರೀ ಎಚ್.ಕೆ.ವೀರಣ್ಣಗೌಡರ ರಾಜಕೀಯ ಪಾತ್ರ : ಒಂದು ಅಧ್ಯಯನ (ಪ್ರಕಟಿತ), ಮೈಸೂರು; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

8. ಶಿವರಾಮು.ಎಸ್., (2002), ಆಧುನಿಕ ಮಂಡ್ಯ ರೂವಾರಿ ಕೆ.ವಿ.ಶಂಕರಗೌಡ (ಪ್ರಕಟಿತ), ಮೈಸೂರು; ಮೈಸೂರು ವಿಶ್ವವಿದ್ಯಾನಿಲಯ.

9. ಸುರೇಶ್.ಕೆ.ಜೆ., (1999), ಮಂಡ್ಯ ಜಿಲ್ಲಾ ರೈತ ಚಳವಳಿ : ಒಂದು ಅಧ್ಯಯನ (1980 ರಿಂದ 1955 ರವರೆಗೆ) ಮೈಸೂರು; ಮೈಸೂರು ವಿಶ್ವವಿದ್ಯಾನಿಲಯ.

10. ಸುಮತಿ.ಎನ್.ಸಿ, (2010), ಕರ್ನಾಟಕದಲ್ಲಿ ರಾಜಕೀಯ ನಾಯಕತ್ವ : ಎಸ್.ಎಂ.ಕೃಷ್ಣ ಒಂದು ಅಧ್ಯಯನ (ಪ್ರಕಟಿತ), ಮೈಸೂರು; ಮೈಸೂರು ವಿಶ್ವವಿದ್ಯಾನಿಲಯ.

11. ಹರೀಶ್.ಪಿ., (2010) ಕರ್ನಾಟಕದಲ್ಲಿ ರಾಜಕೀಯ ನಾಯಕತ್ವ : ಜೆ.ಹೆಚ್.ಪಟೇಲ್ ಒಂದು ಅಧ್ಯಯನ (ಅಪ್ರಕಟಿತ), ಮೈಸೂರು; ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ.

## ಈ. ರೈತ ಸಂಘದ ಪ್ರಕಟಣೆಗಳು

1. ಕರ್ನಾಟಕ ರೈತರ ಹೋರಾಟದ ಆಶೋತ್ತರಗಳು, ಕರ್ನಾಟಕ ರಾಜ್ಯ ರೈತಸಂಘ, ಮಂಡ್ಯ, (1984).

2. ದಕ್ಷಿಣ ಭಾರತ ಸಣ್ಣ ಬೆಳೆಗಾರರ ಒಕ್ಕೂಟದ ಕರಪತ್ರಗಳು.

3. ರಾಜ್ಯದ ವಿವಿಧ ಜಿಲ್ಲಾ ರೈತ ಸಂಘಗಳು ಹೊರಡಿಸಿದ ಕರಪತ್ರಗಳು, (1980 ರಿಂದ 1998 ರವರೆಗೆ)

7. ರೈತ ಹೋರಾಟ ಏಕೆ, ಮಂಡ್ಯ ಜಿಲ್ಲಾ ರೈತ ಸಂಘದ ಪ್ರಕಟಣೆ (1984)

8. ರೈತರ ಹೋರಾಟಗಳ ಆಶೋೇಶತ್ತರಗಳು : ಕರ್ನಾಟಕ ರಾಜ್ಯ ರೈತ ಸಂಘದ ಪ್ರಕಟಣೆ, (1983)

9. ಹೋರಾಟದ ಹಾಡುಗಳು, ಮಂಡ್ಯ ಜಿಲ್ಲಾ ರೈತ ಸಂಘದ ಪ್ರಕಟಣೆ, (1984).

**ಉ. ಕನ್ನಡ ದಿನ ಪತ್ರಿಕೆಗಳು**

1. ಕನ್ನಡ ಪ್ರಭ
2. ಪೌರವಾಣಿ
3. ಪ್ರಜಾವಾಣಿ
4. ಮೈಸೂರು ಮಿತ್ರ
5. ಸಂಯುಕ್ತ ಕರ್ನಾಟಕ
6. ಆಂದೋಲನ
7. ಈ ಸಂಜೆ
8. ಈ ನಾಡು ಕರ್ನಾಟಕ
9. ಉದಯಕಾಲ
10. ಉದಯವಾಣಿ
11. ಕ್ರಾಂತಿರಂಗ
12. ಬಯಲುಸೀಮೆ
13. ಮಂಡ್ಯ ಮಿತ್ರ
14. ಮಂಡ್ಯ ಸುದ್ಧಿ
15. ವಿಜಯಕರ್ನಾಟಕ
16. ವಿಶ್ವವಾಣಿ
17. ಹಾಯ್ ಬೆಂಗಳೂರು
18. ಹೊಸ ದಿಗಂತ

**ಊ. ಇಂಗ್ಲೀಷ್ ಭಾಷೆಗಳ ದಿನಪತ್ರಿಕೆಗಳು**

1. ಇಂಡಿಯಾ ಟುಡೇ
2. ಇಂಡಿಯನ್ ಎಕ್ಸ್‌ಪ್ರೆಸ್
3. ಟೈಮ್ಸ್ ಆಫ್ ಇಂಡಿಯಾ
4. ಡೆಕ್ಕನ್ ಹೆರಾಲ್ಡ್
5. ದ ಟೈಮ್ಸ್ ಆಫ್ ಇಂಡಿಯಾ
6. ದ ಬೆಂಗಳೂರು ಏಜ್
7. ದ ಹಿಂದೂ
8. ದ ಹಿಂದೂಸ್ಥಾನ್ ಟೈಮ್ಸ್
9. ನವಭಾರತ ಟೈಮ್ಸ್

**ಋ. ನಿಯತಕಾಲಿಕೆಗಳು**

1. ಅಗ್ನಿ
2. ಆಂದೋಲನ
3. ತರಂಗ
4. ದಿಕ್ಸೂಚಿ
5. ನಾಡ–ನಾಡಿ
6. ಪ್ರಜಾಪ್ರಭುತ್ವ
7. ರೈತ ಧ್ವನಿ
8. ರೈತ ಹೋರಾಟ
9. ಲಂಕೇಶ್ ಪತ್ರಿಕೆ
10. ವಾರಪತ್ರಿಕೆ
11. ವಾರದ ರಾಜಕೀಯ
12. ಸಂಕ್ರಮಣ
13. ಸಂವಾದ
14. ಸುಧಾ
15. ಸಂಮೃದ್ದಿ
16. ಸಹಕಾರ
17. ಹೊಸತು
18. ಗಾಂಧಿಭವನ ವಾರ್ತಾ
19. ಕೊಳಲು

## ಎ. ಸಂದರ್ಶನ

1. ಜಿ.ಮಾದೇಗೌಡರು, ಮಂಡ್ಯ
2. ಶ್ರೀಮತಿ ಪದ್ಮ ಜಿ.ಮಾದೇಗೌಡರು, ಮಂಡ್ಯ.
3. ಮಧು ಜಿ. ಮಾದೇಗೌಡ, ಮಂಡ್ಯ.
4. ಡಾ. ಹೆಚ್.ಡಿ.ಚೌಡಯ್ಯ, (ರೈತ ಹೋರಾಟಗಾರ), ಮಂಡ್ಯ.
5. ಡಾ. ರಾಮಕೃಷ್ಣ.ಮ, ಮಂಡ್ಯ.
6. ಪ್ರೋ. ಬಿಳಿಯಯ್ಯ, (ದಲಿತ ಹೋರಾಟಗಾರ), ದೊಡ್ಡರಸಿನಕೆರೆ.
7. ಪ್ರೋ. ಮಾಯೀಗೌಡ, ಭಾರತೀ ನಗರ.
8. ಪ್ರೋ. ಬೋರೇಗೌಡ, ಬಿದರಹೊಸಹಳ್ಳಿ.
9. ಪ್ರೋ. ನಾಗಮಾದಯ್ಯ, ಕಾಳಮುದ್ದನದೊಡ್ಡಿ.
10. ಎಂ.ಬಿ.ಶ್ರೀನಿವಾಸ್, (ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕರು), ಮೇನಾಗರ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ.
11. ಲಿಂಗಣ್ಣ ಬಂಧೂಕಾರ್, (ಗಾಂಧಿವಾದಿ), ಮಂಡ್ಯ.
12. ನಂಜೇಗೌಡ, (ರೈತ ಮುಖಂಡ), ಬೊಪ್ಪಸಮುದ್ರ.
13. ನಂದೀನಿ ಜಯರಾಮ್ (ರೈತ ಹೋರಾಟಗಾತಿ), ಸೂನಗನಹಳ್ಳಿ.
14. ವೆಂಕಟಗಿರಿ, (ದಲಿತ ಹೋರಾಟಗಾರ), ಕೀಲಾರ.
15. ಕೆಂಪಯ್ಯ, (ಜಿ.ಮಾದೇಗೌಡರ ಒಡನಾಡಿ), ಗುರುದೇವರಹಳ್ಳಿ.

# ಭಾವಚಿತ್ರಗಳು



ಜಿ.ಮಾದೇಗೌಡರು



ಜಿ.ಮಾದೇಗೌಡರೊಂದಿಗೆ ಸಂದರ್ಶನ



ಶ್ರೀಮತಿ ಪದ್ಮ ಜಿ.ಮಾದೇಗೌಡರೊಂದಿಗೆ ಸಂದರ್ಶನ



ಮಧು ಜಿ.ಮಾದೇಗೌಡರೊಂದಿಗೆ ಸಂದರ್ಶನ



ಜಿ.ಮಾದೇಗೌಡರ ಒಡನಾಡಿಯಾದ ಡಾ. ಹೆಚ್.ಡಿ.ಚೌಡಯ್ಯರೊಂದಿಗೆ ಸಂದರ್ಶನ



ಎಂ.ಬಿ.ಶ್ರೀನಿವಾಸ್ (ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕರು) ಇವರೊಂದಿಗೆ ಸಂದರ್ಶನ



ಕನ್ನಡ ಪ್ರಾಧ್ಯಾಪಕರಾದ ಡಾ. ರಾಮಕೃಷ್ಣ.ಮ.ರೊಂದಿಗೆ ಸಂದರ್ಶನ



ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಪ್ರೊ. ಬಳಿಗೌಡರೊಂದಿಗೆ ಸಂದರ್ಶನ



ಪ್ರೊ. ಮಾಯಿಗೌಡರೊಂದಿಗೆ ಸಂದರ್ಶನ



ಪ್ರೊ. ನಾಗಮಾದಯ್ಯರೊಂದಿಗೆ ಸಂದರ್ಶನ



ಜಿ.ಮಾದೇಗೌಡರ ಕುಟುಂಬ



ಜಿ.ಮಾದೇಗೌಡರು ಬಾಲ್ಯದಲ್ಲಿ ಆಡಿ ಬೆಳೆದ ಮನೆ



ಜಿ.ಮಾದೇಗೌಡರವರಿಂದ 50ನೇ ವರ್ಷ ಸ್ವಾತಂತ್ರ್ಯ ನೆನಪಿಗಾಗಿ ಕಾಳಮುದ್ದನದೊಡ್ಡಿಯಲ್ಲಿ ಗಾಂಧೀಭವನ ಸ್ಥಾಪನೆ



ಕೆಂಗಲ್ ಹನುಮಂತಯ್ಯ ದಂಪತಿಗಳೊಂದಿಗೆ ಜಿ.ಮಾದೇಗೌಡರು



ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿಯೊಂದಿಗೆ

ಜಿ.ಮಾದೇಗೌಡರು



ರೈತ ಹೋರಾಟಗಾರ ನಂಜುಂಡಸ್ವಾಮಿಯೊಂದಿಗೆ
ಜಿ.ಮಾದೇಗೌಡರು



ಗೋಕಾಕ್ ಚಳುವಳಿಯ ಸಂದರ್ಭದಲ್ಲಿ ಕೆಂಗಲ್ ಹನುಮಂತಯ್ಯನವರ ಜೊತೆ
ಜಿ.ಮಾದೇಗೌಡರು



ಸಮಕಾಲೀನರೊಂದಿಗೆ ಜಿ.ಮಾದೇಗೌಡರು



ವರುಣಾ ನಾಲಾ ಚಳುವಳಿಯ ಪೂರ್ವ ತಯಾರಿ ಸಭೆಯಲ್ಲಿ ಜಿ.ಮಾದೇಗೌಡರು



ಕಾವೇರಿ ಹಿತರಕ್ಷಣಾ ಸಮಿತಿ ಸಭೆಯಲ್ಲಿ ಜಿ.ಮಾದೇಗೌಡರು



ಕಾವೇರಿ ಚಳುವಳಿಗೆ ಸಂಬಂಧಪಟ್ಟಂತೆ ಸರ್ವ ಪಕ್ಷದ ಸಭೆಯಲ್ಲಿ
ಜಿ.ಮಾದೇಗೌಡರು



ಕೃಷ್ಣ ಕಾವೇರಿ ಸಮನ್ವಯ ಸಮಿತಿ ಮತ್ತು ಕಾವೇರಿ ಜಲವಿವಾದದ ವೇದಿಕೆಯಲ್ಲಿ
ಜಿ.ಮಾದೇಗೌಡರು



ಕಾವೇರಿ ಚಳುವಳಿ ಹೋರಾಟದ ರಸ್ತೆ ನಡಿಗೆಯಲ್ಲಿ
ಜಿ.ಮಾದೇಗೌಡರು



ಕಾವೇರಿ ನೀರಿಗಾಗಿ ಖಾಲಿ ಬಿಂದಿಗೆ ಚಳುವಳಿ



ಧರಣಿ ಮುಷ್ಕರದಲ್ಲಿ ಜಿ.ಮಾದೇಗೌಡರು



ಕಾವೇರಿ ನೀರಿಗಾಗಿ ಉಪವಾಸ ಸತ್ಯಗ್ರಹ ನಡೆಸುತ್ತಿರುವ
ಜಿ.ಮಾದೇಗೌಡರು



ಕಾವೇರಿ ನ್ಯಾಯಮಂಡಳಿ ತೀರ್ಪಿನ ವಿರೋಧಿಸಿ ಪ್ರತಿಭಟನಾ ಧರಣೆಯಲ್ಲಿ ಜಿ.ಮಾದೇಗೌಡರು



ಕಾವೇರಿ ನದಿ ನೀರಿನ ವಿಚಾರವಾಗಿ ಡಿ.ಸಿ. ಕಛೇರಿಗೆ ಮುತ್ತಿಗೆ ಹಾಕಿರುವ ಸಂದರ್ಭದಲ್ಲಿ ಜಿ.ಮಾದೇಗೌಡರು



ಕಾವೇರಿ ನದಿ ನೀರಿನ ವಿಚಾರವಾಗಿ ಉಚ್ಛ ನ್ಯಾಯಾಲಯದ ತೀರ್ಪನ್ನು ವಿರೋಧಿಸಿ ಡಿ.ಸಿ. ಕಛೇರಿಗೆ ಮುತ್ತಿಗೆ ಹಾಕಿರುವ ಸಂದರ್ಭದಲ್ಲಿ ಜಿ.ಮಾದೇಗೌಡರು



ಪ್ರಗತಿಪರ ಮುಸ್ಲಿಂ ಯುವ ವೇದಿಕೆಯಲ್ಲಿ ಜಿ.ಮಾದೇಗೌಡರು



ಸಾರ್ವಜನಿಕ ಸಭೆಯಲ್ಲಿ ಜಿ.ಮಾದೇಗೌಡರು



ರಸ್ತೆ ತಡೆ ಚಳುವಳಿಯಲ್ಲಿ ಜಿ.ಮಾದೇಗೌಡರು



ಕಬ್ಬಿನ ಬಾಕಿ ಹಣಕ್ಕಾಗಿ ರೈತ ಹೋರಾಟದಲ್ಲಿ ಜಿ.ಮಾದೇಗೌಡರು



ರೈತರ ಬೇಡಿಕೆ ಈಡೇರಿಕೆಗಾಗಿ ರೈತ ಮುಖಂಡರೊಂದಿಗೆ
ಜಿ.ಮಾದೇಗೌಡರು



ರೈತರ ಬೆಳೆಗೆ ಬೆಂಬಲ ಬೆಲೆಗಾಗಿ ಜಿ.ಮಾದೇಗೌಡರ ಹೋರಾಟ



ರಸಗೊಬ್ಬರ ಬೆಲೆ ಏರಿಕೆ ಖಂಡಿಸಿ ಮೆರವಣಿಗೆಯಲ್ಲಿ ಜಿ.ಮಾದೇಗೌಡರು



ಕ್ಷೇತ್ರ ದರ್ಶನದಲ್ಲಿ ಜಿ.ಮಾದೇಗೌಡರು



ಗ್ರಾಮಾಭಿವೃದ್ಧಿಗಾಗಿ ಗ್ರಾಮಗಳ ವೀಕ್ಷಣೆ ಮಾಡುತ್ತಿರುವ
ಜಿ.ಮಾದೇಗೌಡರು



ಹೈನುಗಾರಿಕೆ ಸಮ್ಮೇಳನದಲ್ಲಿ ಭಾಗವಹಿಸಲು ತೆರಳುತ್ತಿರುವ ಜಿ.ಮಾದೇಗೌಡರು




ಹೈನುಗಾರಿಕೆ ಸಮ್ಮೇಳನದಲ್ಲಿ ಭಾಗವಹಿಸಿದ ಎಂ.ಸಿ.ಚನ್ನಯ್ಯನವರಿಗೆ
ಸನ್ಮಾನ ಮಾಡುತ್ತಿರುವ ಜಿ.ಮಾದೇಗೌಡರು



ಜಿಲ್ಲಾ ಮಟ್ಟದ ಹೈನುಗಾರಿಕೆ ಮತ್ತು ಕೋಳಿಸಾಗಾಣಿಕಾ ಸಮ್ಮೇಳನದ
ಸಭೆಯಲ್ಲಿ ಜಿ.ಮಾದೇಗೌಡರು



ಉಚಿತ ಆಯುರ್ವೇದ ತಪಾಸಣಾ ಶಿಬಿರದಲ್ಲಿ ಮಾತನಾಡುತ್ತಿರುವ
ಜಿ.ಮಾದೇಗೌಡರು



ಬಾಲಗಂಗಾಧರನಾಥಸ್ವಾಮಿಜಿಯವರಿಂದ ಮಂಡ್ಯ ಗಾಂಧಿಭವನ ಉದ್ಘಾಟನೆಯಲ್ಲಿ
ಜಿ.ಮಾದೇಗೌಡರು



ಗಾಂಧಿಭವನದಲ್ಲಿ ಗಾಂಧೀಜಿಯವರ ಭಾವಚಿತ್ರವನ್ನು ವೀಕ್ಷಿಸುತ್ತಿರುವ
ಜಿ.ಮಾದೇಗೌಡರು



ಗಣ್ಯರೊಂದಿಗೆ ಗಾಂಧಿಭವನದಲ್ಲಿ ಹಾಕಿರುವ ಗಾಂಧೀಜೀ ಚಿತ್ರಗಳ ವಿಕ್ಷಣೆಯಲ್ಲಿ
ಜಿ.ಮಾದೇಗೌಡರು



ಬಾಲಗಂಗಾಧರನಾಥಸ್ವಾಮಿಜಿಯವರಿಂದ ಮಂಡ್ಯ ಗಾಂಧಿಭವನ ದೀಪಬೆಳಕುವ ಕಾರ್ಯಕ್ರಮದಲ್ಲಿ ಜಿ.ಮಾದೇಗೌಡರು



ಬಾಲಗಂಗಾಧರನಾಥಸ್ವಾಮಿಜಿಯವರಿಂದ ಮಂಡ್ಯ ಗಾಂಧಿಭವನ ಉದ್ಘಾಟನೆಯಲ್ಲಿ ಜಿ.ಮಾದೇಗೌಡರು



ಹನುಮಂತ ನಗರದಲ್ಲಿ 101 ಜೋಡಿಗೆ ಸರಳ ವಿವಾಹ ಏರ್ಪಡಿಸಿದ ಸಂದರ್ಭದಲ್ಲಿ ಜಿ.ಮಾದೇಗೌಡರು



ರಕ್ತದಾನ ಶಿಬಿರ ಕಾರ್ಯಕ್ರಮ ನಡೆಸಿದ ಜಿ.ಮಾದೇಗೌಡರು



ಅರಣ್ಯ ಸಚಿವರಾಗಿದ್ದಾಗ ಸಸಿ ನಡುವ ಕಾರ್ಯಕ್ರಮದಲ್ಲಿ ಜಿ.ಮಾದೇಗೌಡರು



ಬಡ ಮಕ್ಕಳ ಶೈಕ್ಷಣಿಕ ನಿಧಿಗಾಗಿ ನಾಟಕ ಏರ್ಪಡಿಸಿದ ಸಂದರ್ಭದಲ್ಲಿ
ಲಿಂಗಣ್ಣ ಬಂಡೂಕಾರ್ ಮತ್ತು ಹೆಚ್.ಎಸ್.ದೊರೆಸ್ವಾಮಿಯವರೊಂದಿಗೆ
ಜಿ.ಮಾದೇಗೌಡರು



ಗುರುದೇವರಹಳ್ಳಿಯ ತಮ್ಮ ಸ್ವಂತ ಮನೆಯನ್ನೇ ಸಾರ್ವಜನಿಕ ಆಸ್ಪತ್ರೆಗಾಗಿ ನೀಡಿರುವ ಜಿ.ಮಾದೇಗೌಡರು



ಮಹಾಲಿಂಗಂರವರು ಜಿ.ಮಾದೇಗೌಡರಿಗೆ ಗಾಂಧಿಪುದವಟ್ಟು ಪ್ರಶಸ್ತಿ ನೀಡುತ್ತಿರುವ ದೃಶ್ಯ